# ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಡಾಕ್ಟರ್ ಆಫ್ ಫಿಲಾಸಫಿ
(ಪಿಎಚ್.ಡಿ.) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ಎಂ.ರಾಜಶೇಖರಪ್ಪ**

ಮಾರ್ಗದರ್ಶಕರು

**ಡಾ.ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು






**ಬುಡಕಟ್ಟು ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ - ೫೮೩ ೨೭೬**

**೨೦೦೯**

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ"** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಬುಡಕಟ್ಟು ಅಧ್ಯಯನ ವಿಭಾಗದ ಪಿಎಚ್.ಡಿ. ಪದವಿಗಾಗಿ **ಎಂ.ರಾಜಶೇಖರಪ್ಪ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
**ದಿನಾಂಕ :**

**ಡಾ.ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

**"ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ"** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು **ಡಾ. ಮಂಜುನಾಥ ಬೇವಿನಕಟ್ಟಿ**, ಪ್ರಾಧ್ಯಾಪಕರು, ಜಾನಪದ ಅಧ್ಯಯನ ವಿಭಾಗ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**

**ದಿನಾಂಕ :**

**(ಎಂ.ರಾಜಶೇಖರಪ್ಪ)**
ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

• • •

## ಕೃತಜ್ಞತೆಗಳು

ಮಹಾಪ್ರಬಂಧ ಸಿದ್ಧಪಡಿಸಲು ಸೂಕ್ತ ಸಲಹೆ ಮತ್ತು ಮಾರ್ಗದರ್ಶನ ನೀಡಿದ ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಮಂಜುನಾಥ ಬೇವಿನಕಟ್ಟಿ, ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ. ಮಹಾಪ್ರಬಂಧ ಅಧ್ಯಯನಕ್ಕೆ ಪ್ರತ್ಯೇಕ್ಷವಾಗಿ ಮತ್ತು ಪರೋಕ್ಷವಾಗಿ ನೆರವು ನೀಡಿದ ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಗಂಗಾಧರ ದೈವಜ್ಞ, ವಿಭಾಗದ ಪ್ರಾಧ್ಯಾಪಕರಾದ ಡಾ.ಹಿ.ಚಿ.ಬೋರಲಿಂಗಯ್ಯ, ಡಾ.ಕೆ.ಎಂ.ಮೇತ್ರಿ, ಡಾ. ಚೆಲುವರಾಜು, ಡಾ.ಎ.ಎಸ್. ಪ್ರಭಾಕರ್ ಅವರ ಸಹಕಾರವನ್ನು ನೆನೆಯುತ್ತೇನೆ. ನನ್ನ ಸಂಶೋಧನೆಯನ್ನು ನಡೆಸಲು ಸೂಕ್ತ ವಾತಾವರಣವನ್ನು ಕಲ್ಪಿಸಿದ ಮಾನ್ಯ ಕುಲಪತಿಗಳಿಗೆ, ಮಾನ್ಯ ಕುಲಸಚಿವರಿಗೆ, ಅಧ್ಯಯನಾಂಗದ ನಿರ್ದೇಶಕರಿಗೆ, ಗ್ರಂಥಪಾಲಕರಿಗೆ ಅಭಾರಿಯಾಗಿದ್ದೇನೆ. ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಮತ್ತು ಮಾಹಿತಿಯನ್ನು ಒದಗಿಸಿದ ಸಜ್ಜನ ಗಾಣಿಗ ಸಮುದಾಯದವರೆಲ್ಲರಿಗೂ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಎಸ್.ಜೆ.ಎಂ.ವಿ. ವಿದ್ಯಾಸಂಸ್ಥೆಯ ಅಧ್ಯಕ್ಷರಾದ ಶ್ರೀ.ಶ್ರೀ.ಶ್ರೀ. ಶಿವಮೂರ್ತಿ ಮುರುಘ ಶರಣರಿಗೂ, ಆಡಳಿತಾಧಿಕಾರಿ ಡಾ.ಮಲ್ಲಿಕಾರ್ಜುನಪ್ಪನವರಿಗೂ ಹಾಗೂ ಎಸ್.ಜೆ.ಎಂ.ವಿ. ಮಹಾಂತ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಧಾರವಾಡ, ಇದರ ಪ್ರಾಚಾರ್ಯರಾದ ಪ್ರೊ.ಸಿ.ವಿ.ಸಾಲೀಮಠರವರಿಗೂ, ನಮ್ಮ ಮಹಾವಿದ್ಯಾಲಯದ ಸಹೋದ್ಯೋಗಿ ಮಿತ್ರರಿಗೂ ಹಾಗೂ ಬೋಧಕೇತರ ನೌಕರರಿಗೂ ನನ್ನ ಕೃತಜ್ಞತೆಗಳು.

ನನ್ನ ಶ್ರೇಯಸ್ಸಿನ ಪ್ರತಿ ಹಂತದಲ್ಲಿಯೂ ನನಗೆ ಉತ್ತೇಜನ ಮತ್ತು ಪ್ರೋತ್ಸಾಹವನ್ನು ನೀಡಿ ನನ್ನ ಪಿಎಚ್.ಡಿ. ಅಧ್ಯಯನಕ್ಕೆ ಸಂಪೂರ್ಣ ನೆರವು ನೀಡಿದಂತಹ ನನ್ನ ಪೂಜ್ಯಾ ತಂದೆಯವರಾದ ಎಂ.ಮಹಲಿಂಗಪ್ಪ, ನಿವೃತ್ತ ಶಿಕ್ಷಕರು, ತಾಯಿಯವರಾದ ಬಸಮ್ಮ ಹಾಗೂ ಅಣ್ಣಂದಿರಾದ ಎಂ. ಶರಣಪ್ಪ ಎಂ. ಚನ್ನಬಸಪ್ಪ ಹಾಗೂ ಎಂ.ಶಶಿಧರ ಇವರಿಗೂ ಮತ್ತು ನನ್ನ ಶ್ರೀಮತಿಯಾದ ಎನ್.ಚಂದಮ್ಮ, ಭೌತಶಾಸ್ತ್ರ ಉಪನ್ಯಾಸಕಿ, ಎಸ್.ಜೆ.ಎಂ.ವಿ. ಮಹಾವಿದ್ಯಾಲಯ, ಚಿತ್ರದುರ್ಗ, ನನ್ನ ಪುಟಾಣಿಗಳಾದ ಆರ್.ಸಿ. ಪವನ್ ಕುಮಾರ್, ಆರ್.ಸಿ. ಅನುಶ್ರೀ ಇವರ ಸಹಕಾರವನ್ನು ನೆನೆಯುತ್ತೇನೆ.

ನನ್ನ ಪಿಎಚ್.ಡಿ. ಮಹಾಪ್ರಬಂಧಕ್ಕೆ ನೆರವಾದ ನನ್ನ ಎಲ್ಲಾ ಸ್ನೇಹಿತರಿಗೂ ಮಹಾಪ್ರಬಂಧವನ್ನು ಸುಂದರವಾಗಿ ಅಕ್ಷರ ಸಂಯೋಜನೆ ಮಾಡಿದ ಮೌನೇಶ್ವರ ಗ್ರಾಫಿಕ್ಸ್‌ನ ಅನ್ನಪೂರ್ಣ ಕಮ್ಮಾರ ಇವರಿಗೆ ಹಾಗೂ ಮಹಾಪ್ರಬಂಧವನ್ನು ಸುಂದರವಾಗಿ ಬೈಂಡ್‌ಮಾಡಿಕೊಟ್ಟ ಮಾಹಂತೇಶ್ ಬೈಂಡರ್ಸ್, ಧಾರವಾಡ, ಇವರಿಗೆ ಕೃತಜ್ಞತೆಗಳು.

**ಎಂ. ರಾಜಶೇಖರಪ್ಪ**

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧.೧. ಪ್ರಸ್ತಾವನೆ

ಮಾನವ ಸಮಾಜ ವ್ಯವಸ್ಥೆಗಳ ಸಮಗ್ರ ಅಧ್ಯಯನದ ದೃಷ್ಟಿಯಿಂದ ಒಟ್ಟು ಮಾನವ ಸಂಸ್ಕೃತಿಯನ್ನು ಅರಿಯುವ ಕಾರಣದಿಂದ ಒಂದೊಂದು ಸಮಾಜವನ್ನು ಬಿಡಿ ಬಿಡಿಯಾಗಿ ಅಧ್ಯಯನ ಮಾಡುವ ಅಗತ್ಯ ಈಗ ಬಹಳವಿದೆ. ಸಮಾನ ಗುಣ ಸ್ವಭಾವವುಳ್ಳ ಹಲವಾರು ಸಮಾಜಗಳು ಕೂಡಿ ಬಾಳುವೆ ಮಾಡುವ ನಮ್ಮ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದೊಂದು ಸಮಾಜವು ತಮಗೇ ವಿಶಿಷ್ಟವಾದ ಸಂಸ್ಕೃತಿಯನ್ನು ಹೊಂದಿರುವುದು ವಿಶೇಷ.

ಯಾವುದೇ ಒಂದು ಸಂಸ್ಕೃತಿ ಒಂದು ಗೊತ್ತಾದ ಸಮುದಾಯದ ಜೀವನ ಕ್ರಮವೇ ಆಗಿರುತ್ತದೆ. ಒಂದು ವ್ಯವಸ್ಥಿತ ರೀತಿಯಲ್ಲಿ ಆ ಜನತೆಯ ಬದುಕು ಹೊಂದಾಣಿಕೆ, ಹೊಣೆಗಾರಿಕೆ ಮತ್ತು ಆಯ್ಕೆಯನ್ನನುಸರಿಸಿ ನಡೆಯುತ್ತದೆ. ಒಂದು ಸಮೂಹದಲ್ಲಿ ಬಳಕೆಯಲ್ಲಿರುವ ಸಾಧನ ಸಲಕರಣೆಗಳು, ಮನೆ-ಮಠ, ಉಡುಗೆ-ತೊಡುಗೆ ಆ ಜನತೆಯ ರೂಪ, ಬಣ್ಣ ಮುಂತಾದವುಗಳ ಸಾಮ್ಯತೆಯ ಆಧಾರದಿಂದಷ್ಟೇ ಅಲ್ಲದೆ ಆಯಾ ಸಮುದಾಯದ ಅಮೂರ್ತವಾದ ಮಾನಸಿಕ ವ್ಯಾಪಾರಗಳು ಅವರನ್ನು ಒಂದು ಕೂಡಿಸುವ ಸಾಧನವಾಗಿರುತ್ತವೆ. ಅವು ಪರಸ್ಪರ ಕ್ರಿಯಾನ್ವಿತಗಳಾಗಿದ್ದು, ಆಯಾ ಸಮುದಾಯದ ಸಂಸ್ಕೃತಿ ಎನ್ನುವಾಗ ಅದರ ಸಮಸ್ತವೂ ಅದರಲ್ಲಿ ಅಂತರ್ಗತವಾಗುತ್ತದೆ.

ಇಂಹ ಒಂದು ಸಮುದಾಯದ ಸಂಸ್ಕೃತಿ ಅಧ್ಯಯನ ಎಂದ ತಕ್ಷಣ ಆ ಸಮುದಾಯದ ಸಾಂಸ್ಕೃತಿಕ ವಿವರಗಳನ್ನು ಕಲೆಹಾಕುವುದು ಅಧ್ಯಯನದ ಮೂಲ ಉದ್ದೇಶವಾಗಿರದೆ ಅದರ ಆಚೆಗೂ ಒಂದು ಸಮುದಾಯದ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ ಅದು ಏನೋ ಹೊಸ ಹೊಳಹು ನೀಡುತ್ತದೆ. ಅಂದರೆ ಅದರ ಇತಿಹಾಸ ಆ ಸಮುದಾಯ ನಡೆದು ಬಂದದಾರಿ ಈ ಸಮಾಜದಲ್ಲಿ ಪಟ್ಟ ಬವಣೆ ನೋವು

ನಲಿವು ಎಲ್ಲವನ್ನು ಅದು ಒಮ್ಮೆ ಆಚರಣೆ ಸಂಪ್ರದಾಯಗಳ ಮೂಲಕ ತಿಳಿಸಿದರೆ ಮತ್ತೊಮ್ಮೆ ನೇರ ಹೋರಾಟಕ್ಕಿಳಿದ ಹಾಡುಗಳೋ ಪರಸ್ಪರ ಸಂಧಾನ ನಡೆದ ಕಥೆಗಳೋ, ಹೀಗೆ ಹತ್ತು ಹಲವು ವಿಧದಲ್ಲಿ ಸಮುದಾಯ ತನ್ನ ಆಂತರಿಕ ಭಾವನೆಗಳನ್ನು ಹೊರಹಾಕುತ್ತಿರುತ್ತದೆ. ಆದರೆ ಇದನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಸಮುದಾಯದ ಜೊತೆಯಲ್ಲಿ ಬೆರೆತಾಗ ಅದನ್ನು ಕುರಿತು ದೀರ್ಘವಾಗಿ ಸಂಶೋಧನೆ ನಡೆಸಿದಾಗ ಮಾತ್ರ ಒಂದು ಸಮುದಾಯದ ಸಂಸ್ಕೃತಿಯನ್ನು ಅದರ ನೆಲೆ, ಬೆಲೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

ಸಂಸ್ಕೃತಿಯ ಚರ್ಚೆಯನ್ನು ಮಾಡದೆ ಮುಂದೆ ಒಂದು ಸಮುದಾಯದ ಬಗ್ಗೆ ಸಂಶೋಧನೆ ಚಿಂತನೆ ಮಾಡುವುದು ಕಷ್ಟ. ಸಂಸ್ಕೃತಿ ಅಧ್ಯಯನವು ಸಾಮಾಜಿಕವಾಗಿ ಅನಿವಾರ್ಯವಾದಂತಹ ಕ್ರಮವಾಗಿರುವುದರಿಂದ ಭಾರತದಂತಹ ನೆಲದಲ್ಲಿ ಸಂಸ್ಕೃತಿ ಎನ್ನುವುದು ಕೇವಲ ಧಾರ್ಮಿಕಾಚರಣೆಗಳಿಗೆ ಮಾತ್ರ ಸಂಬಂಧಿಸಿದ ವಿಷಯವಾಗಿಲ್ಲ. ಅದು ತನ್ನ ಒಳರಚನೆಯಲ್ಲಿ ಸಾಮಾಜಿಕ ರಾಜಕೀಯ ಆಶಯಗಳನ್ನು ಅಡಗಿಸಿಕೊಂಡ ಪರಿಣಾಮವಾಗಿ ಇಲ್ಲಿನ ಸಾವಿರಾರು ಜಾತಿ ಜನಾಂಗಗಳ ಒಟ್ಟಾರೆ ಜೀವನ ವಿಧಾನಗಳನ್ನು ಒಳಗೊಂಡಿದೆ. ಇದರ ಜೊತೆ ಜೊತೆಗೆ ಸಂಭವಿಸುವ ರಾಜ್ಯಾಧಿಕಾರಗಳ ನಿರ್ವಹಣೆಯಲ್ಲಿ ಕೂಡ ಇಂಥ ಒತ್ತಾಸೆಯಿರುತ್ತದೆನಿಸುತ್ತದೆ. ಈ ಸಮಾಜದ ಧಾರ್ಮಿಕ ಮೇಲುಸ್ತರದ ರಾಜಕೀಯ ಅದರ ರಾಜಕೀಯ, ಬೌದ್ಧಿಕ ಕಸರತ್ತಿನ ಬೆಲೆ ಹಾಗೂ ಕೆಳಸ್ತರದ ನಿತ್ಯಯಾತನೆಯ ರೋಧನ ಇಂದಿಗೂ ನಡೆಯುತ್ತಿರುವ ಜಾಣ ಕಿವುಡು ನಮ್ಮ ಸಮಾಜದ ಒಳಮುಖವನ್ನು ತೆರೆದಿಡುತ್ತವೆ. ಇಂಥ ಸಂದರ್ಭದಲ್ಲಿ ಗಾಣಿಗ ಸಮುದಾಯದ ಕೇವಲ ಸಂಸ್ಕೃತಿಯನ್ನು ಅಧ್ಯಯನ ಮಾಡುವುದಷ್ಟೇ ಈ ಅಧ್ಯಯನದ ಗುರಿಯಲ್ಲ. ಜೊತೆಗೆ ಒಂದು ಸಮುದಾಯದ ಕಳೆದು ಹೋದ ಐತಿಹಾಸಿಕತೆಯನ್ನು ಶೋಧಿಸುವ ಯತ್ನ, ಸಮಕಾಲೀನ ಸತ್ಯಗಳೊಂದಿಗೆ ಮುಖಾಮುಖಿಯಾಗಿಸುವ ಕಾರ್ಯ ಇಲ್ಲಿ ಮಾಡಲಾಗುವುದು.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಗಾಣಿಗ ಸಮುದಾಯದ ಒಟ್ಟು ಸಾಂಸ್ಕೃತಿಕ ವಿವರಗಳನ್ನು ಸಂಗ್ರಹಿಸುತ್ತಲೇ ಚಾರಿತ್ರಿಕ ಸಂದರ್ಭದಲ್ಲಿ ಅವುಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಗಾಣಿಗ ಸಮುದಾಯದ ಮೂಲ ಸಾಮಾಜಿಕ ಜೀವನ ಮತ್ತು ಧಾರ್ಮಿಕ ಆಚರಣೆಗಳು ಆರ್ಥಿಕ ಸ್ಥಿತಿಗತಿಗಳು ಕಸುಬು ಮತ್ತು ಹಿನ್ನೆಲೆ ರಾಜಕೀಯ ಜೀವನ ಇಂದಿನ ಜಾಗತೀಕರಣದ ಹೊತ್ತಲ್ಲಿ ಈ ಸಮುದಾಯದ ಸ್ಥಿತಿಗತಿ ಹಾಗೆಯೇ ಅದರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತ ಈ ಅಧ್ಯಯನ ಗಾಣಿಗರ ಒಟ್ಟು ಜೀವನ ವಿಧಾನವನ್ನು ಸಮಕಾಲೀನ ಸಾಮಾಜಿಕ ಸಂದರ್ಭದೊಂದಿಗೆ ಮುಖಾಮುಖಿಯಾಗಿಸುವ ಉದ್ದೇಶವನ್ನು ಹೊಂದಿದೆ. ಈ ಬಗೆಯ ಅಧ್ಯಯನಕ್ಕೆ ಶಿಸ್ತು ತಂದು ಕೊಡುವ ಗಾಣಿಗ ಸಮುದಾಯವನ್ನು ಕುರಿತಾದ ಈ ವರೆಗಿನ ಬರಹಗಳು, ಸಮುದಾಯ ಹಿರಿಯರು, ಮತ್ತವರ ಅನುಭವಗಳನ್ನು ಈ ಅಧ್ಯಯನದ ಮೂಲ ಆಕರಗಳೆಂದೇ ಸ್ವೀಕರಿಸಲಾಗಿದೆ.

ಭಾರತದ ಸಾಮಾಜಿಕ ಇತಿಹಾಸ ಮುಖ್ಯವಾಗಿ ಸಂಸ್ಕೃತಿಯನ್ನು ಒಂದು ಬಗೆಯ ಪ್ರಧಾನ ಹಾಗೂ ಜನಪ್ರಿಯ ನೆಲೆಯಲ್ಲಿ ವಿಶ್ಲೇಷಿಸಿಕೊಳ್ಳುತ್ತ ಬಂದಿದೆ. ಮನುಷ್ಯ ಜೀವನದ ಒಂದೊಂದು ವಿಕಾಸದ

ಹಂತದಲ್ಲೂ ಆ ಕಾಲದ ಪ್ರಭಾವಶಾಲಿ ಮತ್ತು ಬಲಶಾಲಿ ಸ್ತರವನ್ನೇ ಸಂಸ್ಕೃತಿ ಎಂದು ಬಿಂಬಿಸಲಾಗಿದೆ. ಬಲಶಾಲಿ ಮನಸ್ಸು ಗುಂಪು ಕಟ್ಟಿಕೊಂಡು ಆರ್ಥಿಕ ಉತ್ಪಾದನಾ ವಿಧಾನಗಳನ್ನು ತನ್ನಲ್ಲಿ ಕೇಂದ್ರೀಕರಿಸುತ್ತಾ ಅದೇ ವ್ಯವಸ್ಥೆ ಎಂದು ಭಯ ಬಿತ್ತಿ ನಂಬಿಸಲಾಗಿದೆ. ಈ ಸಂಸ್ಕೃತಿ ಪರಂಪರೆಗಳ ಅಬ್ಬರದಲ್ಲಿ ಮೌನವಾಗಿದ್ದ ಸಮುದಾಯಗಳು ನಿರ್ಲಕ್ಷ್ಯಕ್ಕೊಳಗಾಗುತ್ತಾ ಬಂದಿವೆ.

ಆದರೆ ಇಂದು ಈ ಮೌನ ಸಮುದಾಯಗಳು ಮಾತನಾಡುತ್ತಿರುವುದು ಸುಸಂಗತಿ. ಏಕೆಂದರೆ ಭಾರತದಲ್ಲಿ ಏಕರೂಪ ಸಂಸ್ಕೃತಿ ಎಂದು ನಂಬಿಸಿದೆ ಇತಿಹಾಸವನ್ನು ಗಮನಿಸಿದಾಗ ಅದು ಎಷ್ಟು ಸುಳ್ಳೆಂಬುದು ನಮ್ಮ ಸುತ್ತಮುತ್ತಲು ಸ್ವಲ್ಪ ಗಮನಿಸಿದರೆ ಸಾಕು ವೈವಿದ್ಯಮಯ ಸಂಸ್ಕೃತಿಗಳ ಸಾಲುಗಳೇ ಕಾಣಸಿಗುತ್ತವೆ. ಈ ಸಂಸ್ಕೃತಿ ಅಧ್ಯಯನವನ್ನು ಕುರಿತು ಮಹತ್ವದ ಕಾರ್ಯ ಕೈಗೊಂಡ ಉಪ ಸಂಸ್ಕೃತಿ ಅಧ್ಯಯನ ಮಾಲೆಯ ಸಂಪಾದಕರಾದ ಪ್ರೊ.ಬರಗೂರು ರಾಮಚಂದ್ರಪ್ಪನವರನ್ನು ನೆನೆಯಲೇಬೇಕು. ಏಕೆಂದರೆ ಇದಕ್ಕಿಂತ ಮುಂಚೆ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಅಂದರೆ ೩೨ ಸಮುದಾಯಗಳ ಸಂಸ್ಕೃತಿಯನ್ನು ಪರಿಚಯಿಸಿದ ಕಾರ್ಯ ನಡೆದಿರಲಿಲ್ಲ. ಹೀಗೆ ಸಮುದಾಯಗಳ ಅದು ಕಟ್ಟಕಡೆಯ ಅಂಚಿನ ಸಮುದಾಯಗಳಿಗೆ ಮಾತನಾಡುವ ಅವಕಾಶ ಕಲ್ಪಿಸಲು ಸಾಧ್ಯವಾಯಿತು. ನಂತರದಲ್ಲಿ ಸಮುದಾಯಗಳ ಅಧ್ಯಯನ ಕೇವಲ ಸಂಸ್ಕೃತಿ ಪರಿಚಯಿಸುವಿಕೆಯಲ್ಲಿ ಅದರೊಂದಿಗೆ ಪ್ರಸ್ತುತ ದಿನಮಾನದೊಂದಿಗೆ ಆ ಸಮುದಾಯವನ್ನು ಅದರ ಪರಿಸ್ಥಿಯನ್ನು ಓರೆಗೆ ಹಚ್ಚುವ ಕಾರ್ಯವು ನಡೆಯುತ್ತಿದೆ. ಇಷ್ಟೇ ಅಲ್ಲ ಜಾಗತೀಕರಣದ ಮಾಯೆಯಲ್ಲಿ ಈ ಚಿಕ್ಕ ಸಮುದಾಯಗಳ ಸ್ಥಿತ್ಯಂತರದ ಬಗ್ಗೆಯು ಶೋಧ ನಡೆಯುತ್ತಿದೆ.

ಹೀಗೆ ಒಂದು ಸಮುದಾಯದ ಅಧ್ಯಯನ ಎಂದಾಕ್ಷಣ ಆ ಸಮುದಾಯದ ಸಮಸ್ತ ಅಧ್ಯಯನವನ್ನು ಮಾಡಬೇಕಾಗಿದೆ. ಇನ್ನೊಂದು ವಿಷಯವೆಂದರೆ ಜಾಗತೀಕರಣಕ್ಕೆ ಈ ಸಮುದಾಯಗಳಲ್ಲಿ ಉತ್ತರವಿದೆಯೆಂಬಂತೆ ಮಾತು ಕೇಳಿ ಬರುತ್ತಿದೆ. ಇದೆಷ್ಟು ಸತ್ಯ ಎಂಬುದನ್ನು ಸಂಶೋಧನೆ ನಡೆಸಿದಾಗಲೇ ತಿಳಿಯುತ್ತದೆ ಎಂದು ಹೇಳಬಹುದು.

ಗಾಣಿಗ ಸಮುದಾಯದವರು ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದು ಭಾರತದ ಉದ್ದಗಲಕ್ಕೂ ಬೇರೆ ಬೇರೆ ಹೆಸರಿನಲ್ಲಿ ಇರುವ ಗಾಣಿಗರು ಆಯಾ ಪ್ರಾದೇಶಿಕ ಭಾಷಾಗಳನ್ನಾಡುವವರಾಗಿದ್ದು ಕರ್ನಾಟಕದಲ್ಲಿ ಕನ್ನಡ, ಆಂದ್ರದಲ್ಲಿ ತೆಲುಗು, ತಮಿಳು ನಾಡಿನಲ್ಲಿ ತಮಿಳು, ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆಯನ್ನಾಡುತ್ತಾರೆ, ಇವರು ಕಷ್ಟಜೀವಿಗಳು. ಸಮೃದ್ಧ ಸಂಸ್ಕೃತಿಯನ್ನು ಹೊಂದಿರುವ ಇವರ ಸಾಂಸ್ಕೃತಿಕ ಇತಿಹಾಸ ಗಮನಾರ್ಹವಾದುದು. ಇಂದು ಜಾಗತೀಕರಣ, ಸಂಸ್ಕೃತೀಕರಣದ ಪ್ರಭಾವದಿಂದಾಗಿ ತಮ್ಮ ಸಾಂಸ್ಕೃತಿಕ ಚಹರೆಯನ್ನುಳಿಸಿಕೊಳ್ಳಲು ಪ್ರತಿದಿನ ಹೊಸ ಸಂದರ್ಭಕ್ಕೆ ಹೊಂದಿಕೊಳ್ಳಲು ಹೆಣಗಾಡುತ್ತಿರುವ ಈ ಸಮುದಾಯದ ಇಂದಿನ ಪರಿಸ್ಥಿತಿಯೇನು ಎಂಬುದನ್ನರಿಯುವುದರ ಜೊತೆಗೆ ಇವರ ಇತಿಹಾಸ ಕಟ್ಟುವ ಕಾರ್ಯವನ್ನು ಮಾಡಲು ಪ್ರಯತ್ನಿಸಲಾಗುವುದು.

ಭಾರತದ ಇತಿಹಾಸದಲ್ಲಿ ಕಂಡುಬರುವ ಶ್ರೇಣೀಕೃತ ವ್ಯವಸ್ಥೆಯಲ್ಲಿ ಜಾತಿ ಎನ್ನುವುದು ಹುಟ್ಟಿನಿಂದಲೇ ನಿರ್ಧರಿತವಾಗಿರುವುದನ್ನು ಕಾಣಬಹುದು. ಉದಾಹರಣೆಗೆ ಮರದ ಕೆಲಸ ಮಾಡುವವನು ಬಡಿಗ, ಚರ್ಮದ ಕೆಲಸ ಮಾಡುವವ ಚಮ್ಮಾರ ಹೀಗೆ ಕುರಿಮಾಂಸ ಮಾರುವಿಕೆಯ ವ್ಯಕ್ತಿಯ ಆಧಾರದ ಮೇಲೆ ಖಾಟಿಕ್ ಸಮುದಾಯ, ಎಣ್ಣೆ ಉತ್ಪಾದನೆ ಮತ್ತು ಮಾರಾಟ ಮಾಡುವವರನ್ನು ಗಾಣಿಗ ಎಂದು ವೃತ್ತಿಯ ಆಧಾರದ ಮೇಲೆ ಕರೆಯಲಾಗುತ್ತದೆ. ಗಾಣಿಗ ಸಮುದಾಯಕ್ಕೆ ಒಂದು ಇತಿಹಾಸವಿಲ್ಲ. ಅಂದರೆ ಸ್ಮೃತಿಕಳೆದುಕೊಂಡಂತಹ ಅಥವಾ ಕೊಂಡಿ ಕಳಚಿದ ಒಂದು ಸರಪಳಿಯನ್ನು ಜೋಡಿಸುವಂತ ಪ್ರಯತ್ನವನ್ನಿಲ್ಲಿ ಮಾಡಿದ್ದೇನೆ. ಜೊತೆಗೆ ಇಂದಿನ ಜಗತ್ತಿನೊಂದಿಗೆ ಈ ಸಮುದಾಯವನ್ನು ಮುಖಾಮುಖಿಯಾಗಿಸುವ ಕಾರ್ಯ ಮಾಡಲಾಗಿದೆ.

**೧.೨. ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು**

ಸಮುದಾಯಗಳ ಆಧ್ಯಯನ ಸಂದರ್ಭದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳುವುದರಿಂದ ಆ ಸಮುದಾಯದ ಸಮಗ್ರ ಸಂಸ್ಕೃತಿಯನ್ನು ತಿಳಿದುಕೊಳ್ಳುವುದು ಸಾಧ್ಯವಾಗುತ್ತದೆ. ಗಾಣಿಗರ ಸಮುದಾಯದ ಅಧ್ಯಯನವನ್ನು ವ್ಯಾಪಕ ಕ್ಷೇತ್ರ ಕಾರ್ಯದಲ್ಲಿ ತೊಡಗಿಸಿಕೊಂಡೇ ಆರಂಭಿಸಲಾಗಿದೆ.

ಈ ಸಮುದಾಯದಿಂದ ಮೌಖಿಕ ವಿವರಗಳನ್ನು ಪಡೆದು ಅವುಗಳ ವಿಶ್ಲೇಷಣೆಯನ್ನು ಮಾಡುತ್ತ ಸರಿಯುವುದು ತಪ್ಪು ಎಂದು ಜ್ಞಾನದ ಒರೆಗಲ್ಲಿಗೆ ಹಚ್ಚುತ್ತ ಸಂಶಯ ಕಲ್ಪನೆಗಳಲ್ಲಿ ವಾಸ್ತವಿಕತೆಯನ್ನು ಹುಡುಕುತ್ತಾ ಸಾಗುವ ಕ್ಷೇತ್ರಕಾರ್ಯ ನಿಜಕ್ಕೂ ಕೆಲವೊಮ್ಮೆ ಖುಷಿ ಮತ್ತೆ ಕೆಲವೊಮ್ಮೆ ನಿರಾಶೆಯಿಂದ ಕೂಡಿದ್ದು ಜೀವನದ ಅನುಭವಗಳನ್ನು ನೀಡಿದೆ.

ಸಮುದಾಯದ ಹಿರಿಯರ ಅನುಭವ ಮಾಹಿತಿ, ಯುವ ಉತ್ಸಾಹಿ ಯುವಕ ಯುವತಿಯರ ನಡುವಿನ ಚರ್ಚೆ ಸಂವಾದಗಳೊಂದಿಗೆ ಸಾಗಿದೆ. ಈ ಕ್ಷೇತ್ರಕಾರ್ಯ ನಿಜಕ್ಕೂ ಸಮುದಾಯ ಅಧ್ಯಯನಗಳಲ್ಲಿ ತುಂಬಾ ಸಹಾಯಕಾರಿಯಾಗಿ ಪರಿಣಮಿಸುತ್ತದೆ. ಒಂದು ಸಮುದಾಯದ ಅಧ್ಯಯನ ಮಾಡುವಾಗ ಅಲ್ಲಿ ಹಿರಿಯರ ಅನುಭವ ಮಾಹಿತಿ ವಯಸ್ಕರ ವಕ್ತೃಗಳ ವಿವರಣೆ ಯುವ ಜನತೆಯ ಚರ್ಚೆ ಸಂವಾದ ಎಲ್ಲವು ಮುಖ್ಯವಾಗುತ್ತವೆ. ಮನುಷ್ಯನ ವಿವಿಧ ಘಟ್ಟಗಳೊಂದಿಗೆ ನಡೆಸುವ ಈ ಕ್ಷೇತ್ರಕಾರ್ಯ ತುಂಬಾ ಮಹತ್ವಪೂರ್ಣವಾಗಿರುತ್ತದೆ.

ಪ್ರಶ್ನಾವಳಿ ಮೂಲಕ ಗಾಣಿಗರ ಮೂಲ ಕಸುಬು ಆಭರಣ ಇತಿಹಾಸ ಸಾಮಾಜಿಕ-ಆರ್ಥಿಕ ಸ್ಥಿತಿಗಳು ಸಮಕಾಲೀನ ಸಂದರ್ಭದಲ್ಲಿ ಅವರು ಎದುರಿಸುತ್ತಿರುವ ಸವಾಲುಗಳು ಬದುಕಿನ ಸ್ಥಿತ್ಯಂತರಗಳು ಜನನ ಮರಣ ಸೀಮಂತ ನಾಮಕರಣ ಋತುಮತಿ ಸಾಂಸ್ಕೃತಿಕ ಬದುಕಿನ ಸ್ವರೂಪವನ್ನು ಸಂಗ್ರಹಿಸಲಾಗಿದೆ. ಅಗತ್ಯವಿದ್ದ ಕಡೆಗಳಲ್ಲಿ ಫೋಟೋ ತೆಗೆದುಕೊಳ್ಳಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮುಖ್ಯವಾಗಿ ಎರಡು ರೀತಿಯ ವಿಧಾನಗಳನ್ನು ಅನುಸರಿಸಲಾಗಿದೆ.

೧. ಗಾಣಿಗರು ದಟ್ಟವಾಗಿ ವಾಸಿಸುವ ಚಿತ್ರದುರ್ಗ ಜಿಲ್ಲೆ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿಗೆ ಭೇಟಿ ಕೊಡುವುದು ಒಂದನೇಯ ವಿಧಾನ.

ಈ ವಿಧಾನದಿಂದ ಗಾಣಿಗರ ಪದೋತ್ಪತ್ತಿ, ಗಾಣಿಗರ ಮೂಲ ಕಸುಬು, ಆಚರಣೆ, ನಂಬಿಕೆ, ಐತಿಹಾಸಿಕ ಹಿನ್ನಲೆ, ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಅವರ ಸವಾಲುಗಳು ಅವರ ಬದುಕಿನ ಸ್ಥಿತ್ಯಂತರಗಳು ಮುಂತಾದ ವಿಷಯಗಳನ್ನು ಸಮುದಾಯದ ವಯಸ್ಕರ ಜೊತೆ ಚರ್ಚೆಯೊಂದಿಗೆ ಪ್ರಶ್ನಾವಳಿ ಮೂಲಕ ತಿಳಿದುಕೊಳ್ಳಲು ಪ್ರಯತ್ನಿಸುವುದು.

ವಾರ್ಷಿಕಾಚರಣೆ ಮತ್ತು ಜೀವನಾವರ್ತನದ ಆಚರಣೆಯ ಸಂದರ್ಭದಲ್ಲಿ ಉದ್ಯೋಗದ ಮಾಹಿತಿಗಳನ್ನು ಸಂಗ್ರಹಿಸುವಾಗ ಗಾಣಿಗ ಸಮುದಾಯದ ಜೊತೆಗೆ ಇದ್ದು ಅವರೊಂದಿಗೆ ಆಚರಣೆಗಳಲ್ಲಿ ಭಾಗವಹಿಸಿ ಉದ್ಯೋಗಕ್ಕೆ ಸಂಬಂಧಿಸಿದಂತೆ ಮಾರ್ಕೆಟ್‌ಗಳಲ್ಲಿ ಅವರ ಮಹಿಳೆಯರು, ಮಕ್ಕಳು, ಹಿರಿಯರೊಂದಿಗೆ ಭಾಗವಹಿಸಿ ಕ್ಷೇತ್ರಕಾರ್ಯ ಮಾಡಿ ಅವಶ್ಯವಿದ್ದಲ್ಲಿ ಧ್ವನೀಕರಣ ಮಾಡಿಕೊಂಡು ಛಾಯಾಚಿತ್ರಗಳನ್ನು ತೆಗೆದು ಟಿಪ್ಪಣಿ ಬರೆದುಕೊಳ್ಳುವ ಮೂಲಕ ಈ ಸಮುದಾಯವನ್ನು ಅಧ್ಯಯನ ಮಾಡಲಾಗಿದೆ.

೨. ಗಾಣಿಗ ಸಮುದಾಯದಲ್ಲಿನ ಸಾಹಿತ್ಯಕ ವಿವರಗಳ ಮೂಲಕ ಅವರ ಸಂವೇದನೆಗಳ ಮೂಲವನ್ನು ಗ್ರಹಿಸುವುದು.

ಸಮುದಾಯ ಅಧ್ಯಯನದಲ್ಲಿ ಈ ವಿಧಾನವು ಹೆಚ್ಚು ಪರಿಣಾಮಕಾರಿಯಾದುದು. ಗಾಣಿಗ ಸಮುದಾಯದಲ್ಲಿರುವ ಕಥೆ, ಲಾವಣಿ, ಗಾದೆ, ಒಗಟು ಮೊದಲಾದ ಪ್ರಕಾರದೊಂದಿಗೆ ಅವರ ಆಚರಣೆಯ ಸೂಕ್ಷ್ಮ ನೆಲೆಗಳನ್ನು ಗ್ರಹಿಸುತ್ತ ಈ ಸಮುದಾಯದ ವಲಸೆಯ ವಿಚಾರ. ದೈವದ ಕುರಿತು ಗ್ರಹಿಕೆ, ಸಾಮಾಜಿಕ ಚಿತ್ರಣ, ಆಧುನಿಕತೆಯೊಂದಿಗೆ ಮುಖಾಮುಖಿಯಾಗುವ ಸಂದರ್ಭ ಇವನ್ನು ಅಧ್ಯಯನ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಉದಾಹರಣೆಗೆ ಈ ಸಮುದಾಯದ ಮದುವೆಯ ಆಚರಣೆಯಲ್ಲಿ ಹಿರಿಯರಿಗೆ ಮತ್ತು ದೇವರಿಗೆ ಎಣ್ಣೆ ಎರಿಸುವ ಹಾಗೂ ಮನೆದೇವರಿಗೆ ಎಣ್ಣೆ ದೀಪ ಹಚ್ಚುವ ಸಂಪ್ರದಾಯವು ಇವರಲ್ಲಿ ಇದೆ. ಹಾಗೂ ಹಾಡುಗಳೊಂದಿಗೆ ಪೂಜಿಸುವ ಪದ್ಧತಿಯು ಇವರಲ್ಲಿದೆ.

ಹಿಂದೆ ತಾವು ಪೂಜಿಸುವ ದೇವತೆಗಳಿಗೆ ಎಣ್ಣೆ ಏರಿಸುತ್ತಿದ್ದು ಕಾಲಾನಂತರ ಕರ್ನಾಟಕದಲ್ಲಿ ಇಲ್ಲಿನ ದೈವಗಳು ಆ ದೇವತೆಗಳ ಸ್ಥಾನ ಪಡೆದಿರುವ ಸಾಧ್ಯತೆಯಿದೆ. ಈ ಸಮುದಾಯದಲ್ಲಿ ಸಾವಿನ ಸಂದರ್ಭದಲ್ಲಿ ಫೋಟೋ ತೆಗೆಸಿ ದೇವರ ಸಮಾನವಾಗಿ ಸತ್ತವರ ಫೋಟೋಗಳನ್ನು ಪೂಜಿಸುತ್ತಾರೆ. ಇಲ್ಲಿ ಗಂಡು ಮಕ್ಕಳು ತೀರಿ ಹೋದಲ್ಲಿ ತಾಳಿ, ಬಳೆ ಹಾಗೂ ಕಾಲುಂಗುರಗಳನ್ನು ತೆಗೆಯುವ ಪರಂಪರೆ ಈ ಸಮುದಾಯದಲ್ಲಿದೆ. ಜೊತೆಗೆ ವಿಧವೆಯಾದವಳು ಸಜ್ಜನ ಗಾಣಿಗರಲ್ಲಿ ಯಾವುದೇ ಮರು ವಿವಾಹವಾಗುವುದಿಲ್ಲ.

ಹಿಂದೆ ಇವರಲ್ಲಿ ವಧುದಕ್ಷಿಣೆ ಇದ್ದು ಇಂದು ಈ ಸಮುದಾಯದಲ್ಲಿ ವರದಕ್ಷಿಣೆಯು ಹೆಚ್ಚತೊಡಗಿದೆ. ಇದೊಂದು ಸಮಸ್ಯೆಯಾಗಿ ಈ ಸಮುದಾಯದ ಜನರನ್ನು ಕಾಡತೊಡಗಿದೆ.

ಈ ಸಮುದಾಯದಲ್ಲಿ ಬಹುದೇವತಾರಾಧಕರಾದರೂ ಇವರು ಮನೆದೇವರು ಹಾಗೂ ಹಿರಿಯರ ಪೂಜೆ ಮತ್ತು ಹಬ್ಬಗಳು ಜಾತ್ರೆ ಉತ್ಸವಗಳಿಗೆ ಹೆಚ್ಚು ಒತ್ತನ್ನು ಕೊಡುತ್ತಾರೆ. ಅಥವಾ ಹೆಚ್ಚು ವೇಳೆಯನ್ನು ಕಳೆಯುತ್ತಾರೆ.

## ೧.೩. ಅಧ್ಯಯನದ ರೂಪು-ರೇಷೆಗಳು

ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯಡಿ ಕೈಗೆತ್ತಿಕೊಂಡಿರುವ ಈ ಅಧ್ಯಯನದ ರೂಪು-ರೇಷೆಗಳನ್ನು ಕುರಿತು ಹೇಳುವುದು ಇಲ್ಲಿನ ಉದ್ದೇಶವಾಗಿದೆ. ಮೊದಲನೆಯದಾಗಿ ಗಾಣಿಗರನ್ನು ಕುರಿತು ಅಧ್ಯಯನ ತುಂಬಾ ಕಡಿಮೆ ಪ್ರಮಾಣದಲ್ಲಿ ನಡೆದಿರುವುದರಿಂದ ಈ ಸಮುದಾಯವನ್ನು ಅಧ್ಯಯನ ಮಾಡುವ ಅಗತ್ಯತೆ ಇದೆ. ಈ ಗಾಣಿಗ ಸಮುದಾಯ ಸ್ಥಾನ-ಮಾನ ಇತರ ಸಮುದಾಯಗಳೊಂದಿಗಿನ ಸಂಬಂಧವನ್ನು ಅಧ್ಯಯನ ಮಾಡುವುದು ತುಂಬಾ ಮುಖ್ಯವಾದುದಾಗಿದೆ.

ಪ್ರಾಚೀನ ಕಾಲದಿಂದಲೂ ಎತ್ತಿನ ಗಾಣದಿಂದ ಎಣ್ಣೆ ತೆಗೆದು ಇಡೀ ಸಮಾಜಕ್ಕೆ ಕೊಡುವ ಪದ್ಧತಿ ಬೆಳೆದು ಬಂದಿತ್ತು. ಜಾತಿಯ ಕುಲ ಕಸುಬನ್ನು ನಿರ್ಧರಿಸುತ್ತದೆ. ಮತ್ತು ನಿಯಂತ್ರಿಸುತ್ತದೆ. ಒಂದು ಜಾತಿಯವರು ಮಾಡುವ ಉದ್ಯೋಗವನ್ನು ಇನ್ನೊಂದು ಜಾತಿಯವರು ಮಾಡುವ ಹಾಗಿರಲಿಲ್ಲ. ಅಂದು ಜಾತಿ ಪಂಚಾಯಿತಿಗಳು ಆ ಜಾತಿಯ ಜನರ ಅಪವರ್ತನೆಯ ಮೇಲೆ ನಿಯಂತ್ರಣ ಹಾಗೂ ಶಿಕ್ಷೆ ಕೊಡುವ ಕೇಂದ್ರಗಳಂತಿದ್ದವು. ಹಾಗೂ ಸಮಾಜಕ್ಕೆ ತಕ್ಕಂತೆ ಸಮುದಾಯದ ಜನರನ್ನು ಬದಲಾಯಿಸುವುದು ಜಾತಿ ಪಂಚಾಯಿತಿಗಳ ಗುರಿಯಾಗಿದೆ. ಇಂದು ಸಂಸ್ಕೃತೀಕರಣ ಹಾಗೂ ಜಾಗತೀಕರಣಗಳ ಮಾಯೆಯಲ್ಲಿ ತಮ್ಮ ಅನ್ಯೂನ್ಯತೆಯನ್ನು ಉಳಿಸಿಕೊಳ್ಳುತ್ತಾ ಮತ್ತೆ ಕೆಲವು ವೇಳೆ ಕೆಲವು ವಿಷಯಗಳಲ್ಲಿ ಬದಲಾಗುತ್ತಾ ನಡೆಯುತ್ತಿರುವುದನ್ನು ಕಾಣಬಹುದು.

ಇಡೀ ಭಾರತದಾದ್ಯಂತ ಹಾಗೂ ಕರ್ನಾಟಕ ರಾಜ್ಯದಲೆಲ್ಲಾ ಗಾಣಿಗ ಸಮುದಾಯವು ಚದುರಿಕೊಂಡಿರುವುದರಿಂದ ಅದೇ ರೀತಿ ಚಿತ್ರದುರ್ಗ ಜಿಲ್ಲೆಯ ಬಹಳಷ್ಟು ಪ್ರದೇಶಗಳಲ್ಲಿ ಗಾಣಿಗರು ಹೆಚ್ಚಿರುವ ಹಳ್ಳಿ ಅಥವಾ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಇವರಲ್ಲಿ ಸಂಘಟನೆಯ ಕೊರತೆ ಹೆಚ್ಚಿದೆ. ಇತ್ತೀಚೆಗೆ ಬಿಜಾಪುರ, ಮೈಸೂರು ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿ ಗಾಣಿಗರ ಸಮಾವೇಶಗಳಾಗುವುದರ ಮೂಲಕ ಇತ್ತಿತ್ತಲಾಗಿ ಸಂಘಟನೆಯ ಕಾರ್ಯಗಳು ಹೆಚ್ಚಾಗುತ್ತಿವೆ. ಬಿಜಾಪುರ ಜಿಲ್ಲೆಯ ಗಾಣಿಗ ಸಮುದಾಯದ ಸಂಘಟನೆಯು ಹೊರ ತಂದಿರುವ ಗಾಣಸಿರಿ ಸ್ಮರಣ ಸಂಚಿಕೆಯಲ್ಲಿ ಸೂಚಿಸಿರುವಂತೆ ಕರ್ನಾಟಕ ರಾಜ್ಯದಲ್ಲಿ ಸುಮಾರು ೩೦,೦೦,೦೦೦ ಗಾಣಿಗ ಸಮುದಾಯದ ಜನಸಂಖ್ಯೆ ಇದೆ ಎಂದು ನಮೂದಿಸಿದೆ. ಚಿತ್ರದುರ್ಗ ಜಿಲ್ಲೆಯ ಸಜ್ಜನ ಗಾಣಿಗರ ಅಧ್ಯಯನ ನಡೆಸುವ ಸಂದರ್ಭದಲ್ಲಿ ಶಾಂಪ್ಲಿಂಗ್ ವಿಧಾನವನ್ನು ಅಳವಡಿಸಿರುವುದರಿಂದ ಸ್ಪಷ್ಟ ಜನಸಂಖ್ಯೆ ಗೋಚರವಾಗಿಲ್ಲ.

ಈ ಸಮುದಾಯದಲ್ಲಿ ರಾಜಕೀಯ ಪ್ರಜ್ಞೆ ಅತ್ಯಂತ ಕಡಿಮೆ ಇದೆ. ಸೌಲಭ್ಯಗಳು ಸಿಗದ ಕಾರಣದಿಂದ ಇವರ ಬದುಕು ಸರಳ ಜೀವನ ಸಾಗಿಸುವಂತಹವರಾಗಿದ್ದಾರೆ. ಸಮಾಜದಲ್ಲಿ ಎಣ್ಣೆ ಉತ್ಪಾದಿಸುವ ಗಾಣಿಗನ ಮುಖ ನೋಡಿ ಹೋದರೆ ಹೋದ ಕೆಲಸಗಳು ಪೂರ್ಣವಾಗುವುದಿಲ್ಲ ಎಂಬ ಕಲ್ಪನೆ ಬೇರೆ ಸಮುದಾಯದ ಜನರಲ್ಲಿದೆ. ಈ ಉದ್ಯೋಗದಲ್ಲಿ ಅಲ್ಪಲಾಭ, ಇತರೆ ಜನಾಂಗಗಳ ಪೈಪೋಟಿ ಹಾಗೂ ಸ್ಪರ್ಧೆಯಿಂದಾಗಿ ಹಾಗೂ ಯಂತ್ರಗಳ ಮೂಲಕ ಎಣ್ಣೆ ತೆಗೆಯುವ ಇಂದಿನ ಎಣ್ಣೆಗಳಿಗೆ ಗಾಣದಿಂದ ತೆಗೆಯುವ ಎಣ್ಣೆ

ಸರಿಸಮಾನವಾಗಿ ನಿಲ್ಲುವಲ್ಲಿ ವಿಫಲವಾಗಿದೆ. ಜೊತೆಗೆ ಸಜ್ಜನ ಗಾಣಿಗರಲ್ಲಿ ಬಹಳಷ್ಟು ಜನರು ಮೂಲ ವೃತ್ತಿ ತ್ಯಜಿಸಿ ವ್ಯವಸಾಯ ಮತ್ತು ವ್ಯವಸಾಯೇತರ ಹಾಗೂ ಸರ್ಕಾರಿ ಹುದ್ದೆಗಳಲ್ಲಿ ಕಾರ್ಯ ಮಾಡುತ್ತಿದ್ದಾರೆ. ಹಿಂದೆ ಗಾಣಿಗರನ್ನು ಕೀಳಾಗಿ ಕಾಣುವ ಪರಿಪಾಠವಿದ್ದರಿಂದ ಹಾಗೂ ಅವರ ಮನೆಯಲ್ಲಿ ಶನಿದೇವ ನೆಲೆಸಿದ್ದಾನೆಂಬ ನಂಬಿಕೆ ಇದೆ ಹೋದರೇ ಶನಿದರ್ಶನ ಮಾಡಬೇಕಾಗುತ್ತದೆ ಎಂಬ ಕಲ್ಪನೆ ಇರುವುದರಿಂದ ಅಂದಿನ ಸಮಾಜದಲ್ಲಿ ಶನಿದೇವನ ಜೊತೆಗೆ ಗಾಣಿಗರನ್ನು ಕೀಳಾಗಿ ಕಾಣಲು ಪ್ರಾರಂಭಿಸಲಾಯಿತು. ಇದರಿಂದ ಅವರು ತಮ್ಮ ಮೂಲ ವೃತ್ತಿ ಬಿಟ್ಟು ಹೊಸ ವೃತ್ತಿಗಳಿಗೆ ಬದಲಾವಣೆ ಹಾಗೂ ಸ್ಥಿತ್ಯಂತರವಾಗಿರುವುದನ್ನು ಗಮನಿಸುತ್ತೇವೆ.

ಇವರು ಸಂಸ್ಕೃತೀಕರಣದಿಂದ ಮೇಲ್ ಜಾತಿಯವರನ್ನು ಅಂದರೆ ಬ್ರಾಹ್ಮಣರನ್ನು ಅನುಕರಣೆ ಮಾಡತೊಡಗಿದರು ಇದನ್ನು ಪ್ರಾರಂಭದಲ್ಲಿ ಎಂ.ಎನ್. ಶ್ರೀನಿವಾಸ ''ಬ್ರಹ್ಮಣೀಕರಣ'' ಎಂದೂ ನಂತರ ಕಾಲ ಕಳೆದು ಆಧುನಿಕತೆ ಪ್ರವೇಶಮಾಡಿದಂತೆ ಇದನ್ನು ''ಸಾಂಸ್ಕೃತೀಕರಣ'' ಎಂದು ಕರೆದಿದ್ದಾರೆ. ಉದಾ: ಪೂಜಿಸುವ ದೇವರು ಮಕ್ಕಳಿಗೆ ಇರುವ ಹೆಸರುಗಳು, ಮುಂದಾದವುಗಳಷ್ಟರಲ್ಲೆ ಅಲ್ಲದೆ ಇಡೀ ಸಂಸ್ಕೃತಿಯಲ್ಲಿಯೇ ಪರಿವರ್ತನೆ, ಬದಲಾವಣೆಗಳಾಗುತ್ತಿವೆ. ಸಮಾಜ ಇವರನ್ನು ಕುರಿತು ನೋಡುವ ದೃಷ್ಠಿಕೋನ ಮಾನಸಿಕವಾಗಿ ತುಂಬಾ ಬೇಸರ ಮಾಡಿಕೊಂಡಿದ್ದಾರೆ ಆದ್ದರಿಂದಲೆ ೧೨ನೇ ಶತಮಾನದಿಂದಲೂ ಲಿಂಗಾಧಾರಣೆ ಮಾಡಿಕೊಳ್ಳುತ್ತಾ ಪೂಜೆಮಾಡುವವರನ್ನು ಲಿಂಗವಂತರೆಂದು ಕರೆಯಲಾಯಿತು. ಹಾಗೂ ವೀರ ಶೈವಧರ್ಮಕ್ಕೆ ಸೇರಿ ಅದನ್ನು ಆಚರಿಸಿಕೊಂಡು ಬಂದವರಲ್ಲಿ ಗಾಣಿಗರು ಒಬ್ಬರಾಗಿದ್ದಾರೆ.

ಈ ಸಮುದಾಯದ ಜನರು ಮೇಲ್‌ಜಾತಿಗಳ ಅನುಕರಣೆ ಮಾಡಿದರೂ ಸಹ ಇತರ ಜಾತಿಗೆ ಸೇರಲು ಗಾಣಿಗರು ಬಯಸಲಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬರುತ್ತದೆ.

ಇತ್ತೀಚಿನ ದಿನಮಾನಗಳಲ್ಲಿ ಸಮುದಾಯ ಅಧ್ಯಯನಗಳು ಅವಶ್ಯಕತೆ ಬಹಳಷ್ಟಿದೆ ಅದಕ್ಕೆ ಹೊರತಾಗಿ ಗಾಣಿಗ ಸಮುದಾಯವು ಇಲ್ಲ. ಅದರ ಅಧ್ಯಯನಗಳು ಇತ್ತೀಚೆಗೆ ಆಗುತ್ತಲಿವೆ.

ಈ ಮಹಾಪ್ರಬಂಧವು ಒಂಬತ್ತು ಅಧ್ಯಾಯಗಳ ಹರಹನ್ನು ಹೊಂದಿದೆ.

ಮೊದಲ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಪ್ರಸ್ತಾವನೆ, ಗಾಣಿಗರನ್ನು ಕುರಿತು ಈವರೆಗೆ ನಡೆದ ಅಧ್ಯಯನ ಸಮೀಕ್ಷೆ, ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು ಅಧ್ಯಯನದ ರೂಪುರೇಷೆಗಳು.

ಎರಡನೇ ಅಧ್ಯಾಯದಲ್ಲಿ ಗಾಣಿಗ ಸಮುದಾಯ ಗಾಣಿಗ ಸಮುದಾಯದ ಮೂಲ ಪದ ನಿಷ್ಪತ್ತಿ ಅವರ ಧರ್ಮ, ಚಿತ್ರದುರ್ಗದ ಒಂದು ಪರಿಚಯ, ಗಾಣಿಗ ಸಮುದಾಯದಲ್ಲಿರುವ ಒಳಪಂಗಡಗಳು ಹಾಗೂ ಬೆಡಗುಗಳು.

ಮೂರನೆಯ ಅಧ್ಯಾಯದಲ್ಲಿ ಸಾಮಾಜಿಕ ಜೀವನ ಗಾಣಿಗರ ಕೌಟುಂಬಿಕ ವ್ಯವಸ್ಥೆ ಹಾಗೂ ವೈವಾಹಿಕ ವ್ಯವಸ್ಥೆ ಹಾಗೂ ಇದರಲ್ಲಾಗಿರುವ ಇತ್ತೀಚಿನ ಬದಲಾವಣೆಗಳು

ನಾಲ್ಕನೆಯ ಅಧ್ಯಾಯದಲ್ಲಿ ಗಾಣಿಗ ಸಮುದಾಯದ ಆಚರಣೆಗಳು ಇದರಲ್ಲಿ ಋತುಮತಿ, ಮದುವೆ, ಸೀಮಂತ, ಜನನ ಮತ್ತು ಮರಣ, ಉಡುಗೆ ತೊಡುಗೆ ವೈದ್ಯಪದ್ಧತಿ, ನ್ಯಾಯ ಪದ್ಧತಿ, ನಂಬಿಕೆ ನಿಷೇಧಗಳು, ಇವುಗಳನ್ನು ವಿಶೇಷ ಆಚರಣೆಗಳಲ್ಲಿ ಹಾಗೂ ವರ್ಷಿಕಾಚರಣೆಗಳಲ್ಲಿ ಜಾತ್ರೆ ಉತ್ಸವಗಳು ಹಾಗೂ ಹಬ್ಬ ಹರಿದಿನಗಳನ್ನು ಸೇರಿಸಲಾಗಿದೆ.

ಐದನೇಯ ಅಧ್ಯಯನದಲ್ಲಿ ಭಾಷೆ ಮತ್ತು ಸಾಹಿತ್ಯ ಭಾಷೆಯಲ್ಲಿ ಗಾಣಿಗರು ಮಾತನಾಡುವ ಭಾಷೆಗಳು. ಮನೆ, ಹಾಗೂ ವ್ಯಾಪಾರದಲ್ಲಿ ಬಳಸುವ ಭಾಷೆಗಳು. ಸಾಹಿತ್ಯದಲ್ಲಿ ಗಾಣಿಗರ ಜಾನಪದ ಕಥೆಗಳು, ಐತಿಹ್ಯ ಪುರಾಣ, ಶಿಷ್ಠ ಸಾಹಿತ್ಯ, ಗಾಧೆಗಳು ಒಗಟುಗಳು.

ಆರನೇ ಅಧ್ಯಾಯದಲ್ಲಿ ಗಾಣಿಗ ಸಮುದಾಯದ ಆರ್ಥಿಕ ಶೈಕ್ಷಣಿಕ ಮತ್ತು ರಾಜಕೀಯ ಜೀವನ.

ಏಳನೆಯ ಅಧ್ಯಾಯದಲ್ಲಿ ಗಾಣಿಗರ ಸಮುದಾಯದ ಮಹಿಳೆ, ಮಹಿಳೆಗಿರುವ ಪಾತ್ರ, ಹಬ್ಬ ಹರಿದಿನಗಳಲ್ಲಿ ವ್ಯಾಪಾರದಲ್ಲಿ ವ್ಯವಸಾಯದಲ್ಲಿ ನಿರ್ಣಯ ತೆಗೆದುಕೊಳ್ಳುವ ಸಂದರ್ಭಗಳಲ್ಲಿ ಸ್ವಂತ ಉದ್ಯೋಗಸ್ಥರು.

ಎಂಟನೆಯ ಅಧ್ಯಾಯದಲ್ಲಿ ಆಧುನಿಕತೆ ಮತ್ತು ಗಾಣಿಗರು ಗಾಣಿಗರ ವೃತ್ತಿ, ಎಣ್ಣೆ ತಯಾರಿಕೆಯ ಪರ್ಯಾಯ ವ್ಯವಸ್ಥೆಗಳು, ಬೇರೆಯವರ ಸ್ಪರ್ಧೆಗಳು, ಹೊಸ ನಮೂನೆಯ ಎಣ್ಣೆಗಳು ಅವುಗಳ ಪರಿಣಾಮಗಳು ಪ್ಯಾಕಿಂಗ್ ಸಿಸ್ಟಮ್ ಮೀಸಲಾತಿ ಸಲಹೆಗಳು, ಸಾಂಸ್ಕೃತಿಕ ಪರಿವರ್ತನೆ.

ಕೊನೆಯದಾಗಿ 'ಸಮಾರೋಪ' ಮತ್ತು 'ಅನುಬಂಧ'ಗಳಿದ್ದು ಅನುಬಂಧ ಒಂದರಲ್ಲಿ ಎರಡರಲ್ಲಿ ಪ್ರಶ್ನಾವಳಿ ಮೂರರಲ್ಲಿ ಉಪಕರಣಗಳ ಚಿತ್ರಗಳು. ಅನುಬಂಧ ನಾಲ್ಕರಲ್ಲಿ ಗ್ರಂಥಗಳ ಸೂಚಿ, ಅಡಕವಾಗಿದೆ.

**೧.೪. ಗಾಣಿಗರ ಕುರಿತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ**

ಗಾಣಿಗರ ಸಂಸ್ಕೃತಿಯ ಮೂಲಶೋಧನೆ ಅವರ ನಂಬಿಕೆಗಳು ಮತ್ತು ಆಚರಣೆಗಳ ವಿವರ ಈ ಸಮುದಾಯದ ಸಮಗ್ರ ಸಂಸ್ಕೃತಿ ಇದು ಒಳಗೊಂಡಿರುವ. ಚಾರಿತ್ರಿಕ, ಸಾಮಾಜಿಕ ಪ್ರಭಾವ ಮತ್ತು ಪ್ರೇರಣೆಗಳು ಮತ್ತು ಅನುಮಾನಗಳ ಚರ್ಚೆ ನಡೆಸುವುದು ಆ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎಂದು ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಗಾಣಿಗರನ್ನು ಕುರಿತು. ನಡೆದಿರುವ ಅಧ್ಯಯನಗಳ ಸಮೀಕ್ಷೆಗೆ ಹೊರತಾಗಿ ನಿರಾಶೆಯ ನಡುವೆಯೂ ಕೆಲವೊಂದು ಕುತೂಹಲಕಾರಿ ಸಂಗತಿಗಳು ಕಂಡುಬರುತ್ತವೆ.

ಗಾಣಿಗರನ್ನು ಕುರಿತು ಕೆಲವು ವಿವರವಾದ ಮಾಹಿತಿಗಳನ್ನು ಸಂಗ್ರಹಿಸುವ ದೃಷ್ಠಿಯಿಂದ ಬೆಂಗಳೂರು ರೋರಲ್ ಗೆಜಿಟಿಯರ್ ಕಾಣುವುದಿಷ್ಟು. ಗಾಣಿಗರು ಎಣ್ಣೆ ಉತ್ಪಾದಿಸುವ ವ್ಯಕ್ತಿಯವರು, ಈ ಶಬ್ದವು 'ಗಾಣ' ಎಂಬ ಕನ್ನಡ ಶಬ್ದದಿಂದ ಬಂದದ್ದಾಗಿದೆ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲೆಲ್ಲ ಈ ಸಮುದಾಯದ ಜನ ಹರಡಿದ್ದಾರೆ. ೧೯೮೪ರಲ್ಲಿ ಈ ಜಿಲ್ಲೆಯಲ್ಲಿ ೧೫, ೨೦೭ ಮತ್ತು ಇವರಲ್ಲಿ ಹಲವಾರು ಉಪಜಾತಿಗಳಿವೆ. ಅವುಗಳೆಂದರೆ ಸಜ್ಜನರು, ಜ್ಯೋತಿಪಣ, ಜ್ಯೋತಿನಗರ ಮೊದಲಾದವು ಇವರಲ್ಲಿ ಕಿರುಗಾಣಿಗ ಮತ್ತು ಹೆಗ್ಗಾಣಿಗರೆಂಬ ಎರಡು ಉಪಜಾತಿಗಳಿವೆ. ಹೆಗ್ಗಾಣಿಗರು ಗಾಣಕ್ಕೆ ಎರಡೆತ್ತನ್ನು

ಬಳಸಿದರೆ, ಕಿರುಗಾಣಿಗರು ಒಂದೆತ್ತಿನಿಂದ ಗಾಣ ಬಳಸುತ್ತಾರೆ. ಸಾಮಾನ್ಯವಾಗಿ ಸೆಟ್ಟಿ ಎಂಬ ಉಪ ಹೆಸರನ್ನು ತಮ್ಮಲ್ಲಿ ಬಳಸುವರು, ಶಿವನ ಆರಾಧಕರು. ಇವರು ಎಲ್ಲಾ ವಿಶೇಷ ಸಮಾರಂಭಗಳಲ್ಲಿ ದಾಸಯ್ಯನನ್ನು ಆಹ್ವಾನಿಸುವರು, ಇವರು ಮಾಂಸಹಾರಿಗಳಲ್ಲ ಸಸ್ಯಹಾರಿಗಳಾಗಿದ್ದು ಲಿಂಗಾಯತ ಸಜ್ಜನ ಗಾಣಿಗರು ಸಸ್ಯಹಾರಿಗಳಾಗಿದ್ದು ಕನ್ನಡ ಮಾತೃಭಾಷೆಯಾಗಿ ಮಾತನಾಡುತ್ತಾರೆ.

ಬೆಂಗಳೂರು ರೂರಲ್ ಗೆಜಿಟಿಯರ್ ಸಂಪಾದಕರು ಗಾಣಿಗರ ಬಗ್ಗೆ ಸ್ಪಷ್ಟ ಚಿತ್ರಣವನ್ನು ಕೊಡದಿದ್ದರೂ ಅವರ ಮೂಲದ ಬಗ್ಗೆ ಸ್ಪಷ್ಟ ಮಾಹಿತಿ ಕೊಟ್ಟಿದ್ದಾರೆ. ಗಾಣಿಗರು ಹೆಸರೇ ಸೂಚಿಸುವಂತೆ ಗಾಣದಿಂದ ಎಣ್ಣೆ ಉತ್ಪಾದಕರನ್ನು ಹಾಗೂ ಈ ಕಾಯಕ ಮಾಡುವವರನ್ನು ಗಾಣಿಗರೆಂದು ಪ್ರಾಚೀನ ದಿನಮಾನಗಳಿಂದಲೂ ಕರೆದುಕೊಳ್ಳಲಾಗಿದೆ.

ಗೆಜೆಟಿಯರ್ ಸಂಪಾದಕರು ಹೇಳುವುದೆಂದರೆ ಗಾಣಿಗರ ಸಾಮಾಜಿಕ ಬದುಕನ್ನು ಚಿತ್ರಿಸುವಂತದ್ದಾಗಿದೆ. ಗಾಣಿಗರು ತಮ್ಮ ಒಳಪಂಗಡಗಳಲ್ಲಿ ಮತ್ತು ಬೆಡಗುಗಳಲ್ಲಿ ವಿವಾಹವಾಗುತ್ತಾರೆ. ವಿನಃ ಇತರೆ ಲಿಂಗಾಯತರಲ್ಲಿ ವಿವಾಹವಾಗುವುದಿಲ್ಲ. ಗಾಣಿಗರನ್ನು ಸಾಮಾಜಿಕ ದೃಷ್ಠಿಯಿಂದ ಅಧ್ಯಯನ ನಡೆಸುವುದರಿಂದ ಇದು ಮಹತ್ವದ್ದಾಗಿದೆ.

ಬೆಂಗಳೂರು ರೂರಲ್ ಗೆಜೆಟಿಯರ್‌ನಲ್ಲಿ ಸಿಗುವ ಮಾಹಿತಿಗಳು ಗಾಣಿಗರ ಅಧ್ಯಯನಕ್ಕೆ ಸಹಕಾರಿಯಾಗಿವೆ.

ಗಾಣಿಗರ ಇನ್ನಷ್ಟು ಮಾಹಿತಿಗಳು ಪೀಪಲ್ ಆಫ್ ಇಂಡಿಯಾ ಕರ್ನಾಟಕ ಕೆ.ಎಸ್ ಸಿಂಗ್‌ರವರ ವಾಲ್ಯೂಂ XXVI ಪಾರ್ಟ್ ಟೂ ಪುಟ ೪೮೨, ೨೦೦೩ರ ಸಂಪುಟದಲ್ಲಿ ದೊರಕುತ್ತದೆ.

ಗಾಣಿಗರು ಎಣ್ಣೆ ಉತ್ಪಾದಿಸುವ ಸಮುದಾಯದವರಾಗಿದ್ದಾರೆ. ಗಾಣ ಎಣ್ಣೆ ಉತ್ಪಾದಿಸುವ ಉಪಕರಣ ಯಾರು ಗಾಣದಿಂದ ಎಣ್ಣೆ ಉತ್ಪಾದಿಸುತ್ತಾರೋ ಅವರನ್ನು ಗಾಣಿಗರೆನ್ನುತ್ತಾರೆ. ಈ ಸಮುದಾಯದಲ್ಲಿ ಐದು ಪಂಗಡಗಳಿವೆ ಅವುಗಳೆಂದರೆ ಜ್ಯೋತಿಪಣ, ಸಜ್ಜನ, ಹೆಗ್ಗಾಣಿಗ, ಕಿರುಗಾಣಿಗ ಮತ್ತು ತೆಲುಗು ಗಾಣಿಗದವರಾಗಿದ್ದಾರೆ. ಥರ್ಸ್ಟನ್ (೧೯೦೯) ಇದರ ಜೊತೆಗೆ ಮರ ಮತ್ತು ಕಲ್ಲು ಎಂಬ ಎರಡು ಉಪ ವಿಭಾಗಗಳಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕಿರುಗಾಣಿಗರು ವ್ಯವಸಾಯ ಅವಲಂಬಿಸಿ ಜೀವನ ನಡೆಸುತ್ತಾರೆ. (2A)ಎಂದು ಹಿಂದುಳಿದ ವರ್ಗದವರಾಗಿ ಪರಿಗಣಿಸಿದ್ದಾರೆ. ಕಿರುಗಾಣಿಗರ ಆರ್ಥಿಕ ಜೀವನ, ಸಾಮಾಜಿಕ ಜೀವನ ಕೌಟುಂಬಿಕ ಮತ್ತು ವೈವಾಹಿಕ ಜೀವನ ಆಡುವ ಭಾಷೆಗಳು, ಬಾಂದವ್ಯ, ಮದುವೆ ಸಂಪ್ರದಾಯಗಳು, ಧಾರ್ಮಿಕ ನಂಬಿಕೆಗಳು ಮತ್ತು ವಿಧಿ ನಿಷೇಧಗಳು, ಆರಾಧಿಸುವ ದೈವಗಳು, ಹಬ್ಬಹರಿದಿನಗಳು, ಗೌರಿಹಬ್ಬ, ಮಹಾನವಮಿ, ಶಿವರಾತ್ರಿ, ದೀಪಾವಳಿ, ಸಂಕ್ರಾಂತಿ, ಮಾಟಮಂತ್ರಕ್ಕೆ ಸಂಬಂಧಿಸಿದ ವಿಚಾರಗಳು. ಈ ಹಿನ್ನೆಲೆಯಲ್ಲಿ ಕಿರುಗಾಣಿಗರ ಸಮಗ್ರ ಅಧ್ಯಯನ ಮಾಡಿ ಕನ್ನಡ ಜಾನಪದ ವಿಶ್ವಕೋಶದಲ್ಲಿ ಪುಟ-೬೪೫ ಜಾನಪದ ಒಕ್ಕಲು ಪುಸ್ತಕ ರಚಿಸಿದ್ದಾರೆ.

೧೨ನೇ ಶತಮಾನದ ಬಸವಣ್ಣನವರ ವಚನಗಳಲ್ಲಿ ಗಾಣದ ಕನ್ನಪ್ಪ ಎಂಬ ಹೆಸರು ಇದೆ.

ಸರ್ವಜ್ಞನ ತ್ರಿಪದಿಗಳಲ್ಲಿ ಗಾಣಿಗ ಸಮುದಾಯವನ್ನು ಕುರಿತು ಹೇಳಿದವುಗಳಾಗಿವೆ.

ಡಾ.ಎಸ್.ಎಸ್.ಅಂಗಡಿ, ಸಂಕೀರ್ಣ ವೃತ್ತಿ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ. ಇವರು ಗಾಣಿಗರು ಬಳಸುವ ಉಪಕರಣಗಳನ್ನು ಚಿತ್ರದ ಮೂಲಕ ತಿಳಿಸಿದ್ದಾರೆ. ಅವುಗಳೆಂದರೆ. ಚಿತ್ರ.೧ ಎತ್ತಿನ ಗಾಣ, ಚಿತ್ರ.೨ ಕಣೆ, ಚಿತ್ರ.೩ ಕತ್ತರಿ, ಚಿತ್ರ.೪ ತಿರುವಣಿ, ಚಿತ್ರ.೫ ಬಳ್ಳ, ಚಿತ್ರ.೬ ಜರಖಿಡಿ, ಚಿತ್ರ.೭ ಚುಟ್ಟಿಗ, ಚಿತ್ರ.೮ ಕರಿ, ಚಿತ್ರ.೫ ಕುಸುಬಿ ಕಲ್ಲು, ಚಿತ್ರ.೬ ಗಾಣದ ಕಲ್ಲು, ಚಿತ್ರ.೭ ಚೆಂಡಕಿ, ಚಿತ್ರ.೮ ಜಗಲ್ಲ, ಚಿತ್ರ.೯ ಜಲ್ಲಿ, ಚಿತ್ರ.೧೦ ಡೊಂಕಿ, ಚಿತ್ರ.೧೧ ನಗ, ಚಿತ್ರ.೧೨ ಸಾಣ್ಣಿ, ಚಿತ್ರ.೧೩ ಹಾರಿ.

ಅಧ್ಯಯನಗಳಲ್ಲಿ ಮುಖ್ಯವಾಗಿ ಮದುವೆ, ಋತುಮತಿ, ಶ್ರೀಮಂತ ಜನನ ಮತ್ತು ಮರಣ ಸೂತಕಗಳು ಧಾರ್ಮಿಕ ಜಾತ್ರೆ ಉತ್ಸವಗಳು ಹಾಗೂ ಆಚರಿಸುವ ಹಬ್ಬ ಹರಿದಿನಗಳು ಇವುಗಳ ಬಗ್ಗೆ ಅಧ್ಯಯನಗಳು ನಡೆದಿವೆ. ಸಜ್ಜನ ಗಾಣಿಗರು ಮತ್ತು ಜ್ಯೋತಿ ಗಾಣಿಗರು ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವ ಗಾಣಿಗರಾಗಿದ್ದಾರೆ.

**ಎಡ್ಗರ್ ಥರ್‍ಸ್ಟನ್:** ಗಾಣಿಗರ ವಿಚಾರವಾಗಿ ಈ ಕೆಳಕಂಡಂತೆ ತಿಳಿಸಿದ್ದಾರೆ. ಗಾಣಿಗ ಎಂಬ ಪದವು ತೆಲುಗಿನ ಗಾನುಗ ಎಂಬ ಪದದಿಂದ ಉತ್ಪತ್ತಿಯಾಗಿದೆ. ಎಣ್ಣೆಗಾಣ ಈ ಸಮುದಾಯದಲ್ಲಿ ಮೂರು ಭಾಗಗಳಿವೆ. ಈ ಸಮುದಾಯದಲ್ಲಿ ಉಪಜಾತಿಗಳಲ್ಲಿ ಒಟ್ಟಿಗೆ ಸಹ ಬೋಜನವಾಗಲಿ ಆಂತರಿಕ ವೈವಾಹಿಕ ಕ್ರಮವಾಗಲಿ ನಡೆಯುವುದಿಲ್ಲ. ಈ ಸಮುದಾಯದ ಮೂರು ಭಾಗಗಳು ಈ ಕೆಳಗಿನಂತಿವೆ.

೧. **ಹೆಗ್ಗಾಣಿಗರು:** ಕಲ್ಲಿನ ಗಾಣದಿಂದ ಎಣ್ಣೆ ತೆಗೆಯುವವರು ಇವರು ಎರಡು ಎತ್ತು ಬಳಸುತ್ತಾರೆ ಎಣ್ಣೆ ತೆಗೆಯುತ್ತಾರೆ.

೨. **ಕರಿಗಾಣಿಗರು:** ಕಟ್ಟಿಗೆಯಿಂದ ತಯಾರಿಸಿದ ಗಾಣದಿಂದ ಎಣ್ಣೆ ತೆಗೆಯುತ್ತಾರೆ.

೩. **ಬಂಡಿ ಎಡ್ಡು ಗಾಣಿಗ:** ಒಂದು ಎತ್ತಿನಿಂದ ಎಣ್ಣೆ ತೆಗೆಯುತ್ತಾರೆ. ಇವರೆಲ್ಲರ ಲಕ್ಷಣಗಳು ಜ್ಯೋತಿಗಾಣಿಗರಲ್ಲಿ ಕಂಡುಬರುತ್ತಿದ್ದು ಇವರು ನಗರವಾಸಿಗಳಾಗಿದ್ದಾರೆ. ಇವರು ಬೇರೆ ಬೇರೆ ಕೆಲಸಗಳನ್ನು ಕೈಗೊಳ್ಳುತ್ತಿದ್ದಾರೆ. Pam Lives ''ಅಂಗೈ ಅಗಲದ ಎಲೆ'' ತಯಾರಿಕೆ ಛತ್ರಿ, ಭೂ ಸಾಗುವಳಿ, ಕಾರ್ಮಿಕರಾಗಿ ಇವರು ಬ್ರಾಹ್ಮಣರನ್ನು ತಮ್ಮ ಪೂಜಾ ಸಮಾರಂಭಗಳಲ್ಲಿ ನೇಮಕ ಮಾಡುತ್ತಾರೆ. ಇವರ ಪ್ರಮುಖ ಗುರು ಆನೇಗುಂದಿಯ ವ್ಯಾಸರಾಯ ಮಠದ ಮುಖ್ಯಸ್ಥನಾಗಿರುತ್ತಾನೆ. ಇವರಲ್ಲಿ ಬಾಲ್ಯ ವಿವಾಹ ಪದ್ಧತಿ ರೂಢಿಯಲ್ಲಿದೆ, ವಿಧವಾ ಮರುವಿವಾಹಕ್ಕೆ ಅವಕಾಶವಿಲ್ಲ. ಇವರು ಮೀನು ಮಾಂಸ (Folus) ಸೇವಿಸುತ್ತಾರೆ. ಆದರೆ ಮಧ್ಯವನ್ನು ಸೆವಿಸುವುದಿಲ್ಲ (ಚಟ್ಟಿ) ಇವರ ಮುಖ್ಯ ಉಪಕರಣವಾಗಿದೆ. ೧೮೯೧

ಮದ್ರಾಸ್ ಜನಗಣತಿಯ ಪ್ರಕಾರ ಶೃಂಗೇರಿ ಗಾಣಿಗರು ಮಠದ ಗುರುವನ್ನು ಮುಖ್ಯಸ್ಥರನ್ನಾಗಿಸಿಕೊಂಡಿದ್ದಾರೆ. ಅಷ್ಟೇ ಅಲ್ಲದೆ ಹಾವಿಗ ಬ್ರಾಹ್ಮಣನನ್ನು ತಮ್ಮ ಪೂಜಾ ಸಮಾರಂಭಗಳಿಗೆ ನೇಮಿಸಿಕೊಳ್ಳುತ್ತಾರೆ.

ವಿ.ಎನ್. ನರಸಿಂಹ ಐಯ್ಯಂಗಾರ್, ಮೈಸೂರಿನ ವ್ಯಾಪ್ತಿಯಲ್ಲಿ ಬರುವ ಗಾಣಿಗರು ಅಂಶಗಳನ್ನು ಹೊಂದಿದ್ದಾರೆ. ಗಾಣಿಗ ಸಮುದಾಯದಲ್ಲಿ (ನಾಗರತ್) ಎಂಬ ಪ್ರಬಲ ಆತ್ಮೀಯ ಸಂಬಂಧ ಹೊಂದಿದ್ದಾರೆ.

ಈ ಗಾಣಿಗರಿಗೆ ಲಿಂಗಾಯತರು ಬಲಗೈ ಬಂಟರಾಗಿದ್ದಾರೆ. ಭಾರತದಲ್ಲಿ ಐತಿಹಾಸಿಕವಾಗಿ ಗಾಣಿಗ ಸಮುದಾಯದ ಜನರು ಕೂಡ ಉನ್ನತ ಸ್ಥಾನಮಾನ ಸಮಾಜದಲ್ಲಿ ಹೊಂದಿದ್ದಾರೆ. ಇವರು ಉತ್ತರ ಭಾರತದಿಂದ ವಲಸೆ ಬಂದವರಾಗಿದ್ದಾರೆ. ಮೈಸೂರಿನ ಗಣ್ಯ ವ್ಯಕ್ತಿಯಾದ ಮಲ್ಲರಾಜ ಅರಸ್ ಅವರ ಅಭಿಪ್ರಾಯದಲ್ಲಿ ಬೆಂಗಳೂರಿನ ಮಾರುಕಟ್ಟೆಗೆ ಪ್ರಪ್ರಥಮವಾಗಿ ಹೆಸರನ್ನು ಇಡಲಾಯಿತು. ಪ್ರಾಥಮಿಕ ಉದ್ಯೋಗ ಎಣ್ಣೆ ಹಿಂಡುವುದು. ಆದರೆ ಕೆಲವು ವ್ಯಾಪಾರಸ್ಥರು ಹತ್ತಿ ಎಣ್ಣೆ ಬೀಜಗಳು ಮತ್ತು ಸಾಗುವಳಿದಾರರಾಗಿದ್ದಾರೆ. ಕೆಲವು ವರ್ಷಾನಂತರ ಪ್ರಾಣಿಗಳಿಂದ ಎಣ್ಣೆ ತೆಗೆಯುತ್ತಿದ್ದ ಗಾಣಗಳು ಜನರ ಮೂಢನಂಬಿಕೆಗೆ ಕಾರಣವಾದವು ಶಾಸ್ತ್ರಗಳ ಪ್ರಕಾರ ಎಣ್ಣೆ ತಯಾರಿಸಲೂ ಪ್ರಾಣಿಗಳನ್ನು ಬಸಲುವುದು ಪಾಪಕಾರ್ಯ (ಪಾಪಕೃತ್ಯ) ಆದರೂ ದೇವತೆಗಳ ದೀಪಬೆಳಗಿಸಲು ಎಣ್ಣೆ ಬಳಸುತ್ತಿದ್ದರು ಮಾನವರು ಈ ಎಣ್ಣೆಯನ್ನು ದೇವಸ್ಥಾನಗಳಲ್ಲಿ ದೇವರಿಗೆ ಬಳಸುತ್ತಿದ್ದರು.

**(Mr.W.Francis) ಮಿ.ಡಬ್ಲೂ ಪ್ರಾನ್ಸ್‌ಸ್ ಪ್ರಕಾರ:** ಹುಣಸೆ ಮರದ ಹೃದಯ ಭಾಗದ ಕಟ್ಟಿಗೆಯಿಂದ ಗಾಣದ ಬಾನಿಯನ್ನು ತಯಾರಿಸುತ್ತಾರೆ. ಕಟ್ಟಿಗೆಯಿಂದ ಗಾಣವನ್ನು ಗಟ್ಟಿಯಾಗಿ ಬಿಗಿಯಲ್ಪಟ್ಟರೆ. ಈ ಸಲಕರಣೆ ಒಂದು ತುದಿಯನ್ನು ಭೂಮಿಯ ಸಮೀಪದಲ್ಲಿ ಕಟ್ಟಲಾಗುತ್ತದೆ. ಇದಕ್ಕೆ ಎರಡು ಎತ್ತುಗಳ ಸಹಾಯದಿಂದ ಎಣ್ಣೆ ತೆಗೆಯಲು ಗಾಣದ ಸುತ್ತ ಸುತ್ತಿಸುತ್ತಾರೆ. ಎತ್ತುಗಳು ಸುತ್ತುವದರಿಂದ ಹಾಗೆ ಎಣ್ಣೆಕಾಳುಗಳು ಜಜ್ಜಲ್ಪಟ್ಟು (Rovnd) ಅಕಾರದ ಕೆಳಗೆ ಎಣ್ಣೆ ಮತ್ತು ಎಣ್ಣೆ ಹಿಂಡಿ ಕೆಳಗಡೆ ತಳ್ಳಲ್ಪಡುತ್ತದೆ.

ಒಂಟೆತ್ತಿನ ಗಾಣಿಗರು ಎಣ್ಣೆ ಮಿಲ್‌ನ ಗಾಣಿಗರು ಎರಡೆತ್ತಿನ ಗಾಣಿಗರಿಗಿಂತ ಒಂಟೆತ್ತಿನ ಗಾಣಿಗರು ಶ್ರೇಷ್ಠ ಅಥವಾ ಉನ್ನತ ಅಂತಸ್ತನ್ನು ಹೊಂದಿದ್ದಾರೆ. ಒಂಟೆತ್ತಿನ ಗಾಣಿಗರಲ್ಲಿ ಉಪಪಂಗಡಗಳಿವೆ ೧. ದೇವ ೨. ಒಂಟೆತ್ತು ೩. ಕಾಶಿ ಗಾಣಿಗ ೪ ತೇಲಿ ಗಾಣಿಗ

ದೇವ ಮತ್ತು ಒಂಟೆತ್ತಿನ ಗಾಣಿಗರಲ್ಲಿ ಅಂತರ್ ವಿವಾಹ ಅಥವಾ ಅಂತರ್ ಸಂಬಂಧಗಳು ಏರ್ಪಡುತ್ತವೆ. ಆದರೆ ಕಾಶಿ ಮತ್ತು ತೇಲಿ ಗಾಣಿಗರಲ್ಲಿ ಗೋತ್ರ ಅಥವಾ ಬೆಡಗುಗಳ ಬಗ್ಗೆ ವಿಶೇಷ ನಂಬಿಕೆ ಇದೆ. ಉದಾ: ಭದ್ರ ನೂಲು ಗೋತ್ರ, ಬಾಲ ನೂಲು ಗೋತ್ರ ಇವರಲ್ಲಿ "Erythroxylon Monogynum"ಈ ಗಿಡವನ್ನು ಕತ್ತರಿಸಲು ನಿಷೇಧವಿದೆ. ವೀರ ನೂಲು ಮತ್ತು ವಿತತ್ತ ನೂಲು ಈ ಗೋತ್ರದ ಜನರು (Feronia elephontum)ಈ ಮರವನ್ನು ಕತ್ತರಿಸಲು ನಿಷೇಧವಿದೆ. ಒಂದು ನೂಲು ಗೋತ್ರದವರು (Nyctam ther orbor-tristis)ಈ ಮರವನ್ನು ಕತ್ತರಿಸಬಹುದು, ಮತ್ತೆ ಬೇರೆ ಗೋತ್ರದ ಜನರು, ಅರಿಷಿಣ, ಕಬ್ಬು, ರಾಗಿ ಈ ಬೆಳೆಗಳನ್ನು ಬೆಳೆಯಲು ನಿಷೇಧಿಸಲಾಗಿದೆ.

ಒಂಟೆತ್ತು ಗಾಣಿಗರು ಶೈವಭಕ್ತರು, ಲಿಂಗಾಯತ ಬ್ರಾಹ್ಮಣರು ಆರ್.ಎಸ್.ಎಸ್. ಇವರು ಕೊರಳಲ್ಲಿ ಪವಿತ್ರವಾದ ಮೂರು ಧಾರವನ್ನು ಧರಿಸುತ್ತಾರೆ. ಕೆಲವರು ಹಣೆಯ ಮೇಲೆ ಕೆಂಪುಗಂಧ ಧರಿಸುತ್ತಾರೆ ಇವರು ವಿಷ್ಣುವಿನ ಆರಾಧಕರು, ಕೆಲವು ಪ್ರದೇಶಗಳಲ್ಲಿ ಕೆಲವು ಜನರು ಚೌಡೇಶ್ವರ ದೇವರ ಆರಾಧಕರಾಗಿದ್ದಾರೆ. ಮತ್ತು ಕೃಷ್ಣಜಿಲ್ಲೆಯಲ್ಲಿ ಮಲ್ಲಿಕಾರ್ಜುನ ಸ್ವಾಮಿ ಅವರ ಆರಾಧ್ಯ ದೇವರು ಎಂದು ಹೇಳುತ್ತಾರೆ.

ಎಣ್ಣೆ ಹಿಂಡಿ ಮತ್ತು ಮೇಲಿಂದ ತಯಾರಾದ ಎಣ್ಣೆಯನ್ನು ಕೇವಲ ಎಡಗೈಯಿಂದ ಮಾತ್ರ ಉಪಯೋಗಿಸಿ ತೆಗೆಯುತ್ತಾರೆ. ಈ ಜನರಲ್ಲಿ ಏನಾದರೂ ಅಪರಾಧ ಕ್ರಿಯೆಗಳು ಸಂಭವಿಸಿದರೆ, ಬಂಗಾರದ ಚೂರಿಯಿಂದ ನಾಲಿಗೆಗೆ ಬರಿ ಎಳೆದುಕೊಳ್ಳುವುದು ಒಂದು ಸಹಜವಾದ ಸಂಪ್ರದಾಯವಾಗಿದೆ ಇದರಿಂದ ಅಪರಾಧ ಮಾಡಿದ ವ್ಯಕ್ತಿ ಪವಿತ್ರನಾಗುತ್ತಾನೆ ಎಂಬ ನಂಬಿಕೆ ಇದೆ.

ಈ ಜನರಲ್ಲಿ ವಿವಾಹದ ವಿಧಿ-ವಿಧಾನಗಳು, ತೆಲುಗು ಜನರ ರೀತಿಯಲ್ಲಿವೆ. ಆದರೆ ಮುಂಗೈಗೆ ಪವಿತ್ರವಾದ ದಾರವನ್ನು ಕಟ್ಟಲಾಗುತ್ತದೆ.

ಮದುವೆ ಸಮಾರಂಭ ಮುಗಿಯುವರೆಗೆ ಮಧು ಮಗನ ಕೈಯಲ್ಲಿ (Batu)ನೀಡಲಾಗುತ್ತದೆ. ವಿವಾಹದ ದಿನ ಮಧುಮಗ ಪವಿತ್ರವಾದ ಧಾರವನ್ನು ಧರಿಸಿರುತ್ತಾನೆ. ಮಧು ಮಗಳಿಗೆ ೧೦೧ ಧಾರದ ಜೊತೆಗೆ ತಾಳಿಯನ್ನು ಸೇರಿಸಲಾಗಿರುತ್ತದೆ. ವಿವಾಹದ ಕೊನೆಯ ದಿನ ಧಾರವನ್ನು ತೆಗೆದು (Bootu)ಧರಿಸಲಾಗುತ್ತದೆ. ವಿವಾಹದ ೩ನೇ ದಿವಸ ಮಧುಮಗ ಮತ್ತು ಮಧುಮಗಳು (Jammy) ಮರವನ್ನು ಪೂಜಿಸುತ್ತಾರೆ. ನಂತರ ನವಯುವಕರು ''ಬಾಲಧಸುಲು'' ಈ ಗಿಡವನ್ನು ಪೂಜಿಸುತ್ತಾರೆ. ಮಧುಮಗ ಮತ್ತು ಮಧು ಮಗಳು ಎಸೆಯಲ್ಪಟ್ಟ ಪವಿತ್ರವಾದ ಧಾರವನ್ನು ಈ ಬಾಲಧಸುಲುಗಳು ಧರಿಸಬಹುದು. ಈ ಸಮುದಾಯದಲ್ಲಿ ಸತ್ತವರನ್ನು ಭೂಮಿಯಲ್ಲಿ ಊಳುತ್ತಾರೆ. ಅವಿವಾಹಿತ ಪುರುಷನು ಸತ್ತರೆ ಎಕ್ಕೆ ಗಿಡಕ್ಕೆ ಮದುವೆ ಮಾಡಿ ಹೂವಿನಿಂದ ಅಲಂಕರಿಸಿ ಹೂಳುತ್ತಾರೆ. ಅಥವಾ ಅಂತ್ಯ ಸಂಸ್ಕಾರ ಮಾಡುತ್ತಾರೆ. ಕೊನೆಯ ಅಂತ್ಯ ಸಂಸ್ಕಾರ ಸಮಾರಂಭವನ್ನು ಹನ್ನೊಂದನೆ ದಿನ ನೇರವೇರಿಸುತ್ತಾರೆ. ಕಾಣಿಕೆ ಆಹಾರವನ್ನು ನೀಡಿ ವ್ಯತ್ಯಾಸ ಆತ್ಮಕ್ಕೆ ಶಾಂತಿಯನ್ನು ಕೋರುತ್ತಾರೆ. ವಿಧವೆಯರಿಗೆ ಬಳೆಗಳನ್ನು ಒಡೆಯುತ್ತಾರೆ. ಆಸ್ತಿಯ ಜೊತೆಗೆ ಬಳೆಗಳನ್ನು ಒಡೆದು ಹಾಕುತ್ತಾರೆ.

ಒಟ್ಟಿನಲ್ಲಿ ಗಾಣಿಗರ ವೃತ್ತಿ ಜೀವನದ ಹೆಸರು ಲಿಂಗಾಯತ ಎಣ್ಣೆ ಗಾಣಿಗ ಎಂಬುದಾಗಿದೆ. ದೇಜಗೌ ಸಾಹಿತ್ಯ ಮಾಲೆ-ಕುಸುಮ-೧೫ ಜನಪದ ಒಕ್ಕಲು ಡಾ ಜಯಲಕ್ಷ್ಮೀ ಸೀತಾಪುರ ಪ್ರಕಾಶಕರು, ತಳಗವಾದಿ ಪ್ರಕಾಶನ ೨೨ ವಿಜಯಶ್ರೀ, ಕುವೆಂಪು ನಗರ ಮೈಸೂರು ಇವರು ಮೈಸೂರು ಜಿಲ್ಲೆಯ ಗಾಣಿಗರನ್ನು ಕುರಿತು ಜನಪದ ಒಕ್ಕಲು ಪುಸ್ತಕದಲ್ಲಿ ತಿಳಿಸಿದ್ದಾರೆ. ಇವರ ಹೇಳಿಕೆಯ ಪ್ರಕಾರ ಜಾತಿಗಳು ಕುಲ ಕಸುಬನ್ನು ಅವಲಂಬಿಸಿವೆ. ವ್ಯವಸಾಯ ಮಾಡುವವರು ಒಕ್ಕಲಿಗರಾದರು, ಕುರಿ ಸಾಕುವವರು ಕುರುಬರಾದರು, ಬಟ್ಟೆ ಮಡಿಮಾಡುವವ ಮಡಿವಾಳನಾದ ಚಪ್ಪಲಿ ತಯಾರಿಸುವವ ಚಮ್ಮಾರ, ಎಣ್ಣೆ ಉತ್ಪಾದಿಸುವವನನ್ನು 'ಗಾಣಿಗ' ಎಂದು ಕರೆದಿದ್ದಾರೆ. ಮರದ ಗಾಣಕ್ಕೆ ಎಣ್ಣೆ ಕಾಳುಗಳನ್ನು ಹಾಕಿ ಎತ್ತು ಅಥವಾ ಹಸುವಿನ ಸಹಾಯದಿಂದ

ಸುತ್ತು ಹೊಡೆದು ಎಣ್ಣೆ ತೆಗೆಯುವುದರಿಂದ ಗಾಣಿಗರೆಂದು ನಾಮಾಂಕಿತರಾದರು. ಇವರಲ್ಲಿ ಬೆಳಿಗ್ಗೆನೆ ಗಾಣಿಗ ಪುರುಷನನ್ನು ನೋಡಿದರೆ ಗೋಳು ಎಂಬ ಗಾದೆ ಮಾತಿದೆ. ಆದರೆ ಎಣ್ಣೆ ಕುಕ್ಕೆಯನ್ನು ಹೊತ್ತ ಸ್ತ್ರೀಯನ್ನು ನೋಡಿದರೆ, ಲಕ್ಷ್ಮೀನ ನೋಡಿದ ಹಾಗೆ ಹೋಗುವ ಕಾರ್ಯಗಳು ಕೈಗೂಡುತ್ತವೆ ಎಂಬ ನಂಬಿಕೆಯಿದೆ.

ಗಾಣಿಗರ ಪಂಗಡಗಳಲ್ಲಿ ಹೆಗ್ಗಾಣಿಗರು, ತಮಿಳು ಮಾತನಾಡುವವರು ತಮಿಳು ಗಾಣಿಗರು ತೆಲಗು ಮಾತನಾಡುತ್ತಾರೆ. ಜೋಡಿ ಎತ್ತುಗಳನ್ನು ಕಟ್ಟಿಕೊಂಡು ಗಾಣ ಹೊಡೆಯುವವರನ್ನು ಜೋಡಿ ಗಾಣಿಗರು ಎಂದು ಒಂಟಿ ಎತ್ತನ್ನು ಕಟ್ಟಿಕೊಂಡು ಹೊಡೆಯುವವರನ್ನು ಒಂಟಿ ಗಾಣಿಗರು ಎಂದು ಗಾಣದಿಂದ ಎಣ್ಣೆ ತೆಗೆಯುವುದೇ ಅಲ್ಲದೆ ವ್ಯವಸಾಯ ಮಾಡುವ ಗಾಣಿಗರನ್ನು ಕಿರುಗಾಣಿಗರೆಂದು ಕರೆದಿದ್ದಾರೆ.

ಕಿರುಗಾಣಿಗರು ಶಿವನ ಆರಾಧಕರಾಗಿದ್ದರು ಇವರನ್ನು ಶಿವ ಜ್ಯೋತಿ ಬಣದವರೆಂದು ಕರೆಯಲಾಯಿತು ಶಿವನಿಗೆ ದೀಪ ಹಚ್ಚಿ ಬೆಳಕು ಮಾಡುವ ಬಣ ಎಂಬುದಾಗಿ ಹೇಳಿಕೊಳ್ಳುತ್ತಾ ಶಿವಜ್ಯೋತಿ ಬಣರಾದೆವು ಎಂಬುದಾಗಿ ಕತೃ ತಿಳಿಸಿದರು.

ಕಿರುಗಾಣಿಗರು ಅಥವಾ ಶಿವಜ್ಯೋತಿ ಬಣದವರು ಹೆಚ್ಚಾಗಿ ವ್ಯವಸಾಯಕ್ಕೆ ಅಂಟಿಕೊಂಡು ಜೀವನ ನಡೆಸುತ್ತಿದ್ದಾರೆ. ಇವರು ಪಟ್ಟಣ ವಾಸದಲ್ಲಿರುತ್ತಾರೆ. ಈ ಜನರು ಗಾಣ ಇಟ್ಟುಕೊಂಡು ಜೀವನ ನಡೆಸುವವರಲ್ಲಿ ಸಂಬಂಧ ಬೆಳೆಸುವುದಿಲ್ಲ.

ಡಾ ಮಾರ್ಕಂಡಯ್ಯನವರ ಉತ್ತರ ಕರ್ನಾಟಕದ ಗಾಣಿಗರ ಜನಪದೀಯ ಅಧ್ಯಯನವನ್ನು ಮಾಡಿದ್ದಾರೆ. ಹಾಗೂ ಬಿಜಾಪುರ ಜಿಲ್ಲೆಯ ಗಾಣಿಗರ ಸಂಘವು ಗಾಣಿಗರ ಬಗ್ಗೆ ಮಾಹಿತಿ ಒದಗಿಸುವ ''ಗಾಣ ಸಿರಿ'' ಪುಸ್ತಕವನ್ನು ಹೊರತಂದಿದ್ದಾರೆ. ಈ ಮೇಲಿನ ಎಲ್ಲರ ಅಧ್ಯಾಯಗಳು ಗಾಣಿಗರ ಸಮಗ್ರ ಅಧ್ಯಯನಕ್ಕೆ ಮಾಹಿತಿಯನ್ನು ಒದಗಿಸಿವೆ.

ಒಟ್ಟಿನಲ್ಲಿ ಗಾಣಿಗರನ್ನು ಕುರಿತು ಈವರೆಗೆ ನಡೆದಿರುವ ಸಂಶೋಧನಾ ಕಾರ್ಯ ಸಾಂಸ್ಕೃತಿಕವಾಗಿ ಸಮಗ್ರ ಹಾಗೂ ಸಕ್ರಮವಾದುದಲ್ಲ. ಅದರ ಸಂಸ್ಕೃತಿಯ ಒಂದೊಂದು ಅಂಶಗಳನ್ನು ಎತ್ತಿಕೊಂಡು ಬಿಡಿ ಬಿಡಿಯಾಗಿ ಪರಿಚಯಾತ್ಮಕ ರೂಪದಲ್ಲಿ ಸಂಗ್ರಹಕಾರ್ಯ ನಡೆದಿದೆ. ಈ ಜನರನ್ನು ಕುರಿತು ಬೇರೆ ಬೇರೆ ವಿಷಯಗಳ ಮೇಲೆ ಪಿಎಚ್.ಡಿ ಅಧ್ಯಯನಗಳು ಒಂದು ಮಾತ್ರ ಆಗಿರುತ್ತದೆ. ಡಾ.ಮಾರ್ತಂಡಯ್ಯನವರ ಉತ್ತರ ಕರ್ನಾಟಕದ ಗಾಣಿಗರ ಅಧ್ಯಯನವನ್ನು ಮಾಡಿ ಪಿಎಚ್.ಡಿ ಪಡೆದಿದ್ದಾರೆ. ಈ ಸಮುದಾಯದ ಬಗ್ಗೆ ಇನ್ನೂ ಸಾಕಷ್ಟು ಅಧ್ಯಯನಗಳು ಆಗಬೇಕಾಗಿದೆ ಆ ಹಿನ್ನೆಲೆಯೊಳಗೆ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡು ಬರುವ ಗಾಣಿಗರಾದ ಸಜ್ಜಾನ ಗಾಣಿಗರು ಮತ್ತು ಜ್ಯೋತಿ ಗಾಣಿಗರ ಬಗ್ಗೆ ಅಧ್ಯಯನ ನಡೆಸಲಾಗಿದೆ. ಅದರ ಪ್ರತಿಫಲವೇ ಈ ಸಂಶೋಧನಾ ಮಹಾಪ್ರಬಂಧ.

• • •

## ಅಧ್ಯಾಯ : ಎರಡು

# ಗಾಣಿಗ ಸಮುದಾಯ

## ಅಧ್ಯಾಯ : ಎರಡು

## ಗಾಣಿಗ ಸಮುದಾಯ

ಭಾರತೀಯ ಸಂಸ್ಕೃತಿಯಲ್ಲಿ ಏಕರೂಪದ ಸಂಸ್ಕೃತಿ ಇಲ್ಲ. ಭಾರತದ ಇತಿಹಾಸವನ್ನು ನೋಡಿದಾಗ ಹಲವು ಜನಾಂಗ ಹಲವು ಸಂಸ್ಕೃತಿಯನ್ನು ಕಾಣುತ್ತೇವೆ. ಯಾವುದೇ ಜನಾಂಗದ ಅಧ್ಯಯನವೂ ಸಂಕೀರ್ಣ ಸ್ವರೂಪದ್ದಾಗಿರುತ್ತದೆ. ಡಾರ್ವಿನ್ನನ ವಿಕಾಸವಾದ ವೈಜ್ಞಾನಿಕವಾಗಿ ಅಮಿಬಾದಿಂದ ಮಾನವನಾಗಿ ರೂಪಗೊಂಡ ಕ್ರಿಯೆಯನ್ನು ವ್ಯಕ್ತಪಡಿಸುತ್ತದೆ. ಮಾನವ ಚರಿತ್ರೆಯಲ್ಲಿ ಜಾತಿಯ ಉಗಮದ ಬಗ್ಗೆ ಖಚಿತ ಆಧಾರಗಳು ದೊರೆಯುವುದಿಲ್ಲ ವರ್ಣ ಅಥವಾ ಜಾತಿಗಳ ಋಗ್ವೇದದ ಪುರುಷ ಸೂಕ್ತದಲ್ಲಿ ತಿಳಿಸಿರುವಂತೆ ಸೃಷ್ಠಿಕರ್ತನಾದ ಬ್ರಹ್ಮನ ಒಂದೊಂದು ಅಂಗದಿಂದ ಒಂದೊಂದು ವರ್ಣಗಳು ಜನಿಸಿದವೆಂದು ಸೃಷ್ಠಿಕರ್ತ. ಬ್ರಹ್ಮನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಪಾದಗಳಿಂದ ಶೂದ್ರ ಜನಿಸಿದನೆಂದು ವಿವರಣೆ ಇದೆ. ಇದರಲ್ಲಿ ಬಾಯಿಂದ ಜನಿಸಿದ ಬ್ರಾಹ್ಮಣನಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನವಿದ್ದು ಪಾದದಿಂದ ಜನಿಸಿದ ಶೂದ್ರನಿಗೆ ಕಡಿಮೆ ಸ್ಥಾನಮಾನಗಳಿವೆ, ಈ ವರ್ಣ ವ್ಯವಸ್ಥೆಯು ಸಾಮಾಜಿಕ ಅಸಮಾನತೆಗೆ ಕಾರಣವಾಯಿತೆಂದು ಹೇಳಬಹುದು.

ಕ್ರಿ.ಪೂ, ೩೦೦ರಲ್ಲಿ ಚಂದ್ರಗುಪ್ತನ ಆ ಸ್ಥಾನಕ್ಕೆ ರಾಯಬಾರಿಯಾಗಿ ಬಂದ ಮೆಗಾಸ್ತಾನಿಸ್ ಭಾರತದಲ್ಲಿ ಏಳು ಜಾತಿಗಳನ್ನು ಗುರುತಿಸಿದ ಇವರಲ್ಲಿ ಕಂಡುಬರುವ ಜಾತಿ ನಿಷೇಧಗಳನ್ನು ತಿಳಿಸಿದ್ದಾನೆ. ಪ್ರಾಚೀನ ಸಮಾಜದಲ್ಲಿ ಕುಲ ಹದಿನೆಂಟು ಜಾತಿಗಳ ವಿವರಣೆ ಕಂಡುಬರುತ್ತದೆ. ಸಮಾಜದಲ್ಲಿ ಶೂದ್ರನದು ಕಡೆಯ ಸ್ಥಾನ.

ಶೂದ್ರ ವರ್ಗದಲ್ಲಿ ಗಾಣಿಗ, ಒಕ್ಕಲಿಗ, ಕುಂಬಾರ, ಕಂಬಾರ, ಬಣಜಿಗ, ಕ್ಷೌರಿಕ, ಅಕ್ಕಸಾಲಿಗ, ಬಡಗಿ, ಚಮ್ಮಾರ ಮುಂತಾದ ವೃತ್ತಿ ನಿರತದಲ್ಲಿ ಅಡಗಿತ್ತು, ಕಾಲ ಕಳೆದಂತೆ ಒಂದೊಂದು ವೃತ್ತಿಯಲ್ಲಿ ನಿರತರಾದವರು ಪ್ರತ್ಯೇಕ ಗುಂಪಾಯಿತು, ಒಂದೊಂದು ಸಮುದಾಯದವರು ತಮ್ಮದೇ ಆದ ಸಮುದಾಯದವರ

ಜೋಡಿ ವಿವಾಹ ಮಾಡಿಕೊಳ್ಳತೊಡಗಿದರು, ಜೀವನೋಪಾಯಕ್ಕಾಗಿ ಗಂಡು ಮತ್ತು ಹೆಣ್ಣು ಇಬ್ಬರು ದುಡಿಯಬೇಕಾಯಿತು. ಒಕ್ಕಲಿಗ ಒಕ್ಕಲಿಗರ ಹುಡುಗಿಯನ್ನು, ಕುಂಬಾರ ಹುಡುಗ, ಕುಂಬಾರ ಹುಡುಗಿಯನ್ನು ಅಕ್ಕಸಾಲಿಗ, ಅಕ್ಕಸಾಲಿಗ ಹುಡುಗಿಯನ್ನು, ಗಾಣಿಗರ ಹುಡುಗ ಗಾಣಿಗರ ಹುಡುಗಿಯನ್ನು ವಿವಾಹವಾಗುವುದು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಲಾಭವಾಗುತ್ತಿತ್ತು. ಕಾರಣ ಸಮಾನ ವೃತ್ತಿಯವರ ಮನೆಯಿಂದ ಸೊಸೆಯಾಗಿ ಬಂದ ಹುಡುಗಿಗೆ ಕುಲಕಸುಬಿನ ಬಗ್ಗೆ ಕಲಿಸಿಕೊಡುವ ಅವಶ್ಯಕತೆಯಿಲ್ಲ, ಕಲಿಕೆಯಲ್ಲಿ ಕಾಲವ್ಯಯವಾಗುವುದು ಇಂತಹ ವಿವಾಹಗಳಿಂದ ಇದು ತಪ್ಪುತ್ತದೆ. ವರ ಮತ್ತು ವಧು ಒಂದೇ ಜಾತಿಯವರಾದ್ದರಿಂದ ತಮ್ಮ ಕುಲ ವೃತ್ತಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಅನುಕೂಲವಾಯಿತು. ಇದು ಜಾತಿಯ ವೃತ್ತಿಯಾಗಿ ಮಾರ್ಪಡಲು ಭೂಮಿಕೆಯಾಯಿತೆನ್ನಬಹುದು.

ಪ್ರಸ್ತುತ ಸಂಶೋಧನೆಯು ಚಿತ್ರದುರ್ಗ ಜಿಲ್ಲೆಯ ಲಿಂಗವಂತ ಹಾಗೂ ಸಜ್ಜನ ಗಾಣಿಗ ಹಾಗೂ ಜ್ಯೋತಿ ಗಾಣಿಗರನ್ನು ಕುರಿತದ್ದಾಗಿದೆ. ಇವರು ನೆಲಸಿರುವ ಸ್ಥಳಗಳೆಂದರೆ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರುಗಳಲ್ಲಿ ಸಜ್ಜನ ಗಾಣಿಗರು ಹೆಚ್ಚಿರುವ ಹಳ್ಳಿಗಳನ್ನು ಆಯ್ಕೆ ಮಾಡಿ ಕ್ಷೇತ್ರಾಧ್ಯಯನ ಮಾಡಲಾಗಿದೆ. ಜ್ಯೋತಿ ಗಾಣಿಗರು ಹೊಳಲ್ಕೆರೆ ಮತ್ತು ಹೊಸದುರ್ಗ ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದು ಎಣ್ಣೆ ವ್ಯಾಪಾರ ಜೊತೆಗೆ ಇತರೆ ವಸ್ತುಗಳ ಮಾರಾಟ ಮಾಡುವ ಕಿರಾಣಿ ಅಂಗಡಿಯನ್ನಿಟ್ಟಿದ್ದಾರೆ. ಈ ಎರಡು ಪಂಗಡಗಳಲ್ಲಿಯೂ ಮೂಲ ವೃತ್ತಿಗಳಲ್ಲಿ, ಇದ್ದರೂ ಸಾಕಷ್ಟು ಬದಲಾವಣೆ ಹೊಂದಿರುವ ದೊಡ್ಡ ದೊಡ್ಡ ಯಂತ್ರೋಪಕರಣಗಳನ್ನು ಹೊಂದಿದ ಎಣ್ಣೆ ಮಿಲ್‌ಗಳು ಗೋಚರಿಸುತ್ತಿವೆ. ಈ ವೃತ್ತಿಯನ್ನು ಈ ಸಮುದಾಯದವರೇ ಮಾಡಬೇಕೆಂಬುದು ಇಂದು ಮಾಯವಾಗತೊಡಗಿದೆ.

### ೨.೧. ಗಾಣಿಗರ ಮೂಲ ಇತಿಹಾಸ

ಗಾಣಿಗರ ಪ್ರಾಚೀನತೆ ಕುರಿತು ವಿದ್ವಾಂಸರು ವ್ಯಾಖ್ಯಾನದೊಂದಿಗೆ ಅವರನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಅವರುಗಳಲ್ಲಿ 'ಮಾರ್ಟಿನ್' ವಿದ್ವಾಂಸರ ಪ್ರಕಾರ ಶಿವನಿಂದ ದೊರೆತ ಒನಕೆ ಒರಳುಗಳು ಶಿವ ಪಾರ್ವತಿಯ ಪ್ರತ್ಯೇಕ ರೂಪ ಎಂದು ನಂಬಿರುವ ಗಾಣಿಗ ಸಮುದಾಯವು ಕೆಲವು ಶುಭ ಸಂದರ್ಭದಲ್ಲಿಯೂ ಅಂದರೆ ಮದುವೆ ಮಂಗಳ ಕಾರ್ಯಗಳಲ್ಲಿ ಒನಕೆ ಒರಳನ್ನು ಪೂಜಿಸುವ ಸಂಪ್ರದಾಯ ಬೆಳೆದು ಬಂದಿರಬಹುದು ಎಂದು ವಿದ್ವಾಂಸರ ಅಭಿಮತವಾಗಿದೆ. ೧೯೦೯ 'ಥರ್‌ಸ್ಟನ್' ಪ್ರಕಾರ ಇವರ ಹೆಸರು ತೆಲುಗಿನ ಗಾನುಗ ಗಾಣಿಗವಾಡು ಎಂಬ ಶಬ್ದದಿಂದ ಹುಟ್ಟಿದೆ.

'ಚಾರ್ಟರ್ ಆಫ್ ಬಲೀಫ್' ಗಾಣಿಗರು ಅನಾದಿಯಿಂದ ಬಂದ ಸಮುದಾಯವಾಗಿದ್ದು ಇಂದು ಭಾರತದ ಎಲ್ಲಾ ರಾಜ್ಯಗಳಲ್ಲಿಯೂ ಇವರು ನೆಲಸಿದ್ದಾರೆ.

ನಂಜುಂಡಯ್ಯ ಮತ್ತು ಐಯ್ಯರ್ ೧೯೩೦ ಇವರು ಗಾಣಿಗರ ಮೂಲದ ಬಗ್ಗೆ ಹೀಗೆ ಹೇಳಿದ್ದಾರೆ. ಶಿವನು ಜಗತ್ತಿನ ಕತ್ತಲನ್ನು ತೆಗೆಯಲು ಅವನಿಗೆ ಅವಶ್ಯಕವೆಂದೆನ್ನಿಸಿ, ತನ್ನ ಬೆವರಿನಿಂದ ಒಬ್ಬ ಮನುಷ್ಯನನ್ನು ಸೃಷ್ಟಿಸಿ

ಅವನಿಗೆ ಎಣ್ಣೆ ಉತ್ಪಾದಿಸುವ ಉದ್ದೇಶಕ್ಕೆ ನೇಮಿಸಿದನು ಎಂದು ದಂತ ಕಥೆಯಲ್ಲಿ ದಾಖಲಿಸಿದ್ದಾರೆ. ಆ ಮನುಷ್ಯನೇ ಈ ಸಮುದಾಯದ ಮೂಲ ಪುರುಷ ಎಂದು ಹೇಳಿದ್ದಾರೆ.

**೨.೨. ಗಾಣಿಗರ ಪದನಿಷ್ಪತ್ತಿ/ಮೂಲದ ಕತೆಗಳು**

**ಕಥೆ ೧.** ಈ ಸಮುದಾಯದ ಮೂಲವನ್ನು ಕುರಿತು ಕುತೂಹಲಕಾರಿಯಾದ ಕತೆ ಇದೆ. ಪಾರ್ವತಿಯು ತನ್ನ ಅರಮನೆಯಲ್ಲಿ ಶಿವನಿಲ್ಲದಾಗ ಅರಮನೆಯನ್ನ ಯಾರೂ ಕಾವಲು ಇಲ್ಲದ್ದಕ್ಕಾಗಿ ಭಯವಾಯಿತು. ತನ್ನ ಬೆವರಿನಿಂದ ಗಣೇಶನನ್ನು ಸೃಷ್ಟಿಸಿ ಅರಮನೆಯನ್ನು ಕಾಯಲು ನಿಯಮಿಸಿದಳು ಶಿವ ಮರಳಿ ಒಳಗೆ ಹೋಗಬಯಸಿದಾಗ ಅವನನ್ನರಿಯದ ಬಾಲಕ ಅವನನ್ನು ಒಳ ಹೋಗದಂತೆ ತಡೆಗಟ್ಟಿದ ಶಿವಕೋಪದಿಂದ ಅವನ ಶಿರ ಕತ್ತರಿಸಿ ಒಳಗೆ ಹೋದ ಇದನ್ನರಿತ ಪಾರ್ವತಿಯು ಈಶ್ವರನನ್ನು ತನ್ನ ಮಗನನ್ನು ಬದುಕಿಸೆಂದು ಬೇಡಿಕೊಳ್ಳಲು, ಶನಿಕಾಟದಿಂದ ಮಗುವಿನ ಶಿರವು ಮಾಯವಾಗಿತ್ತು, ದಕ್ಷಿಣ ದಿಕ್ಕಿಗೆ ಮುಖ ಮಾಡಿದ ಯಾವುದೆ ಜೀವಂತ ಪ್ರಾಣಿಯ ಶಿರ ದೊರೆತರೆ ಮಾತ್ರ ಅದನ್ನು ತಂದು ಜೋಡಿಸಿ ಸತ್ತವನನ್ನು ಜೀವಂತಗೊಳಿಸಬಹುದೆಂದು ಹೇಳಿದನು. ಅದೇ ಸಮಯಕ್ಕೆ ಅರಮನೆಯ ದಕ್ಷಿಣ ದಿಕ್ಕಿನ ಹೊರವಲಯದ ಒಬ್ಬ ವ್ಯಾಪಾರಿ ತನ್ನ ಆನೆಯೊಂದಿಗೆ ವಿರಮಿಸಿದ್ದ, ಆ ಆನೆ ದಕ್ಷಿಣದತ್ತ ಮುಖ ಮಾಡಿ ಮಲಗಿತ್ತು ಶಿವ ಆ ಕೂಡಲೇ ಅದರ ತಲೆ ಕತ್ತರಿಸಿ ತಂದು ಸತ್ತು ಬಿದ್ದ ಶರೀರಕ್ಕೆ ಜೋಡಿಸಿ ಗಣೇಶನನ್ನು ಸಜೀವಗೊಳಿಸಿದ ತನ್ನ ಆನೆಯನ್ನು ಕಳೆದುಕೊಂಡ ವ್ಯಾಪಾರಿ ತನಗಾದ ಹಾನಿಗಾಗಿ ಇನ್ನೇನು ಗತಿ ಎಂದು ದುಃಖಿಸತೊಡಗಿದ ಅವನನ್ನು ಸಂತಯಿಸ ಬಯಸಿದ ಶಿವ. ಅದುವರೆಗೂ ಯಾರಿಗೂ ಗೊತ್ತಿಲ್ಲದ ಒನಕೆ ಒರಳು ಸಲಕರಣೆಗಳನ್ನು ಸೃಷ್ಠಿಸಿ ಅದರಲ್ಲಿ ಎಣ್ಣೆಕಾಳು ಹಾಕಿ ರುಬ್ಬಿ ತೆಗೆಯುವ ವಿಧಾನ ತಿಳಿಸಿದ ಮುಂದೆ ಜೀವಿಸುವ ಬಗೆಯನ್ನು ತೋರಿಸಿದ ಅಂದಿನಿಂದ ಆ ವೃತ್ತಿ ಮತ್ತು ವ್ಯಾಪಾರಿ ವಂಶಜರು ಎಣ್ಣೆತೆಗೆದು ಮಾರುವ ಕಸಬು ಕೈಗೊಂಡರು ಅವನೇ ಪ್ರಪಂಚದ ಮೊದಲನೇ ಗಾಣಿಗ.

**ಕತೆ ೨.** ರಾತ್ರಿ ಪ್ರಪಂಚದ ಕತ್ತಲನ್ನು ಪರಿಹರಿಸುವುದು ಈಶ್ವರನಿಗೆ ಅವಶ್ಯವಾಗಿತ್ತು ಶಿವ ತನ್ನ ಬೆವರಿನಿಂದ ಒಬ್ಬ ಮಾನವನನ್ನು ಸೃಷ್ಠಿಸಿ ಎಣ್ಣೆ ತೆಗೆದು ದೀಪ ಬೆಳಗಿಸುವ ವೃತ್ತಿಯಲ್ಲಿ ತೊಡಗಿಸಿದ ಇವನೇ ಪ್ರಪಂಚದ ಮೊದಲ ಗಾಣಿಗ

**ಕತೆ ೩.** ಗಾಣಿಗರ ಅಸ್ತಿತ್ವ ಭಾರತದಲ್ಲಿ ಮೊದಲಿನಿಂದಲೂ ಇತ್ತು ಎಂಬುದಕ್ಕೆ ಅನೇಕ ಪುರಾವೆಗಳಿವೆ. ಮೃಗರಾಜ ವಿಕ್ರಮಾದಿತ್ಯನಿಗೆ ಸಾದೇಸಾತಿ ಶನಿಕಾಟ ಪ್ರಾರಂಭವಾಗಿತ್ತು ದನ ಕನಕ ಅರಸೊತ್ತಿಗೆ ಕಳೆದುಕೊಂಡು ಕೊನೆಗೆ ಕೈಕಾಲು ಕತ್ತರಿಸಲ್ಪಟ್ಟು ಅನಾಥವಾಗಿ ನರಳುತ್ತಾ ಮಾರ್ಗದ ಬದಿಯಲ್ಲಿ ಬಿದ್ದು ಕೊಂಡಿದ್ದ ಆ ಸಮಯದಲ್ಲಿ ಗಾಣಿಗರ ಪರಿವಾರವೊಂದು ಎತ್ತಿನ ಬಂಡಿಯಲ್ಲಿ ಹೊರಟಿತ್ತು ಬಂಡಿಯಲ್ಲಿದ್ದ ಗಾಣಿಗನ ಸೊಸೆ ಅಂಗವಿಕಲ ಅರಸನನ್ನು ಗುರುತಿಸಿದಳು ಕರುಣೆಗೊಂಡು ಮಾವನಿಗೆ ವಿಷಯ ತಿಳಿಸಿ ಅವನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಆಶ್ರಯ ನೀಡಿದಳು ಅಂತೂ ರಾಜ ಬದುಕುಳಿದ, ಮುಂದೆ ಶಾಪವಿಮೋಚನೆಯಾಯಿತು, ವಿಕ್ರಮಾದಿತ್ಯನಿಗೆ ಸಕಲ ಸಂಪತ್ತು ದೊರೆಯಿತು ಶನಿದೇವ ಪ್ರತ್ಯಕ್ಷನಾಗಿ

ವರಬೇಡಿಕೋ ಎಂದಾಗ, ರಾಜ ಕೇಳಿಕೊಂಡದಿಷ್ಟು ದೇವ ಗಾಣಿಗರು ಸಂಕಷ್ಟ ಸಮಯದಲ್ಲಿ ನನಗೆ ಆಶ್ರಯ ನೀಡಿದವರು ಕಾರಣ ನೀನು ಅವರಿಗೆ ಕಾಡಬೇಡ. ಬದಲಾಗಿ ಅವರಲ್ಲಿ ಕೃಪಾದೃಷ್ಟಿಯಿರಲಿ ಇಂದಿಗೂ ಸಂಪ್ರದಾಯವಾದಿ ಬ್ರಾಹ್ಮಣರು ಶನಿವಾರ ದಿನ ಎಣ್ಣೆ ಖರೀದಿಸಲು ಗಾಣಿಗರ ಮನೆಗೆ ಹೋಗುವುದಿಲ. ಶನಿದರ್ಶನವಾದೀತೆಂಬ ನಂಬಿಕೆ ಅವರಿಗಿದೆ. ಆದರೆ ಇದು ತಪ್ಪು.

**ಗಾಣಿಗರ ಪದನಿಷ್ಪತ್ತಿ**

೧. 'ಗಾಣಿಗ' ಪದವು ಗಾಣ+ಇಗೆಂಬೆರಡು ಜೋಡಣೆಗಳಿಂದ ಕೂಡಿದೆ, ಗಾಣಿಗ ಎಂಬ ನಾಮಪದಕ್ಕೆ ಇಗ 'ಪ್ರತ್ಯಯ' ಸೇರಿ 'ಗಾಣಿಗ' ಎಂದಾಗಿದೆ. ಒಂದೊಂದು ವೃತ್ತಿಯಲ್ಲಿ ತೊಡಗಿದವರನ್ನು ಒಂದೊಂದು ಹೆಸರಿನಿಂದ ಕರೆಯುವುದು ವಾಡಿಕೆ.

ಉದಾ: ವಂಶ ಪರಂಪರಿಕವಾಗಿ ಕಟ್ಟಿಗೆಯ ಕೆಲಸ ಮಾಡುವವನು ಬಡಿಗ, ಕಬ್ಬಿಣದ ಕೆಲ ಮಾಡುವವನು 'ಕಮ್ಮಾರ', ಚರ್ಮದ ಕೆಲಸವನ್ನು ಮಾಡುವವ ಚಮ್ಮಾರ, 'ಡಕ್ಕೆ' ಎಂಬ ವಾದ್ಯವನ್ನು ತಯಾರಿಸುವವನು 'ಡಕ್ಕಲಿಗ' ಬಟ್ಟೆಯನ್ನು ಶುದ್ಧೀಕರಿಸುವವನನ್ನು ಮಡಿವಾಳನೆಂದು, ಗಾಣದಿಂದ ಎಣ್ಣೆ ತೆಗೆಯುವವನನ್ನು ಗಾಣಿಗನೆಂದು, ವೃತ್ತಿಗಳು ಹೆಸರನ್ನು ಗುರುತಿಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ.

೨. ಗಾಣಿಗ ಎಂಬುದು 'ಗಾಣ' ಮತ್ತು 'ಇಗ' ಎಂಬೆರಡು ಶಬ್ದಗಳಿಂದ ರೂಪಿತವಾಗಿದೆ. ಕನ್ನಡ ಪದದ ಅರ್ಥ 'ಗಾಣ'ದ ಸ್ಥಳ ಎಂದಾಗುತ್ತದೆ. ಇದಕ್ಕೆ ಇಗ ಎಂಬ ತದ್ಧಿತ ಪ್ರತ್ಯೆಯ ಸೇರಿ 'ಗಾಣಿಗ' ಎಂದಾಗಿದೆ ಇವರನ್ನು ಗಾಣಿಗ, ಗಾಣಿಗರು, ತೈಲದವರು, ಎಣ್ಣೆ ತಯಾರುಮಾಡುವವರು ಎಂದು ಮುಂತಾದ ಹೆಸರುಗಳಿಂದ ಕರೆಯುವ ವಾಡಿಕೆ ಇದೆ. ತಮ್ಮ ವೃತ್ತಿಯಲ್ಲಿ ತಲ್ಲೀನರಾಗಿ ಎಣ್ಣೆ ತೆಗೆದು ಎಣ್ಣೆಯವರಿಗೆ ಎಣ್ಣೆ ಕೊಟ್ಟು, ಜ್ಯೋತಿಗೆ ಎಣ್ಣೆ ಹಾಕಿ ಕತ್ತಲನ್ನು ಓಡಿಸಿ ಜಗತ್ತಿಗೆ ಬೆಳಕು ನೀಡಿದವರು ಇವರೇ ಗಾಣಿಗರು ಎಂಬರ್ಥದಲ್ಲಿ ಬಳಕೆಯಾಗಿದೆ.

**೨.೩. ಗಾಣಿಗ ಸಮಾಜದ ಒಳಪಂಗಡಗಳು**

ಒಂದು ಜನಾಂಗದ ನಡೆ ನುಡಿಗಳು, ಸಂಪ್ರಾದಾಯಗಳು ಕಾಲಮಾನಕ್ಕೆ ತಕ್ಕಂತೆ ಬದಲಾವಣೆ ಹೊಂದುತ್ತಾ ಪ್ರಗತಿಯ ದಾಪುಗಾಲು ಹಾಕುತ್ತವೆ. ಯಾವುದೇ ಸಮಾಜವು ಇದರಿಂದ ಹೊರತಾಗಿಲ್ಲ ಎಂಬುದು ಸ್ಪಷ್ಟ.

ಸಂಸ್ಕೃತಿ ಎಂಬ ಪದವನ್ನು ಇಂಗ್ಲಿಷಿನ ಕಲ್ಚರ್ ಎಂಬ ಶಬ್ದ ಉಪಯೋಗಿಸಿ ಬಳಸಲಾಗುತ್ತದೆ. ಇದು ಲ್ಯಾಟೀನ್ ಭಾಷೆಯ ಕಲ್ಟ ಎಂಬ ಪದದಿಂದ ಬಂದಿದೆ. ಈ ಪದದ ಅರ್ಥ ಸಾರವಿಸು, ಪೂಜಿಸು, ಸೇವೆಮಾಡು ಎಂದಾಗುತ್ತದೆ. ಇಂದು ಈ ಶಬ್ದವು ನಾನಾ ಜನಾಂಗಗಳ ಸಂಪ್ರದಾಯಗಳ ಜೀವನ ಕ್ರಮಗಳ ಸೂಚಕವಾಗಿ ಬಳಸಲಾಗುತ್ತದೆ. ಡಿ.ವಿ.ಜಿಯವರ ಪ್ರಕಾರ ''ಜೀವನದ ಪ್ರತಿಯೊಂದು ಸನ್ನಿವೇಶದಲ್ಲೂ ಮನೋಭಾವವು ವರ್ತನೆಯು ಔಚಿತ್ಯಪೂರ್ಣವಾಗುವಂತೆ ಮಾಡುವ ಪ್ರಯತ್ನವೇ ಸಂಸ್ಕೃತಿ'' ಅದರಂತೆ ಹಿರಿಯರ ಪ್ರಕಾರ ಸಂಸ್ಕಾರದಿಂದ ರೂಪಿತವಾಗಿರುವ ಸಮ್ಯಕ್ ಕೃತಿ ಸಂಸ್ಕೃತಿ, ಎಲ್ಲದರಲ್ಲಿಯೂ ಪರಿಶುದ್ಧತೆಯನ್ನು ಕಂಡು

ಸಂತೋಷ ಪಡುವುದೇ ಸಂಸ್ಕೃತಿ ಒಟ್ಟಿನಲ್ಲಿ ಅಂತ ರಂಗದ ಪರಿಮಳ, ಇದುವೇ ಉತ್ತಮ ಸಂಸ್ಕಾರ ಎಂದೆನಿಸುತ್ತದೆ, ಸಂಸ್ಕಾರ ಹೊಂದಿದ ಕುಟುಂಬಗಳು ಸಂಸ್ಕಾರಯುತ ಸಮಾಜವನ್ನು ನಿರ್ಮಾಣ ಮಾಡಬಲ್ಲವು.

ಇಂಥ ಸಂಸ್ಕೃತಿಯುತ ಸಮಾಜದಲ್ಲಿ ಗಾಣಿಗ ಸಮಾಜವು ಒಂದು ಗಾಣದಿಂದ ತೆಗೆಯಲ್ಪಟ್ಟ ಎಣ್ಣೆಯಿಂದ ಜ್ಯೋತಿ ಬೆಳಗಿಸುವುದು, ದೇವರ ಮುಂದೆ ಸದಾ ನಂದಾದೀಪ, ಆರತಿ ಬೆಳಗಿಸುವುದು ಶುಭ ಸಂಕೇತದ ಪವಿತ್ರ ಕಾರ್ಯ.

ಅನಾದಿ ಕಾಲದಿಂದಲೂ ಗಾಣಿಗ ಎಣ್ಣೆಯ ಕಾರ್ಯ ಕೈಕೊಂಡವರಿಗೆ 'ಖರೆ ಗಾಣಿಗರು' ಗಾಣದ ಕಾರ್ಯ ಮಾಡಿ ಸಜ್ಜನಿಕೆಯ ನಡವಳಿಕೆದಾರರಿಗೆ 'ಸಜ್ಜನಗಾಣಿಗರು' ಕಲ್ಲಿನ ಗಾಣದ ಎಣ್ಣೆಯನ್ನು ವ್ಯಾಪಾರ ಮಾಡಿದ 'ಕಲಶೆಟ್ಟಿ' ಗಾಣಿಗರು ಗಾಣದ ಕಾರ್ಯದೊಂದಿಗೆ ಶೀಲಕ್ಕೆ ಒತ್ತು ನೀಡಿದ ಗಾಣಿಗರಿಗೆ ''ಶೀಲವಂತ ಪಂಚಮ ಗಾಣಿಗರು'' ಎಂದು ಹೆಸರನ್ನು ಹೊತ್ತು ನೆರೆಯ ಜಿಲ್ಲೆಯಲ್ಲಿ ನೆಲೆಸಿದ್ದಾರೆ. ಅದರಂತೆ ಇಂದು ಕರ್ನಾಟಕದಲ್ಲಿ ಬೇರೆ ಕಡೆಯಿಂದ ಬಂದು ನೆಲಸಿದ ಹಲವಾರು ಒಳಪಂಗಡಗಳು ಇಂತಿವೆ.

೧. **ಖರೇ ಗಾಣಿಗರು:** ಮುಂಬಯಿ ಕರ್ನಾಟಕ ಮತ್ತು ಹೈದ್ರಾಬಾದ್ ಕರ್ನಾಟಕದಲ್ಲಿ ಬಹಳಷ್ಟು ಜನ ಇರುತ್ತಾರೆ. ಅದರಲ್ಲೂ ವಿಜಾಪುರ ಬಾಗಲಕೋಟೆ ಜಿಲ್ಲೆಯಲ್ಲಿ ದಟ್ಟವಾಗಿ ಇರುತ್ತಾರೆ. ಇವರು ಲಿಂಗ ಧರಿಸುತ್ತಾರೆ. ವಿಧವಾ ಮರುವಿವಾಹವಿದೆ.

೨. **ಸಜ್ಜನ ಗಾಣಿಗರು:** ಉತ್ತರ ಕರ್ನಾಟಕ ಮತ್ತು ಹೈದ್ರಾಬಾದ್ ಕರ್ನಾಟಕದಲ್ಲಿ ನೆಲೆಸಿದ್ದಾರೆ. ಇವರ ಜಾತಿ ಕಲ್ಯಾಣ ಪಟ್ಟಣದಲ್ಲಿ ಉದ್ಭವಿಸಿತೆಂದು ಬಸವೇಶ್ವರರಿಂದ ಸಂಘಟಿತರಾದೆವೆಂದು ಅನ್ನುತ್ತಾರೆ. ಇವರು ಕೂಡಾ ಲಿಂಗ ಧರಿಸುತ್ತಾರೆ. ವಿಧವಾ ಮರು ವಿವಾಹಕ್ಕೆ ಅವಕಾಶವಿಲ್ಲ.

೩. **ಜ್ಯೋತಿ ನಗರ ವೈಶ್ಯರು:** ಅಯೋಧ್ಯಾಪುರದವರು ಕರ್ನಾಟಕಕ್ಕೆ ಉತ್ತರ ಭಾರತ ಮತ್ತು ಆಂಧ್ರದಿಂದ ವಲಸೆ ಬಂದವರೆಂದು ಅಂದುಕೊಳ್ಳುತ್ತಾರೆ. ಇವರು ಜನಿವಾರ ಧರಿಸುತ್ತಾರೆ.

೪. **ಶ್ರೀ ಜ್ಯೋತಿಫಣ ಗಾಣಿಗರು:** ಮೈಸೂರು, ಮಂಡ್ಯ, ಹಾಸನ, ಚಿಕ್ಕಮಂಗಳೂರು ಹಾಗೂ ಶಿವಮೊಗ್ಗ ಜಿಲ್ಲೆಗಳಲ್ಲಿ ವಾಸಮಾಡಿರುತ್ತಾರೆ. ಜನಿವಾರ, ಲಿಂಗಧರಿಸುವುದಿಲ್ಲ.

೫. **ದೇವ ಗಾಣಿಗರು:** ಆಂದ್ರದಿಂದ ಕರ್ನಾಟಕಕ್ಕೆ ವಲಸೆ ಬಂದವರು. ಕರ್ನಾಟಕದಲ್ಲಿ ತುಮಕೂರು, ಬಳ್ಳಾರಿ, ಕೋಲಾರ, ಬೆಂಗಳೂರು ಜಿಲ್ಲೆಗಳಲ್ಲಿ ವಾಸಮಾಡುತ್ತಾರೆ.

೬. **ಶೆಟ್ಟಿ ಗಾಣಿಗರು:** ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಾರೆ.

೭. **ವಾಣಿಯ ಗಾಣಿಗರು:** ತಮಿಳುನಾಡಿನಿಂದ ಬಂದವರು ಹಳೆ ಮೈಸೂರು ಪ್ರದೇಶದಲ್ಲಿ ವಾಸಿಸುತ್ತಾರೆ. ವ್ಯಾಪಾರ ಇವರ ಮುಖ್ಯ ಉದ್ಯೋಗವಾಗಿದೆ.

೮. **ಚೆಟ್ಟಿಯಾರ ಗಾಣಿಗರು:** ತಮಿಳುನಾಡಿನಿಂದ ಬಂದವರು ಇವರು ಯಾವಾಗಲೂ ಹೋಲ್‌ಸೇಲ್ ವ್ಯಾಪಾರ ಮಾಡುತ್ತಾರೆ.

**೯. ಗಂಡ್ಲರು:** ಆಂದ್ರದಲ್ಲಿ ವಾಸಿಸುತ್ತಾರೆ, ಕರ್ನಾಟಕದಲ್ಲಿ ವಿರಳ.

**೧೦. ಸಹೊ ಗಾಣಿಗರು:** ಉತ್ತರ ಹಿಂದುಸ್ತಾನದಲ್ಲಿ ವಾಸಿಸುತ್ತಾರೆ.

**೧೧. ತೆಲಿ ಗಾಣಿಗರು:** ತಮಿಳುನಾಡಿನಿಂದ ಬಂದವರು, ಕರ್ನಾಟಕದಲ್ಲಿ ಅತೀ ವಿರಳರಾಗಿದ್ದಾರೆ.

ಇಡೀ ದೇಶದಲ್ಲಿ ಗಾಣಿಗರ ಒಳಪಂಗಡಗಳನ್ನು ಈ ಮೇಲಿನಂತೆ ಗಮನಿಸಬಹುದಾಗಿದೆ.

ಎರಡು ಎತ್ತುಗಳನ್ನು ತಮ್ಮ ಗಾಣಕ್ಕೆ ಹೂಡುವರು. ಹೆಗ್ಗಾಣಿಗರು, ಇವರದು ಕಲ್ಲಿನ ಗಾಣ-ಎರಡೆತ್ತಿನ ನೊಗ, ಒಂದೆತ್ತು ತಮ್ಮ ಗಾಣಕ್ಕೆ ಹೂಡುವವರು ಕಿರುಗಾಣಗರು ಅಥವಾ ಕರಿಗಾಣಿಗರು ಇವರ ಗಾಣ ಕಟ್ಟಿಗೆಯದು, ಹೀಗೆ ವಿವಿಧ ಪಂಗಡಗಳು ಗಾಣದ ಮೂಲಕ ಎಣ್ಣೆ ತೆಗೆದು ತಮ್ಮ ಬೆಳಕನ್ನು ವಿಶ್ವದಾದ್ಯಂತೆ ಪಸರಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಭಾರತದಲ್ಲಿಯೂ ಕೂಡಾ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ರೀತಿಯಿಂದ ಕರೆಯುತ್ತಾರೆ. ಕರ್ನಾಟಕದಲ್ಲಿ ಗಾಣಿಗರ, ಜ್ಯೋತಿ, ತೇಲಿ ಎಂದೂ ಆಂಧ್ರ ಪ್ರದೇಶದಲ್ಲಿ ಗಾಂಡ್ಲ ಎಂದೂ, ಕೇರಳ ರಾಜ್ಯದಲ್ಲಿ ಚಟ್ಟೆ, ಚಟ್ಟೆಯಾರ ಎಂದೂ, ತಮಿಳುನಾಡಿನಲ್ಲಿ ವಣಿಮನ್ ಎಂದೂ, ಮಹಾರಾಷ್ಟ್ರ ಮತ್ತು ಗುಜರಾತ್‌ದಲ್ಲಿ ತೇಲಿ ಎಂದೂ ಬಿಹಾರ ಮತ್ತು ಓರಿಸ್ಸಾ ರಾಜ್ಯಗಳಲ್ಲಿ 'ಸಾಹೂ' ಎಂದೂ, ಉತ್ತರ ಪ್ರದೇಶ ಮತ್ತು ಮದ್ಯ ಪ್ರದೇಶದಲ್ಲಿ ಗುಪ್ತಾ ಎಂದೂ, ಬಂಗಾಳದಲ್ಲಿ ಜ್ಯೋತಿ ಎಂದೂ ಕರೆಯಲ್ಪಡುತ್ತಾರೆ. ಭಾರತದ ತುಂಬೆಲ್ಲಾ ಗಾಣಿಗ ಸಮಾಜದವರು ಇದ್ದಾರೆ, ಇವರೆಲ್ಲಾ ಒಂದೇ ಪಂಗಡಕ್ಕೆ ಸೇರಿದವರು, ಏಕೆಂದರೆ ಮೂಲತಃ ಗಾಣದಿಂದ ಎಣ್ಣೆಯನ್ನು ತೆಗೆದು ಸಮಾಜಕ್ಕೆ ಒದಗಿಸಬೇಕಾಗಿರುವುದರಿಂದ ಎಲ್ಲೆಡೆಯಲ್ಲಿ ಕಾಣಸಿಗುತ್ತಾರೆ. ಆದರೆ ಇಂದು ಯಂತ್ರಯುಗವಾಗಿರುವುದರಿಂದ ತಮ್ಮ ಉದ್ಯೋಗದಲ್ಲಿ ಯಶಸ್ಸನ್ನು ಕಾಣಲು ಎಲ್ಲಾ ಸಮಾಜದವರು ಎಣ್ಣೆಯನ್ನು ತೆಗೆಯುತ್ತಿದ್ದಾರೆ.

### ೨.೩.೧. ಸಜ್ಜನ ಗಾಣಿಗರ ಒಳಪ್ರಭೇದಗಳು ಹಾಗೂ ಐದು ಬಳೆಯವರು

| ಒಳ ಪಂಗಡಗಳು | | ಮನೆದೇವರ ಹೆಸರು |
|---|---|---|
| ೧. ತುಪ್ಪದವರು ೭ ಮನೆ ಬೀಗರು | - | ಮಾವಿನಹಳ್ಳಿ ಬಸವೇಶ್ವರ |
| ೨. ಹುಲಿಯಪ್ಪ ದ್ಯಾಮಚ್ಚೋರು | - | ಹುಲಿಗೇಶಮ್ಮ |
| ೩. ಕೋಣನೋರು | - | ವೀರಭದ್ರಸ್ವಾಮಿ |
| ೪. ಬಾರೇರು | - | ತಿಪ್ಪೇಸ್ವಾಮಿ |
| ೫. ಸಂಕನೋರು | - | ತಿಪ್ಪೇಸ್ವಾಮಿ |

**ಎರಡು ಬಳೆಯವರು ಐದು ಬಳೆಯವರಾದ ರೀತಿ**

ಮೊದಲು ಎರಡು ಒಳೆಯವರಿದ್ದು ಅವರನ್ನು ಜ್ಯೋತಿಗಾಣಿಗರೆಂದು ಕರೆಯುತ್ತೇವೆ, ಸಜ್ಜನ ಗಾಣಿಗರು ಮತ್ತು ಜ್ಯೋತಿಗಾಣಿಗರಿಗೂ ಮೊದಲು ವೈವಾಹಿಕ ಸಂಬಂಧಗಳಿದ್ದವು ಹೆಂಡತಿಯ ತವರು ಮನೆಯವರು

ಗಾಣಕ್ಕೆ ಬಲಿಕೊಡುವ ಪದ್ಧತಿ ಇದ್ದು ಅನ್ನದಿಂದ ಹೋಕಳಿ ಮಾಡಿ ಒಲಿಕೊಡುತ್ತಿದ್ದಾರಂತೆ. ಅದನ್ನು ನೋಡಿದ ಗಂಡನು ಹೆಂಡತಿಯನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುವಾಗ ನಾನು ತವರುಮನೆಯಲ್ಲಿ ಎರಡು ಬಳೆಯನ್ನು ಬಿಟ್ಟು ಬಂದಿದ್ದೇನೆ ಅವನ್ನು ತೆಗೆದುಕೊಂಡು ಬಾರಿರೆಂದು ಹೇಳಿದಾಗ ಗಂಡನು ಎರಡು ಬಳೆ ಹೊದರೇನಾಯ್ತು ಐದು ಬಳೆಯನ್ನು ಮಾಡಿಸುತ್ತೇನೆ ಬಾ ಎಂದು ತಮ್ಮ ಮನೆಗೆ ಹೆಂಡತಿಯನ್ನು ಕರೆದುಕೊಂಡು ಹೋದನಂತೆ ಹೋದ ಮೇಲೆ ಹೆಂಡತಿಗೆ ಐದು ಬಳೆಗಳನ್ನು ಮಾಡಿಸಿದನಂತೆ ಅಂದಿನಿಂದ ಐದು ಬಳೆಯವರು ಸಜ್ಜನ ಗಾಣಿಗರಾದರು, ಸಜ್ಜನ ಗಾಣಿಗರಲ್ಲಿ ಇಂದೂ ಕೂಡ ಸಂಪ್ರದಾಯಕ ವಿವಾಹಗಳಲ್ಲಿ ಶುಭ ಸಂದರ್ಭಗಳಲ್ಲಿ ಐದು ಬಳೆಯನ್ನು ವಧುವಿಗೆ ತೋಡಿಸುತ್ತಾರೆ ಇವರೇ ಐದು ಬಳೆಯವರು.

**ಸಜ್ಜನ ಗಾಣಿಗರಲ್ಲಿರುವ ಉಪ ಪಂಗಡಗಳು**

೧. ತುಪ್ಪದವರು
೨. ತಿಪ್ಪನೋರು
೩. ದರೋಜರು
೪. ರಾಜನೋರು
೫. ಗೌರನೋರು
೬. ತಮ್ಮಗಾಗಳ್ಳೋರು
೭. ಜಂತ ಕಲ್ಲೋರು

೧. ತುಡು ಮಾನೋರು
೨. ವಾಲೆನೋರು
೩. ಗುಮ್ಮನೋರು
೪. ಗುಡಸನೋರು
೫. ಕೊಟ್ಟದವರು
೬. ಸೂರ ಶೆಟ್ಟಿಯವರು
೭. ದ್ಯಾವಕ್ಕೇರು

೧. ಯಲೆಯೋರು
೨. ಹತ್ತಾಯೋರು
೩. ಕಣೇ ಕಲ್ಲೋರು
೪. ಕುರುಗೋಡೋರು
೫. ಕೊಡ್ಲಿಗೋರು

**ಜಂಟಿ ಮನೆತನಗಳು**

೧. ದ್ಯಾಮಚ್ಛೇರು

೨. ಹುಲಿಯಪ್ಪ ದ್ಯಾಮಚ್ಛೇರು

೩. ಕೋಣನೋರು

೪. ಸಂಕಾನೋರು

೫. ಸಂಕರ ಶೆಟ್ಟಿಯರು

೬. ಬಾರೇರು

**೨.೩.೨. ಜ್ಯೋತಿ ಗಾಣಿಗರ ಒಳಪ್ರಭೇದಗಳು ಹಾಗೂ ಎರಡು ಬಳೆಯವರು**

೧. ಶಿರಿವಾರದವರು.

೨. ಧರಣಿಯವರು.

೧. ತುಪ್ಪದವರು ಇವರ ಮನೆದೇವರು ಮಾವಿನಹಳ್ಳಿ ಬಸವೇಶ್ವರ ಇವರನ್ನು ಏಳು ಮನೆಯ ಬೀಗರೆಂದು ಕರೆಯುತ್ತಾರೆ. ತುಪ್ಪದವರಿಗೆ ಈ ಸಮುದಾಯದಲ್ಲಿ ಕಂಡುಬರುವ ಎಲ್ಲಾ ಉಪ ಪಂಗಡಗಳವರು ನೆಂಟರಾಗುತ್ತಾರೆ. ತುಪ್ಪದವರು ತುಪ್ಪದವರ ಕುಟುಂಬಗಳು ಅಣ್ಣ ತಮ್ಮಂದಿರಂತೆ ವರ್ತಿಸುತ್ತಾರೆ. ಇವರಲ್ಲಿ ತಮ್ಮ ತಂದೆಯ ತಂಗಿ ಅಥವಾ ಅಕ್ಕನ ಅಂದರೆ ಅತ್ತೆಯ ಮಗಳು ಹಾಗೂ ತನ್ನ ಸ್ವಂತ ಅಕ್ಕನ ಮಗಳನ್ನು ವರನಾದವನು ವಿವಾಹವಾಗಲು ಅನುಮತಿ ನೀಡಲಾಗಿದೆ. ಇವರಲ್ಲಿ ಪುರುಷ ಪ್ರಾಧಾನ್ಯತೆ ಇದ್ದು ಚಿಕ್ಕಪ್ಪ ಚಿಕ್ಕಮ್ಮನ ಅಥವಾ ದೊಡ್ಡಪ್ಪ ದೊಡ್ಡಮ್ಮನ ಮಗಳನ್ನು ವಿವಾಹವಾಗುವಂತಿಲ್ಲ ಇವರು ಅಣ್ಣ ತಮ್ಮಂದಿರಾಗುವುದರಿಂದ ವಿವಾಹ ಇವರಲ್ಲಿ ನಡೆಯುವುದಿಲ್ಲ.

ತುಪ್ಪವು ಎಲ್ಲಾ ಅಡಿಗೆಗೆ ಇದನ್ನು ಬಳಸುತ್ತಾರೆ. ಆಗೆಯೇ ತುಪ್ಪದವರು, ತುಪ್ಪದವರನ್ನು ಹೊರತು ಪಡಿಸಿ ಉಳಿದವರೆಲ್ಲರೂ ನೆಂಟರಾಗುತ್ತಾರೆ. ಹಾಗೂ ನೆಂಟಸ್ಥಾನ ಬೆಳೆಸುತ್ತಾರೆ. ಇವರಲ್ಲಿ ಒಂದೇ ಮನೆದೇವರನ್ನು ಪೂಜಿಸುವರಲ್ಲಿ ಅಣ್ಣ ತಮ್ಮಂದಿರಂತೆ ಕಾಣುವ ಅಥವಾ ವರ್ತಿಸುವುದು ಕಂಡುಬರುತ್ತದೆ.

ತುಪ್ಪದವರು, ತಿಪ್ಪನೋರು, ದರೋಜರು ರಾನೋರು, ಗೌರನೋರು, ತಮ್ಮ ಗಾಗಳ್ಳೋರು ಜಂತ ಕಲ್ಲೋರು ಇವರೆಲ್ಲರೂ ಅಣ್ಣ ತಮ್ಮಂದಿರಂತೆ ಕಾಣುವ ಅಥವಾ ವರ್ತಿಸುತ್ತಾರೆ.

೨. ತುಡುಮಾನೇರು, ವಾಲೇನೋರು, ಗುಮ್ಮನೋರು, ಗುಡುಸನೋರು ಕೊಟ್ಟಾದವರು, ಸೂರಶೆಟ್ಟಿಯವರು, ದ್ಯಾವಕ್ಕೇರು, ಇವರೆಲ್ಲಾರು ಅಣ್ಣ ತಮ್ಮಂದಿರಂತೆ ನಡೆದುಕೊಳ್ಳುತ್ತಾರೆ. ಈ ಸಮುದಾಯಗಳನ್ನು ಬಿಟ್ಟು ಉಳಿದವರು ಇವರಿಗೆ ನೆಂಟರಾಗುತ್ತಾರೆ. ಇವರಲ್ಲಿ ವೀರಭದ್ರ ಸ್ವಾಮಿಯನ್ನು ಮನೆ ದೇವರೆಂದು ಪೂಜಿಸುತ್ತಾರೆ.

೩. ಯಲೆಯೊರು, ಹತ್ತಾಯೋರು, ಕಣೇ ಕಲ್ಲೋರು ಕುರುಗೋಡೋರು, ಕೊಡ್ಲಿಗೋರು, ಇವರೆಲ್ಲರೂ ಅಣ್ಣ ತಮ್ಮಂದಿರಂತೆ ನಡೆದುಕೊಳ್ಳುತ್ತಿದ್ದಾರೆ ಇವರನ್ನು ಹೊರತುಪಡಿಸಿ ಉಳಿದವರು ಇವರಿಗೆ ನೆಂಟರಾಗುತ್ತಾರೆ.

**ಜಂಟಿ ಮನೆತನಗಳು**

೧. ದ್ಯಾಮಚ್ಚೇರು

೨. ಹುಲಿಯಪ್ಪ ದ್ಯಾಮಚ್ಚೇರು ಈ ಎರಡು ಉಪ ಪಂಗಡಗಳಲ್ಲಿ ವೈವಾಹಿಕ ಸಂಬಂಧಗಳು ಬೆಳೆಯುವುದಿಲ್ಲ ಈ ಜೋಡಿ ಮನೆತನಗಳು ಅಣ್ಣ ತಮ್ಮಂದಿರಂತೆ ವರ್ತಿಸುತ್ತಾರೆ.

೩. ಕೋಣನೋರು

೪. ಸಂಕಾನೋರು, ಈ ಎರಡು ಉಪಪಂಗಡಗಳಲ್ಲಿ ವಿವಾಹಗಳು, ಜರುಗುವುದಿಲ್ಲ. ಈ ಎರಡು ಉಪ ಪಂಗಡಗಳು ಅಣ್ಣ ತಮ್ಮಂದಿರಂತೆ ವರ್ತಿಸುತ್ತಾರೆ.

೫. ಸಂಕರ ಶೆಟ್ಟಿಯರು.

೬. ಬಾರೇರು ಈ ಎರಡು ಉಪ ಪಂಗಡಗಳು ಅಣ್ಣ ತಮ್ಮಂದಿರಂತೆ ವರ್ತಿಸುತ್ತಾರೆ. ಇವರಲ್ಲಿ ವೈವಾಹಿಕ ಸಂಬಂದಗಳು ನಡೆಯುವುದಿಲ್ಲ. ಇವರನ್ನು ಹೊರತಾಗಿ ವಿವಾಹಗಳನ್ನು ಮಾಡಿಕೊಳ್ಳುತ್ತಾರೆ.

ಈ ಮೇಲಿನ ಐದು ಬಳೆಯವರು ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ ತಾಲ್ಲೂಕ ಮೊಳಕಾಲ್ಮೂರು ತಾಲ್ಲೂಕ್ ಚಳ್ಳಕೆರೆ ತಾಲ್ಲೂಕ್, ಹಿರಿಯೂರು ತಾಲ್ಲೂಕಿನಲ್ಲಿ ಸಜ್ಜನ ಗಾಣಿಗರು ಹೆಚ್ಚಿದ್ದು ಇವರು ಹೆಚ್ಚಿದ್ದ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ.

ಎರಡು ಬಳೆಯವರು ಅಥವಾ ಜೋಡು ಬಳೆಯವರನ್ನು ಜ್ಯೋತಿ ಗಾಣಿಗರೆಂದು ಕರೆಯಲಾಗಿದ್ದು ಇವರು ನಗರವಾಸಿಗಳಾಗಿದ್ದಾರೆ. ಈ ಉಪ ಪಂಗಡವು, ಹೊಳಲ್ಕೆರೆ ಮತ್ತು ಹೊಸದುರ್ಗ ತಾಲ್ಲೂಕುಗಳ ಕೇಂದ್ರ ಸ್ಥಳದಲ್ಲಿ ಕಂಡುಬರುತ್ತಾರೆ. ಇವರಲ್ಲಿ ಎಣ್ಣೆ ಉತ್ಪಾದಸಿದರೂ ಹಳೆಯ ಗಾಣಗಳು ಮಾಯವಾಗಿವೆ. ಅದರಲ್ಲಿಯೇ ಹೊಸತನ ಹಾಗೂ ವಿದ್ಯುತ್ ಶಕ್ತಿಯಿಂದ ನಡೆಯುವ ಗಾಣಗಳು ಅಸ್ತಿತ್ವದಲ್ಲಿವೆ. ಇವರು ಗಾಣವನ್ನು ಪೂಜಿಸಿ ಗಾಣದಲ್ಲಿ ದೇವತೆಯನ್ನು ಕಾಣುವರಾಗಿದ್ದಾರೆ. ಇವರಲ್ಲಿ ವಿಧವಾ ಮರುವಿವಾಕ್ಕೆ ಅವಕಾಶವಿದೆ. ಆದರೆ ಸಜ್ಜನ ಗಾಣಿಗರಲ್ಲಿ ಹೆಚ್ಚಾಗಿ ವಿಧವಾ ಮರುವಿವಾಹಕ್ಕೆ ಅವಕಾಶಗಳಿಲ್ಲ.

### ೨.೪. ಚಿತ್ರದುರ್ಗ ಜಿಲ್ಲೆಯ ಪರಿಚಯ ಹಾಗೂ ಅಧ್ಯಯನಕ್ಕೆ ಬಳಸಿಕೊಂಡ ಹಳ್ಳಿಗಳು

ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಸಜ್ಜನ ಗಾಣಿಗ ಮತ್ತು ಜ್ಯೋತಿಗಾಣಿಗರನ್ನು ಕ್ಷೇತ್ರಕಾರ್ಯದ ಅಧ್ಯಯನಕ್ಕೆ ಒಲಪಡಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯವನ್ನು ಕೈಗೊಂಡ ಗ್ರಾಮಗಳು ಈ ಕೆಳಗಿನಂತಿವೆ.

**೧. ಚಿತ್ರದುರ್ಗ ತಾಲ್ಲೂಕು**

೧. ಮಲ್ಲಾಪುರ.

೨. ಗೋನೂರು.

೩. ಸಾಸಲಹಟ್ಟಿ.

೪. ಚಿತ್ರದುರ್ಗ.

**೨. ಮೊಳಕಾಲ್ಮೂರು ತಾಲ್ಲೂಕು**

೧. ಬಿ.ಜಿ. ಕೆರೆ

೨. ಕೋನಸಾಗರ.

೩. ಮುತ್ತಿಗೇರ ಹಳ್ಳಿ.

೪. ಚಿಕ್ಕೋಬನಹಳ್ಳಿ

**೩. ಚಳ್ಳಕೆರೆ ತಾಲ್ಲೂಕು**

೧. ಹಿರೇಹಳ್ಳಿ

೨. ನಾಯಕನಹಟ್ಟಿ

೩. ಕೋಡಿಹಳ್ಳಿ

೪. ದೇವರ ಹಟ್ಟಿ

**೪. ಹಿರಿಯೂರು ತಾಲ್ಲೂಕು**

೧. ಸೊಂಡೇಕೆರೆ

೨. ಎಂ.ಡಿ. ಕೋಟೆ

೩. ರಾಮಜೋಗಿ ಹಳ್ಳಿ

೪. ಸಾಣೇಕೆರೆ

೫. ಮದುರೈ

**೫. ಹೊಳಲ್ಕೆರೆ ತಾಲ್ಲೂಕು**

**೬. ಹೊಸದುರ್ಗ ತಾಲ್ಲೂಕು**

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಈ ಮೇಲಿನ ಎಲ್ಲಾ ಹಳ್ಳಿಗಳನ್ನು ಅಧ್ಯಾಯಕ್ಕಾಗಿ ಬಳಸಿಕೊಳ್ಳಲಾಗಿದೆ. ಇದರಲ್ಲಿ ಮೊಳಕಾಲ್ಮೂರು ಹಾಗೂ ಈ ತಾಲ್ಲೂಕಿನಲ್ಲಿ ಸಜ್ಜನ ಗಾಣಿಗ ಸಮುದಾಯದ ಜನಸಂಖ್ಯೆ ಹೆಚ್ಚಿದೆ. ಚಳ್ಳಕೆರೆ ಹಾಗೂ ಹಿರಿಯೂರುಗಳಲ್ಲಿಯೂ ಈ ಸಮುದಾಯ ಹೆಚ್ಚಿದೆ. ಚಿತ್ರದುರ್ಗ ತಾಲ್ಲೂಕಿನಲ್ಲಿ ಪ್ರಮಾಣ ಕಡಿಮೆ ಇದೆ. ಹೊಳಲ್ಕೆರೆ ಮತ್ತು ಹೊಸದುರ್ಗದಲ್ಲಿ ಜ್ಯೋತಿಗಾಣಿಗರಿದ್ದು ಇಲ್ಲಿ ಸಜ್ಜನ ಗಾಣಿಗರು ಇಲ್ಲ. ಈ ಎರಡು ತಾಲ್ಲೂಕುಗಳಲ್ಲಿ ಜ್ಯೋತಿಗಾಣಿಗರು ವಾಸವಾಗಿದ್ದಾರೆ. ಇವರು ಹಳ್ಳಿಗಳಲ್ಲಿ ವಾಸವಾಗಿರದೇ ನಗರಗಳಲ್ಲಿ ಮಾತ್ರ ಕಂಡುಬರುವವರಾಗಿದ್ದಾರೆ. ಇವರು ವ್ಯಾಪಾರ ವಾಣಿಜ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಇವರನ್ನು ೨ ಬಳೆಯರೆಂದು ಕರೆಯುತ್ತಿದ್ದು ಇವರ ಶುಭ ಸಂದರ್ಭಗಳಲ್ಲಿ ಎರಡು ಬಲೆಗಳನ್ನು ದರಿಸಬೇಕಾಗುತ್ತದೆ.

ಒಟ್ಟಾರೆಯಾಗಿ ಈ ಮೇಲೆ ಗುರುತಿಸಿರುವಂತೆ ಸಜ್ಜನ ಗಾಣಿಗರು ೫ ಬಳೆಯವರಾಗಿದ್ದು ಜ್ಯೋತಿಗಾಣಿಗರು ೨ ಬಳೆಯವರೆನ್ನಿಸಿಕೊಂಡಿದ್ದಾರೆ. ಈ ಜಿಲ್ಲೆಯಲ್ಲಿ ಕರಿಕುಲ ಗಾಣಿಗರು ಅಥವಾ ಕಿರುಗಾಣಿಗರು ಹಾಗೂ ಇನ್ನುಳಿದ ಗಾಣಿಗರ ಪಂಗಡಗಳು. ಕಂಡುಬರುವುದಿಲ್ಲ. ಕರಿಕುಲ ಗಾಣಿಗರು ಹೆಚ್ಚಾಗಿ ಉತ್ತರ ಕರ್ನಾಟಕ

ಹಾಗೂ ಮೈಸೂರು ಜಿಲ್ಲೆಗಳು ಅತಿ ಹೆಚ್ಚು ಕಂಡುಬರುತ್ತಾರೆ. ಚಿತ್ರದುರ್ಗದಲ್ಲಿ ಮಾತ್ರ ಸಜ್ಜನರು ಅಥವಾ ಹೆಗ್ಗಾಡಿಗರು ನಗರದಲ್ಲಿ ವಾಸಿಸುವ ಜ್ಯೋತಿಗಾಣಿಗರು ಕಂಡುಬರುತ್ತಿದ್ದು, ಈ ೨ ಪಂಗಡಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

### ೨.೫. ಸರ್ವಜ್ಞನ ದೃಷ್ಟಿಯಲ್ಲಿ ಗಾಣಿಗರು

ಸರ್ವಜ್ಞನ ತ್ರಿಪದಿಗಳಲ್ಲಿ ಗಾಣಿಗರ ಬಗ್ಗೆ ಉಲ್ಲೇಖಗಳು ಇವೆ. ಅವುಗಳನ್ನು ಪೂರಕವಾಗಿ ಮಾಹಿತಿಯನ್ನು ಇಲ್ಲಿ ಕೊಡಲಾಗದೆ. ಎಳ್ಳು, ಕುಸುಬಿ, ಶೇಂಗಾ ಮೊದಲಾದ ಧಾನ್ಯಗಳನ್ನು ಗಾಣಕ್ಕೆ ಹಾಕಿ, ಎಣ್ಣೆ ತೆಗೆಯುವ ಕಾಯಕದವರಿಗೆ ಗಾಣಿಗರು ಎಂದು ಕರೆಯಲಾಗಿದೆ. ಸಾಮಾನ್ಯವಾಗಿ ಹಿಂದಿನಿಂದಲೂ ಎತ್ತಿನ ಗಾಣದಿಂದ ಎಣ್ಣೆ ಉತ್ಪಾದಿಸುವ ಪದ್ದತಿ ಅಥವಾ ವಿಧಾನ ಇತ್ತು, ಗಾಣ ತಿರುಗಿಸಲು ಎತ್ತುಗಳನ್ನು ಬಳಸಿಕೊಳ್ಳುತ್ತಿದ್ದರು. ಇದನ್ನು 'ಗಾಣದ ಎತ್ತು'ಎಂದು ಶರಣರ ವಚನಗಳಲ್ಲಿ ಉಲ್ಲೇಖವಾಗಿದೆ. ಊರಿನ ರೈತರು ತಾವು ಬೆಳೆದ ಎಳ್ಳನ್ನು ಗಾಣಿಗರಿಗೆ ಕೊಟ್ಟು ಅವನಿಂದ ಎಣ್ಣೆಯನ್ನು ಪಡೆದು ಮತ್ತೆ ಪ್ರತಿಯಾಗಿ ಎಳ್ಳನ್ನೇ ಹಣದ ರೂಪದಲ್ಲಿ ಕೊಡುತ್ತಿದ್ದರು. ಎತ್ತಿನಿಂದ ಗಾಣವಾಡಿಸಿ, ಎಣ್ಣೆ ಉತ್ಪಾದಿಸುವ ಕಸುಬಿನಲ್ಲಿ ಬಹಳ ನಿಪುಣರಾಗಿದ್ದು ಅಂಥವರನ್ನು ಕಂಡಿರುವ ಸರ್ವಜ್ಞ.

ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ.
ಕಳ್ಳತನ ಬಲ್ಲ ತಳವಾರ, ಬಣಜಿಗ
ಎಲ್ಲವನ್ನು ಬಲ್ಲ ಸರ್ವಜ್ಞ,

ವ್ಯವಹಾರದಲ್ಲಿ ಬರುವ ಮೋಸ, ವಂಚನೆ ನಯಗಾರಿಕೆ ಮುಂತಾದ ಗುಣಗಳನ್ನು ಬಣಜಿಗನಾದವನಿಗೆ ತಿಳಿದಿರುತ್ತದೆ. ಇಡೀ ಗ್ರಾಮವನ್ನೇ ಕಾಯುವ ತಳವಾರನಿಗೆ ಕಳ್ಳನ ಸ್ವಭಾವಗಳು ಗೊತ್ತಿರುತ್ತವೆ. ಇನ್ನು ಬಟ್ಟೆ ಹೊಲೆದುಕೊಡುವ ಸಿಂಪಿಗನಂತೂ ಆಗ ಬಾ, ಹೋಗಿ ಬಾ ಎಂದು ಸುಳ್ಳು ಹೇಳಿ ಗಿರಾಕಿಗಳನ್ನು ಸತಾಯಿಸುವುದುಂಟು, ಅದೇ ರೀತಿ ಎಂಥ ಎಳ್ಳಿನಿಂದ ಉತ್ತಮವಾದ ಎಣ್ಣೆಯನ್ನು ಉತ್ಪಾದಿಸಬಹುದೆಂಬ ಚಮತ್ಕಾರದ ಸ್ವಭಾವ ಗಾಣಿಗನಿಗಷ್ಟೇ ಹೆಚ್ಚು ಗೊತ್ತಿರುತ್ತದೆಂಬ ವಿಷಯವನ್ನು ತಿಳಿಸುವ ಸಂದರ್ಭದಲ್ಲಿ ಸರ್ವಜ್ಞ ಇತರೇ ಉಪಮೇಯಗಳನ್ನು ನೀಡುತ್ತಾನೆ.

''ಗಾಣಿಗನ ಒಡನಾಟ ಕೋಣನಾ ಬೇಸಾಯ
ಕ್ಷೀಣಿಸುವ ಕುತ್ತ ಸಮರಕ್ಷಾಮಗಳಿಂದ
ಪ್ರಾಣವದು ಘಾಸಿ ಸರ್ವಜ್ಞ''

ಎಂದಿದ್ದಾರೆ ಸರ್ವಜ್ಞನಿದ್ದ ಕಾಲ ಯುದ್ಧ ಭಯಗಳಿಂದ ತುಂಬಿದುದಾಗಿತ್ತು, ಏಕೆಂದರೆ ಸರ್ವಜ್ಞ ಗಾಣಿಗನ ಬಗ್ಗೆ ಹೇಳುವಾಗ ಯುದ್ಧದ ವಿಷಯಕ್ಕೆ ಹೋಲಿಸುತ್ತಿದ್ದಾನೆ. ಬರೀ ಯುದ್ಧಗಳೇ ನಡೆದರೆ ಎಲ್ಲವೂ ನಾಶವಾಗುತ್ತದೆ. ಪ್ರತಿಯೊಬ್ಬನಿಗೆ ರೋಗ ರುಜನಗಳು ಬರುವುದುಂಟು ಹಾಗೂ ಕೊನೆಗೆ ಪ್ರಾಣವು ಹಾರಿಹೋಗುವುದುಂಟು ಯುದ್ಧದಿಂದಾಗಿ ಲಾಭಕ್ಕಿಂತ ತೊಡುಕುಗಳೇ ಹೆಚ್ಚಾಗುವಂತೆ ಹೊಲವನ್ನುಳುವ

ಸಂದರ್ಭದಲ್ಲಿ ಕೋಣಕ್ಕೆ ನೇಗಿಲು ಹೊರಿಸಿದರೆ, ರಂಟೆ, ಕುಂಟೆ ಹೊಡೆಯಲು ಸಾಧ್ಯವಿಲ್ಲ. ಆ ರೀತಿ ಕೋಣನೊಡನೆ ಬೇಸಾಯ ಮಾಡುವುದು ಅಭಾಸಕಾರಿಯಾದಂತೆ ಗಾಣಿಗನಲ್ಲಿ ಒಡನಾಟದ ಕ್ರಿಯೆಯು ಎಂದಿಗೂ ಸರಿಯಲ್ಲವೆಂದು ತಿಳಿಸಿದ್ದಾನೆ.

ಅಂದು ಸರ್ವಜ್ಞ ಗಾಣಿಗನೊಬ್ಬನಲ್ಲಿ ಎಣ್ಣೆ ಬೇಡಲು ಹೋಗಿರಲುಬಹುದು. ಅವನು ಕೊಡುವುದಿಲ್ಲವೆಂದು ಕೆಲಸದಿಂದ ಬೈದು ಕಳುಹಿಸಿರಬಹುದು. ಇದಕ್ಕೆ ಪ್ರತಿಯಾಗಿ ಸರ್ವಜ್ಞ ಇವನ ಇಡೀ ಜನ್ಮವನ್ನೇ ಜಾಲಾಡಿದಂತೆ ಅವನ ಒಡನಾಟದಿಂದ ಏನೂ ಪ್ರಯೋಜನವಿಲ್ಲವೆಂದು ಹಿಂದಿನ ವಚನದಲ್ಲಿ ಉಲ್ಲೇಖಿಸಿದ್ದಾರೆ.

ಗಾಣಿಗನು ಈಶ್ವರನ ಕಾಣನೆಂಬುದು ಸಹಜ

ವರ್ಣಾಂಕಧರನು ಧರೆಗಿಳಿಯಲವನಿಂದ

ಗಾಣವಾಡಿಸುವ ಸರ್ವಜ್ಞ.

ಗಾಣಿಗನಾದವನು ಎಷ್ಟೊಂದು ಮೂಢನಾಗಿರಬಹುದು ಅಥವಾ ತನ್ನ ಕಾಯಕದಲ್ಲಿ ನಿರತನಾಗಿ ಇತರರ ವ್ಯಕ್ತಿತ್ವ, ರೀತಿ ನೀತಿಗಳನ್ನೇ ಮರೆಯುವ ಸ್ಥಿತಿ ಅವನಲ್ಲುಂಟಾಗಿರುವುದೆಂಬುದಕ್ಕೆ ಮೇಲಿನ ವಚನವೇ ಸಾಕ್ಷಿಯಾಗಿದೆ.

ತಲೆಯಲ್ಲಿ ಚಂದ್ರನನ್ನು ಧರಿಸಿದ ಶಿವನೇ ತನ್ನ ನದಿಯನ್ನೇರಿ ಧರೆಗಿಳಿದು ಗಾಣಿಗನೆ ಮುಂದೆ ನಿಂತಾಗಲೂ, ಆ ಬಡ ಗಾಣಿಗ ಎನ್ನುತ್ತಾನೆ ಮಾಡಿಯಾನು ಬಂದಿರುವಾತ ದೇವರೆಂಬ ನಂಬಿಕೆ ಬರುವುದಿಲ್ಲ ಕಾರಣ ಗಾಣದಲ್ಲಿ ಸುತ್ತುವ ಆತನ ಎತ್ತು ಸತ್ತು ಹೋಗಿರಬಹುದು. ಇದರಿಂದ ತನ್ನ ಕಾಯಕ್ಕೆ ತೊಂದರೆಯಾಯಿತಲ್ಲವೆಂಬ ಚಿಂತೆಯಲ್ಲಿ ಮುಳುಗಿರಬಹುದು. ಈ ಸಂದರ್ಭದಲ್ಲಿ ಪ್ರತ್ಯಕ್ಷನಾದ ಶಿವನನ್ನು ಹಾಗೂ ಅವನೊಂದಿಗಿರುವ ಗಟ್ಟಿ ಮುಟ್ಟಿದ ಎತ್ತನ್ನು ನೋಡಿ ಬೆರಗಾಗಿ ಆ ವ್ಯಕ್ತಿಯಿಂದಲೇ ತನ್ನ ಗಾಣದಲ್ಲಿ ಎತ್ತನ್ನು ಹೊಡಿಸಿ, ಗಾಣ ಆಡಿಸಿಕೊಳ್ಳಬೇಕೆಂಬ ಆಲೋಚನೆ ಹೊಳೆದಿರಬೇಕು.

ಚಿತ್ತವಿಲ್ಲದ ಗುಡಿಯ ಸುತ್ತಿದೊಡೆ ಫಲವೇನು.

ಎತ್ತು ಗಾಣವನು ಹೊತ್ತು ತಾ

ಸುತ್ತಿ ಬಂದಂತೆ ಸರ್ವಜ್ಞ.

ಯಾವುದೇ ಕೆಲಸದಲ್ಲಿ ನಿರತನಾದರೆ ಅದರಲ್ಲಿ ಶ್ರದ್ಧೆ ಎಂಬುದು ಇರಲೇ ಬೇಕು. ಶ್ರದ್ಧೆ ಇಲ್ಲದಿರುವ ಕೆಲಸವೆಲ್ಲ ವ್ಯರ್ಥವಾಗುತ್ತದೆ. ಇದಕ್ಕೆ ಸರ್ವಜ್ಞನು ಎತ್ತು ಗಾಣವನು ತಾ ಹೊತ್ತು ಸುತ್ತಿದಂತೆ ಎಂಬುದಾಗಿ ಹೇಳಿದ್ದಾನೆ. ಹೀಗೆ ಇಲ್ಲಿ ಗಾಣಿಗನು ಟೀಕಿಸುತ್ತಾ ಆತನ ಎತ್ತುಗಳನ್ನು ಸಹ ಶ್ರದ್ಧೆ ಇಲ್ಲದ ಕೆಲಸಕ್ಕೆ ಹೋಲಿಸಿದ್ದಾನೆ.

ಜಾಣ ಜಾಣಗೆ ಲೇಸು, ಕೋಣ ಕೋಣಗೆ ಲೇಸು

ನಾಣ್ಯವದು ಲೇಸು ಲೋಕಕ್ಕೆ, ಊರಿಗೆ

ಗಾಣಿಗನು ಲೇಸು ಸರ್ವಜ್ಞ,

ಈ ಮೇಲಿನ ತ್ರಿಪದಿಯನ್ನು ಗಮನಿಸಿದಾಗ ಅದು ಅವನ ಅವಶ್ಯಕತೆ ಎತ್ತಿ ತೋರಿಸುತ್ತದೆ, ಯಾವುದೇ ಸಮಾಜದಲ್ಲಿ ವ್ಯಕ್ತಿ ಬೇಕಾದವನಾಗಬೇಕಾದಲ್ಲಿ ಆತನ ಕಾರ್ಯ, ಪರಸ್ಪರ ನಂಬಿಕೆ ನಿಷ್ಠೆ ಪ್ರಮುಖ ಪಾತ್ರವಹಿಸುತ್ತವೆ. ಅದಕ್ಕಾಗಿ ಊರಿನಲ್ಲಿ ಆತನು ಇದ್ದಾರೆ. ಲೇಸು ಎಂದು ಅನ್ನಿಸಿಕೊಳ್ಳುತ್ತಾನೆ.

ಬತ್ತಿ ಎಣ್ಣೆಗಳೆರಡು ಹೊತ್ತಿ ಬೆಳಗುವ ತೆರದಿ

ಸತ್ಯ ನೀತಿಗಳು ಬೆಳಗಿಹವು ಜೋಡಗಲೆ

ಕತ್ತಲೀ ಜಗವು ಸರ್ವಜ್ಞ,

ಈ ಮೇಲಿನ ತ್ರಿಪದಿಯನ್ನು ಗಮನಿಸಿದಾಗ ಸತ್ಯ ನೀತಿಗಳು ಬತ್ತಿ ಎಣ್ಣೆಗಳಿದ್ದಂತೆ, ಅವೆರಡೂ ಇದ್ದಾರೆ ಮಾತ್ರ ಬೆಳಕು ಕಾಣುವುದು. ಎರಡರಲ್ಲಿ ಒಂದು ಅಥವಾ ಎರಡು ಇಲ್ಲವಾದರೆ ಕತ್ತಲೆ ಆವರಿಸುವುದು ಅನುಭವ ವೇದ್ಯವಾದ ಸಂಗತಿಯೂ ಹಾಗೆ ಸತ್ಯ ನೀತಿಗಳಲ್ಲಿ ಒಂದು ಅಥವಾ ಎರಡು ಇಲ್ಲವಾದರೆ ಜಗತ್ತೇ ಕತ್ತಲೆಯಲ್ಲಿ ಮುಳುಗುವುದು, ಅಂತಹ ಸತ್ಯ ನೀತಿಗಳ ಹಿನ್ನೆಲೆಯಿಟ್ಟುಕೊಂಡು ನಿಷ್ಕಾಮ ಸೇವೆಯಿಂದ ಗುರಿಮುಟ್ಟಬೇಕು.

ನೀನೇ ಗಾಣಿಗ

ಜಗವೇ ಗಾಣ

ಗ್ರಹಗಳೇ ಎತ್ತುಗಳು

ಕರ್ಮಗಳೇ ಕಾಳು

ಎಣ್ಣೆಯಾಗಿ ಸಣ್ಣಾಗುವುದೇ ಜೀವ

ಇನ್ನಾದರೂ ಈ ಗಾಣದಾಟದಿಂದ ಬಿಡುಗಡೆ ಮಾಡಯ್ಯಾ ಚರ ಬಸವ

ಗಾಣಿಗರ ಧರ್ಮ ಶ್ರಮಧರ್ಮ, ಎಷ್ಟು ಕಷ್ಟದಲ್ಲಿದ್ದರೂ ಅವರು ರಟ್ಟೆಮುರಿದು ದುಡಿದೇ ತಮ್ಮ ರೊಟ್ಟಿಯನ್ನು ಸಂಪಾದಿಸಲು ಅವಣಿಸುತ್ತಾರೆ. ಹೊರತು ತುಡುಗುತನಕ್ಕೆ ಆಸೆ ಮಾಡಲಾರರು.

ಆನೆಗಂದಳವೇಕೆ ಸೋನಂಗೆ ಸೊಬಗೇಕೆ

ಗಾಣವಾಡುವಗೆ ಮಡಿಯೇಕೆ ಮರುಳಂದೆ

ಆನಂತವೇಕೆ ಸರ್ವಜ್ಞ,

ಪಲ್ಲಕ್ಕಿಯಲ್ಲಿ ದೇವರನ್ನಿಟ್ಟುಕೊಂಡು ಮೆರವಣಿಗೆ ಮಾಡುತ್ತಾರೆಯೇ ಹೊರತು, ಪಲ್ಲಕ್ಕಿಯನ್ನು ಹೊತ್ತ ಆನೆಯನ್ನಲ್ಲ, ಅದಕ್ಕಾಗಿ ಆನೆಗೆ ಪಲ್ಲಕ್ಕಿಯ ಅರಿವಿರುವುದಿಲ್ಲ. ನಾಯಿ ಬಾಲ ಸದಾ ಡೊಂಕು ಎಂಬಂತೆ ನಾಯಿಯನ್ನು ಬಹಳ ಪ್ರೀತಿಯಿಂದ ಎತ್ತಿಕೊಂಡು ಒಂದು ಸಿಂಹಾಸದ ಮೇಲೆ ಕೂಡಿಸಿದರೂ ಅದು ಹೇಸಿಗೆ ಕಂಡ ತಕ್ಷಣ ಜಿಗಿಯುತ್ತದೆ. ಆದ್ದರಿಂದ ನಾಯಿಗೆ ಸೊಬಗುತ್ತನೆ ಬೇಡ ಹಾಗೆಯೋ ಗಾಣಿಗನಾದವನಿಗೆ ತನ್ನದೇ ವೃತ್ತಿಯಲ್ಲಿ ನಿರತನಾಗಿರುವಾಗ ಹಗಲು ರಾತ್ರಿಗಳು ಗೊತ್ತಾಗುವುದಿಲ್ಲ ಹಾಗೂ ಗಾಣಿಗನಿಗೆ ಮಡಿ ಮೈಲಿಗೆಗಳ ಪರಿವೆಯೇ ಇರುವುದಿಲ್ಲ.

## ಚಿತ್ರದುರ್ಗ ಜಿಲ್ಲೆ

ಚಿತ್ರದುರ್ಗವು (ಜಿಲ್ಲಾ ಉಪವಿಭಾಗ, ತಾಲ್ಲೂಕು ಕೇಂದ್ರ ಜನಸಂಖ್ಯೆ ೭೪, ೨೫೩) ಚಿತ್ರದುರ್ಗವು ಬೆಂಗಳೂರಿನಿಂದ ಸುಮಾರು ೨೦೨ ಕಿ.ಮೀ ದೂರದಲ್ಲಿದೆ, ಇದಕ್ಕೆ ಮಿರಜ್-ಬೆಂಗಳೂರು ರೈಲ್ವೆ ಮಾರ್ಗದ ಸಂಪರ್ಕವನ್ನು ಚಿಕ್ಕಜಾಜೂರಿನ ಶಾಖಾ ಮಾರ್ಗದಿಂದ ಜೋಡಿಸಲಾಗಿದೆ. ಇಲ್ಲಿ ಪುರಸಭೆಯಿದೆ. ಇಲ್ಲಿ ಒಂದು ಭವ್ಯವಾದ ಬೆಟ್ಟದ ಮೇಲಿನ ಕೋಟೆಯಿದ್ದು, ಅದನ್ನು ಹೆಸರಾಂತ ಪಾಳೆಯಗಾರರು ನಿರ್ಮಿಸಿದ್ದಾರೆ. ಆರಂಭದಲ್ಲಿ ಅವರು ವಿಜಯ ನಗರದ ಸಾಮಂತರಾಗಿದ್ದು, ಅನಂತರ ಮರಾಠರೊಡನೆ ಒಪ್ಪಂದ ಮಾಡಿಕೊಂಡಿದ್ದು. ಹೈದರ್ ಅಲಿಯು ೧೭೭೭ರಲ್ಲಿ ಈ ಸಾಮಂತ ರಾಜ್ಯವನ್ನು ನಿರ್ನಾಮಗೊಳಿಸಿದನು, ಈ ನಗರದಲ್ಲಿ ಹೊಯ್ಸಳರ, ವಿಜಯನಗರದ ಅರಸರ ಮತ್ತು ಪಾಳೆಯಗಾರ ಮನೆತನದ ನಾಯಕರ ಅನೇಕ ಶಿಲಾಶಾಸನಗಳಿವೆ, ಚಿತ್ರದುರ್ಗವೆಂಬ ಈಗಿನ ಹೆಸರು ಚಿತ್ರವತ್ತಾದ ಕೋಟೆ ಎಂಬ ಅರ್ಥದ ಚಿತ್ರಕಲ್ ದುರ್ಗ ಎಂಬುದರಿಂದಾಗಲಿ ಅಥವಾ ಕೊಡೆಯಾಕಾರದ ಬಂಡೆಗಲ್ಲು ಎಂಬ ಅರ್ಥದ ಛತ್ರಕಲ್ ಎಂಬ ಪದದಿಂದ ಬಳಕೆಗೆ ಬಂದಿದೆಯೆಂದು ನಂಬಲಾಗಿದೆ, ಚಿತ್ರಕಲ್ ಎಂಬ ಪದವೇ ಇದರ ಮೊದಲಿನ ಹೆಸರಾದ ಸುಳಿಗಲ್ ಎಂಬುದರ ಉತ್ಪತ್ತಿಯಾಗಿರಬಹುದು. ಕನ್ನಡದಲ್ಲಿ ಸುಳಿ ಎಂದರೆ ಚಿತ್ರ ಎಂದು ಅರ್ಥ, ಚಿಮ್ಮತ್ತನ ಕಲ್ಲು (ಇತ್ತೀಚೇಗೆ ಅದನ್ನು ಚಿಮ್ಮನಕಲ್ಲು ಎಂದು ಓದಲಾಗಿದೆ) ಬ್ರಹ್ಮಗಿರಿಪುರ, ಪೆರುಮಾಳಪುರ, ಚಿಮ್ಮತ್ತನೂರು ಮುಂತಾಗದವು ಶಿಲಾಶಾಸನಗಳಲ್ಲಿ ಕಂಡುಬರುವ ಈ ಊರಿನ ಇನ್ನಿತರ ಹಳೆಯ ಹೆಸರುಗಳಾಗಿವೆ. ಸ್ಥಳಪುರಾಣಗಳಲ್ಲಿ ಉತ್ತಮವಾಗಿರುವ ಹಿಡಂಬಿಪಟ್ಟಣ ಸ್ಥಳ ಪುರಾಣದ ಪ್ರಕಾರ ಮಹಾಭಾರತ ಪ್ರಸಿದ್ಧಿಯ ಹಿಡಂಬಾ ಇಲ್ಲಿ ವಾಸವಾಗಿದ್ದಳು ೧೫ನೇಯ ಶತಮಾನ ವಿಜಯನಗರದ ವೀರಮಲ್ಲಣ ಒಡೆಯನು ಕೊಟ್ಟ ಹೆಸರಾದ ಮಲ್ಲರಾಯನ ದುರ್ಗ, ಟಿಪ್ಪುಸುಲ್ತಾನನ ಕಾಲದಲ್ಲಿ ಪ್ರಚಾರದಲ್ಲಿದ್ದ ಫರಾಕಾಬಾದ್ ಎಂಬುದು ಈ ಊರಿನ ಇತರ ಹೆಸರುಗಳಾಗಿವೆ.

ಈ ಊರಿನ ಮೂಲ ಹೆಸರಾದ ಚಿನ್ಮೂಲಾದ್ರಿ ಎಂಬುದನ್ನು ಶ್ರೀ ಮುರುಘಾರಾಜೇಂದ್ರ ಸ್ವಾಮಿಗಳು ಮತ್ತು ಶ್ರೀ ಕೂಡ್ಲಿ ಶೃಂಗೇರಿ ಮಠದ ಸ್ವಾಮಿಗಳು ಇಂದಿಗೂ ಉಪಯೋಗಿಸುತ್ತಾರೆ, ಭವ್ಯವಾದ ಈ ದುರ್ಗದ ಕೋಟೆ ಏಳು ಅಳಿದುಳಿದ ಗೋಡೆಗಳನ್ನು ಹೊಂದಿದೆ. ಅವುಗಳಲ್ಲಿ ಹೊರ ವಲಯದ ಗೋಡೆಗೆ ಪೂರ್ವದಲ್ಲಿ ರಂಗಯ್ಯನ ಬಾಗಿಲು, ಉತ್ತರದಲ್ಲಿ ಸಿದ್ದಯ್ಯನ ಬಾಗಿಲು, ಪಶ್ಚಿಮದಲ್ಲಿ ಸಿಹಿನೀರು ಹೊಂಡದ ಬಾಗಿಲು ಅಥವಾ ಉಚ್ಚಂಗಿ ಬಾಗಿಲು ಮತ್ತು ದಕ್ಷಿಣದಲ್ಲಿ ಲಾಲ್‌ಕೋಟೆ ಬಾಗಿಲು ಎಂಬ ೪ ಪ್ರವೇಶದ್ವಾರಗಳಿವೆ, ಪಟ್ಟಣದ ದಕ್ಷಿಣಕ್ಕಿರುವ ಬೆಟ್ಟದ ತುದಿಯ ಮೇಲೆ ಓಬಲಾದೇವಿಯ ಗುಡಿಯಿದ್ದು, ವಿಶೇಷವಾಗಿ ಬೇಡರಿಗೆ ಅದು ಪವಿತ್ರ ಸ್ಥಳವಾಗಿದೆ. ಪೂರ್ವ ದಿಶೆಯಿಂದ ಬೆಟ್ಟದ ತುದಿಗೆ ಹೋಗುವಾಗ ೫ ಪ್ರವೇಶದ್ವಾರಗಳು ಎದುರಾಗುತ್ತವೆ ಬೆಟ್ಟದ ತುದಿಯ ಮೇಲೆ ಸಂಪಿಗೆ ಸಿದ್ದೇಶ್ವರ, ಹಿಡಂಬೇಶ್ವರ, ಏಕನಾಥಮ್ಮ ಫಲ್ಗುಣೇಶ್ವರ ಗೋಪಾಲಕೃಷ್ಣ, ಆಂಜನೇಯ, ಸುಬ್ಬರಾಯ ಮತ್ತು ಬಸವ ಎಂಬ ದೇವಾಲಯಗಳಿವೆ, ಇಲ್ಲಿರುವ ಬಹುತೇಕ ಮಂದಿರಗಳು ಪಾಳೆಗಾರರ ಮನೆತನದವರಿಂದ ನಿರ್ಮಿತವಾದ

ಹಾಗೂ ಜೀರ್ಣೋದ್ಧಾರಗೊಂಡ ವಿಜಯನಗರ ಶೈಲಿಯ ಕಣಶಿಲೆಯ ಕಟ್ಟಡಗಳಾಗಿವೆ. ಹಿಂಡಬೇಶ್ವರ ದೇವಾಲಯದ ಎದುರಿನಲ್ಲಿರುವ ಗಾಳಿಮಂಟಪವು ವೈಶಿಷ್ಟ್ಯಪೂರ್ಣವಾದ ಕಣಶಿಲೆಯ ಕಟ್ಟಡವಾಗಿದೆ. ಮೇಲ್ಭಾರ್ಗದ ಮೇಲೆ ಬೀಳುವ ಮಳೆಯ ನೀರು ಹಲವಾರು ಹೊಂಡಗಳನ್ನು ತುಂಬುತ್ತದೆ. ಅವುಗಳಲ್ಲಿ ಗೋಪಾಲಕೃಷ್ಣದೇವರ ಹೊಂಡ, ಅಕ್ಕತಂಗಿಯ ಹೊಂಡ, ಸಿಹಿ ನೀರಿನ ಮತ್ತು ಸಂತೆ ಹೊಂಡ ಎಂಬುದು ಪ್ರಸಿದ್ಧವಾಗಿವೆ. ಬಸರೆ ಕಿಂಡಿ ಎಂಬ ಗುಪ್ತದ್ವಾರವು ಕೋಟೆಯಲ್ಲಿ ಗುಪ್ತವಾಗಿ ಪ್ರವೇಶಿಸಲು ಪ್ರಯತ್ನಿಸಿದ ಹೈದರ್ ಅಲಿಯ ಸೈನಿಕರ ವಿರುದ್ಧ ಹೋರಾಡಿದ ವೀರಮಹಿಳೆ ಓಬವ್ವನ ವೀರಗಾಥೆಯೊಂದಿಗೆ ಸಂಬಂಧಹೊಂದಿದೆ, ಬೆಟ್ಟದ ತಳಭಾಗದಲ್ಲಿ ಉಚ್ಚಂಗಿಯಮ್ಮ (ಉತ್ಸವಾಂಬಾ)ನ ದೇವಾಲಯವಿದೆ. ಸುತ್ತಲೂ ಬೃಹದಾಕಾರದ ಕಣಶಿಲೆಯ ಬಂಡೆಗಳಿಂದ ಆವೃತವಾದ ಈ ಕೋಟೆಯು ಚಿತ್ರವತ್ತಾಗಿದೆ.

ರಾಜ್ಯ ಸರ್ಕಾರದ ಪುರಾತತ್ವ ಇಲಾಖೆಯ ವಸ್ತು ಸಂಗ್ರಹಾಲಯವು ರಂಗಯ್ಯನ ಬಾಗಿಲಿನಲ್ಲಿದೆ. ಅದರಲ್ಲಿ ಪುರಾತತ್ವ ಮಹತ್ವದ ವಿವಿಧ ವಸ್ತುಗಳನ್ನು ಮತ್ತು ಚಿತ್ರಗಳನ್ನು ಪ್ರದರ್ಶಿಸಲಾಗಿದೆ ಇದನ್ನು ದಿವಂಗತ ಹುಲ್ಲೂರು ಶ್ರೀನಿವಾಸ ಜೋಯಿಸ್ ಎಂಬುವರು ಸ್ಥಾಪಿಸಿದರು. ಟಿ.ಎನ್. ಗಂಡುಗಲಿ ಎಂಬುವವರು ಇಲ್ಲಿಯ ಮದಕರಿ ನಿಲಯದಲ್ಲಿ ಐತಿಹಾಸಿಕ ಮಹತ್ವದ ವಿವಿಧ ವಸ್ತುಗಳ ಖಾಸಗಿ ವಸ್ತುಸಂಗ್ರಹಾಲಯವನ್ನು ನಿರ್ಮಿಸುತ್ತಿದ್ದಾರೆ. ಎಚ್ ಶ್ರೀ ಶೈಲಾರಾಧ್ಯ ಎಂಬುವರ ಹತ್ತಿರ ಹಳೆಯ ನಾಣ್ಯಗಳೂ, ಉಪಕರಣಗಳೂ ಮತ್ತಿತರ ಐತಿಹಾಸಿಕ ಮಹತ್ವದ ವಸ್ತುಸಂಗ್ರಹವಿದೆ. ಚೆನ್ನಕೇಶವ, ವೆಂಕಟರಮಣ, ಆಂಜನೇಯ, ಗೋಪಾಲಪುರ ನೀಲಕಂಠೇಶ್ವರ, ಜೋಳೇಶ್ವರ, ಅಹೇಶ್ವರ ಮತ್ತು ಗಂಗಾಧರೇಶ್ವರ ಮುಂತಾದವು ಇಲ್ಲಿರುವ ಕೆಲವು ಮಹತ್ವದ ದೇವಾಲಯಗಳಾಗಿವೆ. ಅತ್ಯಂತ ಭವ್ಯಕಟ್ಟಡವನ್ನು ಹೊಂದಿದ ಮುರುಘರಾಜೇಂದ್ರ ಬೃಹನ್ಮಠ, ಕೂಡಲಿ ಶೃಂಗೇರಿಮಠ, ರಾಘವೇಂದ್ರಮಠ ಉತ್ತರಾಧಿಮಠ, ಉಜ್ಜೈನಿಮಠ, ಕಂಟೀರ್ ಮಠ, ಮುಸ್ಟೂರು ಮಠ ಎಂಬುವು ಇಲ್ಲಿನ ಪ್ರಮುಖ ಮಠಗಳು. ಚಿತ್ರದುರ್ಗದಲ್ಲಿ ೭ ಮಸೀದಿ ೨ ಚರ್ಚು, ೧ ಜೈನಬಸದಿ ಇದೆ. ಜಗದ್ಗುರು ಮುರುಘ ಮಠದ ವಿಶ್ವಸಂಸ್ಥೆಯು ಅನೇಕ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುತ್ತದೆ. ಜೋಳ, ರಾಗಿ, ತೆಂಗು, ಅಡಿಕೆ, ಸೂರ್ಯಪಾನ, ಶೇಂಗಾ, ಈರುಳ್ಳಿ ಇಲ್ಲಿನ ಪ್ರಮುಖ ಬೆಳೆಗಳಾಗಿವೆ. ಹತ್ತಿಬೀಜ ಬಿಡಿಸುವ ನೂಲು ಉತ್ಪಾದನೆಯ ಕಾರ್ಖಾನೆಗಳಿವೆ. ಕಡ್ಡಿ ಪೆಟ್ಟಿಗೆ ಕಾರ್ಖಾನೆಯೂ ಇದೆ. ಚಿತ್ರದುರ್ಗದ ದಕ್ಷಿಣಕ್ಕೆ ೧೪ ಕಿ.ಮಿ ಅಂತರದಲ್ಲಿರುವ ಜೋಗಿಮಟ್ಟಿಯು ಅತ್ಯಂತ ಸುಂದರವಾದ ಗಿರಿಧಾಮವಾಗಿದೆ, ಅದು ಸಮುದ್ರದ ಪಾತಳಿಯಿಂದ ಸುಮಾರು ೧,೩೨೩ ಮೀ ಎತ್ತರದಲ್ಲಿದೆ, ಅತ್ಯಂತ ತಂಪಾದ ಹವೆ, ಸುಂದರವಾದ ನೈಸರ್ಗಿಕ ದೃಶ್ಯ, ನಿತ್ಯ ಹಸುರಾಗಿರುವುದರಿಂದ ಇದು ಬೇಸಿಗೆಯ ಧಾಮವಾಗಿದೆ. ಮನುಷ್ಯರು ಮತ್ತು ದನಗಳ ಕಾಯಿಲೆಯನ್ನು ಗುಣ ಪಡಿಸುವ ವೈದ್ಯ ಪ್ರವೀಣನಾಗಿದ್ದ ಒಬ್ಬ ಜೋಗಿಯ ಸಮಾಧಿಯೊಂದು ಇಲ್ಲಿದೆ. ಆದುದರಿಂದ ಈ ಸ್ಥಳಕ್ಕೆ ಜೋಗಿ ಮರಡಿ ಅಥವಾ ಜೋಗಿಮಟ್ಟಿ ಎಂಬ ಹೆಸರು ಬಂದಿದೆ. ಚಿತ್ರದುರ್ಗ ತಾಲ್ಲೂಕಿನ ದರ್ಶನೀಯ ಸ್ಥಳಗಳು ಈ ರೀತಿ ಇವೆ, ಹಿಮವತ್ ಕೇದಾರ ಎಂಬುದು ಒಂದು ಸಣ್ಣ ಜಲಪಾತವಾಗಿದ್ದು ಜೋಗಿಮಟ್ಟಿ ರಸ್ತೆಯ ಬಲಬದಿಯಲ್ಲಿ ಬಂಡಿಗಲ್ಲುಗಳಿಂದ ಆವೃತವಾದ ತಗ್ಗಾದ

ಪ್ರದೇಶದಲ್ಲಿದೆ. ಇದು ಚಿತ್ರದುರ್ಗದಿಂದ ಆರು ಕಿ.ಮೀ ದೂರದಲ್ಲಿದೆ. ಈ ಜಲಪಾತವು ಬೆಟ್ಟದ ಓರೆಗಳಲ್ಲಿ ಉಂಟಾಗಿದೆ. ಅಲ್ಲೊಂದು ಸಣ್ಣ ಗುಹೆಯಿದ್ದು ಅದರಲ್ಲಿ ಶಿವಲಿಂಗವಿದೆ, ವೀರಭದ್ರ ಮತ್ತು ಬಸವನ ಮೂರ್ತಿಗಳು ಇವೆ, ನೀರು ಬಸವನ ಮುಖದಿಂದ ಹೊರಚಲ್ಲುತ್ತದೆ. ಪಂಡರಹಳ್ಳಿ ಗುಡ್ಡವು ಚಿತ್ರದುರ್ಗದಿಂದ ಸುಮಾರು ೧೧ ಕಿ.ಮೀ ದೂರದಲ್ಲಿದೆ. ಇಲ್ಲಿರುವ ಸಮಪಾತಳಿ ಪ್ರದೇಶವು ಸುಂದರ ದೃಶ್ಯಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಪಂಡರಹಳ್ಳಿಯ ಗುಡ್ಡದ ತುದಿಯ ಮೇಲೆ ರಂಗನಾಥಸ್ವಾಮಿಯ ದೇವಾಲಯವಿದೆ. ಈ ದೇವಾಲಯವು ಗಂಜೀಗಟ್ಟಿಹಳ್ಳಿ ಕಂದಾಯ ಗ್ರಾಮದಲ್ಲಿ ಬರುತ್ತದೆ. ಈ ದೇವಾಲಯಕ್ಕೆ ಹೋಗುವ ದಾರಿಯಲ್ಲಿರುವ ಗುಹೆಯಲ್ಲಿ ಭೀಮೇಶ್ವರಲಿಂಗವಿದೆ. ಅಲ್ಲಿ ಎರಡು ಕೊಳಗಳಿದ್ದು, ೧ ರಂಗನಾಥಸ್ವಾಮಿಯ ದೇವಾಲಯದ ಎದುರಿನಲ್ಲಿಯೂ ಇನ್ನೊಂದು ಬೆಟ್ಟದ ತುದಿಯ ಮೇಲೂ ಇದೆ. ಇಲ್ಲಿರುವ ಮಹಾಲಕ್ಷ್ಮೀ ದೇವಾಲಯವನ್ನು ಇತ್ತೀಚೇಗೆ ನಿರ್ಮಿಸಲಾಗಿದೆ. ಎಡಬದಿಗೆ ಆಂಜನೇಯಸ್ವಾಮಿಯ ದೇವಾಲಯವಿದೆ. ಬೆಟ್ಟದ ಹಿಂಭಾಗದಲ್ಲಿ ಪುರಾತನವಾದ ಜನ್ನೇಶ್ವರ ದೇವಾಲಯವು ಇದೆ. ಚಿತ್ರದುರ್ಗದಿಂದ ೬.೫ ಕಿ.ಮೀ ದೂರದಲ್ಲಿರುವ ಇಂಗಳದಹಾಳು (ಜನ: ೯೦೧) ಎಂಬ ಸಣ್ಣ ಹಳ್ಳಿಯು ಹಿಂದಿನ ಕಾಲದಿಂದಲೂ ಗಣಿ ಕೆಲಸ ಮತ್ತು ಲೋಹ ಕಾರ್ಯಗಳ ಕೇಂದ್ರವಾಗಿರುವಂತೆ ತೋರುತ್ತದೆ. ಇಲ್ಲಿ ಬಂಗಾರ, ಬೆಳ್ಳಿ ಮತ್ತು ತಾಮ್ರದ ಗಣಿಗಳ ಕಾರ್ಯ ನಡೆಯುತ್ತಿತ್ತೆಂದು ನಂಬಲಾಗುತ್ತದೆ. ಈ ಹಳ್ಳಿಯ ಸಮೀಪದಲ್ಲಿ ಇಂಗಳದ ಹಾಳು ಮರಡಿ ಅಥವಾ ಬೆಟ್ಟಗುಡ್ಡದ ಶ್ರೇಣಿ ಎಂದು ಕರೆಯಲ್ಪಡುವ ಸುಮಾರು ನಾಲ್ಕೈದು ಗುಡ್ಡಗಳಿವೆ. ಇಂಗಳ ಎಂದರೆ ಇದ್ದಿಲು, ಒಲೆಯಲ್ಲಿ ಉಪಯೋಗಿಸಿ ಉಳಿದ ಇದ್ದಲನ್ನು ಇಲ್ಲಿ ರಾಶಿಯಾಗಿ ಒಟ್ಟಿರುವುದರಿಂದ ಈ ಊರಿಗೆ ಈ ಹೆಸರು ಬಂದಿದೆ ಇಲ್ಲಿ ಪ್ರಾಚೀನ ಕಾಲದ ಗಂಧಕದ ಗಣಿಗಳಿವೆ, ವಜ್ರದ ಗಣಿಯನ್ನು ಕೊರೆಯುವ ಪ್ರದೇಶದ ಉದ್ದವನ್ನು ಎರಡು ಸಾವಿರ ಅಡಿ ಎಂದು ತೋರಿಸಲಾಗಿದೆ. ಚಿತ್ರದುರ್ಗ ಕಾಪರ್ ಕಂಪನಿ ಲಿಮಿಟೆಡ್ ಇಂಗಳದಹಾಳು ಎಂಬಲ್ಲಿದೆ.

ಚಿತ್ರದುರ್ಗ ಜಿಲ್ಲೆಯು ಆರು ತಾಲ್ಲೂಕುಗಳನ್ನು ಹೊಂದಿದೆ. ೧.ಚಿತ್ರದುರ್ಗ ೨.ಚಳ್ಳಕೆರೆ, ೩.ಹಿರಿಯೂರು ೪.ಮೊಳಕಾಲ್ಮೂರು ೫.ಹೊಸದುರ್ಗ ೬.ಹೊಳಲ್ಕೆರೆ ಇದರಲ್ಲಿ ಮೇಲಿನ ನಾಲ್ಕು ತಾಲ್ಲೂಕುಗಳಲ್ಲಿ ಸಜ್ಜನ ಗಾಣಿಗರಿಂದ ಕೂಡಿದ್ದು ಉಳಿದ ಎರಡು ತಾಲ್ಲೂಕುಗಳಲ್ಲಿ ಜ್ಯೋತಿ ಗಾಣಿಗರಿದ್ದಾರೆ. ಗಾಣಿಗರ ಅಧ್ಯಯನಕ್ಕೆ ಚಿತ್ರದುರ್ಗ ಜಿಲ್ಲೆಯನ್ನು ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

• • •

## ಅಧ್ಯಾಯ : ಮೂರು

## ಗಾಣಿಗ ಸಮುದಾಯದ ಸಾಮಾಜಿಕ ಜೀವನ

ಮಾನವ ಸಮಾಜ ಜೀವಿ ಮತ್ತು ಸಂಘ ಜೀವಿ ಅವನು ಸಮಾಜದಲ್ಲಿ ಬದುಕುವಾಗ ಸಮಾಜದ ರೀತಿ-ನೀತಿಗಳೊಂದಿಗೆ ಬದುಕುತ್ತಾನೆ. ತನ್ನ ಕುಟುಂಬದಲ್ಲಿಯೂ ಸಮಾಜದ ರೀತಿ-ನೀತಿಗಳಿರುವಂತೆ ಒಂದು ನಿಯಂತ್ರಣ ವ್ಯವಸ್ಥೆ ಅಂದರೆ ತನ್ನದೇ ಆದ ವಿಧಿ ನಿಷೇಧಗಳು, ಆಚಾರ-ವಿಚಾರ, ಕಾನೂನು ಕಟ್ಟಳೆಗಳನ್ನು ಹೊಂದಿರುವುದನ್ನು ಕಾಣಬಹುದು. ಗಾಣಿಗ ಸಮುದಾಯದಲ್ಲಿಯೂ ನಾವು ಇದನ್ನು ಕಾಣಬಹುದು. ತನ್ನ ಕುಟುಂಬದ ಸುಭದ್ರತೆಯನ್ನು ಕಾಯ್ದು ಕೊಳ್ಳುವುದು ಸಹ ಒಂದು ಸಮುದಾಯಕ್ಕೆ ಮುಖ್ಯವೂ ಆಗಿರುತ್ತದೆ. ಹಾಗಾಗಿ ಅವನು ಸಮಾಜದೊಂದಿಗೆ ಸಂಬಂಧವನ್ನು ಹೊಂದಿ ತನ್ನದೇ ಆದ ಒಂದು ಪ್ರತ್ಯೇಕ ನೀತಿ-ನಿಯಮಗಳನ್ನು ಮೈಗೂಡಿಸಿಕೊಂಡು ಬದುಕುತ್ತಾನೆ. ತನ್ನ ಕುಟುಂಬದ ನಿಯಮಗಳು, ಆಚರಣೆಗಳು, ವ್ಯಕ್ತಿಯನ್ನು ಅನೌಪಚಾರಿಕ ನಿಯಂತ್ರಕ್ಕೆ ಒಳಪಡಿಸುತ್ತದೆ. ಇಲ್ಲಿ ಸಂಪ್ರದಾಯಗಳ, ಆಚರಣೆಗಳ ಮೂಲಕ ನೈತಿಕ ಮೌಲ್ಯಗಳ ಮೂಲಕ, ತನ್ನ ಸದಸ್ಯರನ್ನೂ ಅನೌಪ ಚಾರಿಕ ನಿಯಂತ್ರಣ ಸಾಧನಗಳಿಂದ ಕುಟುಂಬವು ನಿಯಂತ್ರಣಕ್ಕೆ ಒಳಪಡಿಸುತ್ತದೆ.

ಒಂದು ಸಮಾಜದ ಅತಿ ಸಂಕೀರ್ಣ ಘಟಕವೆಂದರೆ ಕುಟುಂಬ ಎನ್ನಬಹುದಾಗಿದೆ. ಒಂದು ಸಮುದಾಯದ ಕುಟುಂಬವನ್ನು ಅಭ್ಯಾಸಿಸುವುದರ ಮೂಲಕ ಆ ಸಮುದಾಯವನ್ನು, ನಂತರ ಆ ಸಮುದಾಯ ಸಮಾಜದೊಂದಿಗೆ ಹೊಂದಿರುವ ಸಂಬಂಧವನ್ನು ತಿಳಿಯಲು ಸಹಕಾರಿಯಾಗುತ್ತದೆ ಎಂದು ಹೇಳಬಹುದು. ಆದ್ದರಿಂದ ಈ ಅಧ್ಯಾಯದಲ್ಲಿ ಸಜ್ಜನ ಗಾಣಿಗ ಸಮುದಾಯದ ಹಲವಾರು ಕುಟುಂಬಗಳನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅಧ್ಯಯನ ಮಾಡಲಾಗಿದೆ. ಆ ಮುಖಾಂತರ ಸಮುದಾಯದ ಸಾಮಾಜಿಕ ಜೀವನವನ್ನು ತಿಳಿಯುವ ಕಾರ್ಯ ಮಾಡಲಾಗಿದೆ.

**ಸಜ್ಜನ ಗಾಣಿಗರು ಮತ್ತು ಜ್ಯೋತಿ ಗಾಣಿಗರಲ್ಲಿ ಇರುವ ಸಂಬಂಧಗಳು**

ಸಜ್ಜನ ಗಾಣಿಗರಲ್ಲಿರುವಂತೆ ಜ್ಯೋತಿಗಾಣಿಗರಲ್ಲೂ ವಿವಾಹ ಮತ್ತು ಕುಟುಂಬ ಸಂಘ ಸಂಸ್ಥೆಗಳಿವೆ. ಸಮುದಾಯದ ೨ ಪಂಗಡಗಳಲ್ಲಿ ಸಂಸ್ಥೆಗಳು ಸಾರ್ವತ್ರಿಕವಾಗಿವೆ. ಸಜ್ಜನ ಗಾಣಿಗರಲ್ಲಿ ಅವಿಭಕ್ತ

ಕುಟುಂಬಗಳಿರುವಂತೆ ಜ್ಯೋತಿ ಗಾಣಿಗರಲ್ಲಿಯೂ ಅದೇ ಕುಟುಂಬಗಳಿವೆ. ವಿವಾಹದ ಸಂಪ್ರದಾಯಗಳಲ್ಲಿಯೂ ಈ ಎರಡು ಪಂಗಡಗಳಲ್ಲಿ ಸ್ವಲ್ಪ ಹೋಲುವಂತಹ ಸಂಪ್ರದಾಯಗಳಿವೆ. ಸಜ್ಜನ ಗಾಣಿಗರಲ್ಲಿರುವಂತೆ ಜ್ಯೋತಿ ಗಾಣಿಗರಲ್ಲಿಯೂ ತಮ್ಮದೇ ಆದ ಆಚರಣೆಗಳಿವೆ ಈ ಎರಡು ಪಂಗಡಗಳಲ್ಲಿ ಸಾಮಾನ್ಯ ಆಚರಣೆಗಳು ಮತ್ತು ವರ್ಷಾಚರಣೆಗಳೆರಡನ್ನು ಗಮನಿಸುತ್ತೇವೆ. ವರ್ಷಾಚರಣೆಗಳಲ್ಲಿ ಹಬ್ಬ ಹರಿದಿನಗಳು, ಜಾತ್ರೆ ಉತ್ಸವಗಳು ಮುಂತಾದವುಗಳನ್ನು ನೋಡುತ್ತೇವೆ. ಈ ಎರಡು ಪಂಗಡಗಳಲ್ಲಿ ಇತ್ತಿತ್ತಲಾಗಿ ಸಂಘಟನೆಯಲ್ಲಿ ಪಾಲ್ಗೊಳ್ಳುವ ಲಕ್ಷಣಗಳು ಗೋಚರಿಸುತ್ತಲಿವೆ. ಹಿಂದಿನಿಂದಲೂ ಈ ಪಂಗಡಗಳಲ್ಲಿ ಸಂಘಟನೆಯ ಮನೋಭಾವನೆಗಳಿರಲಿಲ್ಲ, ಈ ಎರಡು ಪಂಗಡಗಳಲ್ಲಿಯೂ ಸಾಮಾಜಿಕ ಪರಿವರ್ತನೆಗಳು ಸಾಕಷ್ಟು ಆಗಿವೆ. ಅವುಗಳೆಂದರೆ ವ್ಯಕ್ತಿಯಲ್ಲಾದ ಪರಿವರ್ತನೆಗಳು, ವಿವಾಹ ಮತ್ತು ಕೌಟುಂಬಿಕ ಪರಿವರ್ತನೆಗಳು ಸ್ತ್ರೀಯರ ಸ್ಥಾನಮಾನದಲ್ಲಿನ ಬದಲಾವಣೆಗಳು. ವಿಧವಾ ವಿವಾಹದಲ್ಲಾದ ಬದಲಾವಣೆಗಳು, ಈ ಪಂಗಡಗಳ ಸಂಘಟನೆಗಳು, ರಾಜಕೀಯ, ಸ್ಥಾನಮಾನಗಳಲ್ಲಿ ಕೊರತೆ, ಈ ಮೇಲಿನ ಎಲ್ಲಾ ಅಂಶಗಳನ್ನು ಈ ಎರಡು ಪಂಗಡಗಳು ಒಳಗೊಂಡಿವೆ. ಸಜ್ಜನ ಗಾಣಿಗರಲ್ಲಿರುವಂತೆ, ಜ್ಯೋತಿಗಾಣಿಗರಲ್ಲಿಯೂ ಒಗಟುಗಳು, ಗಾದೆಗಳು, ಹಾಡು ಮತ್ತು ಕಥೆಗಳಿವೆ. ಒಟ್ಟಾರೆಯಾಗಿ ಈ ಮೇಲಿನ ಎರಡು ಪಂಗಡಗಳು ಈ ಮೇಲಿನ ಎಲ್ಲಾ ಅಂಶಗಳಲ್ಲಿ ಸಂಬಂಧವನ್ನು ಹೊಂದಿವೆ ಜೊತೆಗೆ ಈ ಎರಡು ಪಂಗಡಗಳಿಗೂ ಮೀಸಲಾತಿ ಎರಡು II[nd] A ಸೌಲಭ್ಯವು ದೊರೆಯುತ್ತದೆ.

**ಸಜ್ಜನ ಗಾಣಿಗರು ಮತ್ತು ಜ್ಯೋತಿಗಾಣಗರಲ್ಲಿ ಇರುವ ವ್ಯತ್ಯಾಸಗಳು**

| ಸಜ್ಜನ ಗಾಣಿಗರು | ಜ್ಯೋತಿ ಗಾಣಿಗರು |
|---|---|
| ೧. ವಿಧವಾ ಮರು ವಿವಾಹಗಳು ಇರುವುದಿಲ್ಲ. | ೧. ವಿಧವಾ ಮರುವಿವಾಹಗಳು ನಡೆಯುತ್ತವೆ. |
| ೨. ಗ್ರಾಮಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಅಂದರೆ ಚಿತ್ರದುರ್ಗ ತಾಲ್ಲೂಕು, ಮಲ್ಲಾಪುರ ಗೋನೂರು. ಸಾಸಹಟ್ಟಿ, ಹಿರಿಯೂರಿನ, ರಾಮಜೋಗಿ ಹಳ್ಳಿ, ಸೊಂಡೇಕೆರೆ, ಮದುರೈ, ಚಳ್ಳಕೆರೆ ನಾಯಕನ ಹಟ್ಟಿ, ಹಿರೇಹಳ್ಳಿ, ದೇವರ ಹಟ್ಟಿ, ಕೋಡಿ ಹಳ್ಳಿ, ಮೊಳಕಾಲ್ಮೂರು, ಬಿ.ಜಿ.ಕೆರೆ, ಮುತ್ತೀಗೆರ ಹಳ್ಳಿ, ಚಿಕ್ಕೋಬನ ಹಳ್ಳಿ, ಕೋನ ಸಾಗರ ಈ ಹಳ್ಳಿಗಳಲ್ಲಿ ಸಜ್ಜನ ಗಾಣಿಗರು ಹೆಚ್ಚಾಗಿ ವಾಸವಾಗಿದ್ದಾರೆ. | ೨. ಜ್ಯೋತಿ ಗಾಣಿಗರು ನಗರ ವಾಸಿಗಳಾಗಿದ್ದೂ, ಹೊಳಲ್ಕೆರೆ ಮತ್ತು ಹೊಸದುರ್ಗಗಳಲ್ಲಿ ವಾಸಿಸುತ್ತಿದ್ದಾರೆ. |
| ೩. ಈ ಪಂಗಡದಲ್ಲಿ ೮೦% ವ್ಯವಸಾಯ ಮತ್ತು ಅದಕ್ಕೆ ಸಂಬಂಧಿಸಿದ ವೃತ್ತಿ ಮಾಡುತ್ತಿದ್ದಾರೆ. ಇನ್ನು ಉಳಿದ ೨೦% ವ್ಯವಸಾಯೇತರ ವೃತ್ತಿಗಳಲ್ಲಿ ಮತ್ತು ಸರ್ಕಾರಿ ಕೆಲಸಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. | ೩. ಜ್ಯೋತಿ ಗಾಣಿಗಳಲ್ಲಿ ಇನ್ನೂ ಸಾಂಪ್ರದಾಯಿಕ ಗಾಣಗಳಿಲ್ಲದಿದ್ದರೂ ಸ್ವಲ್ಪ ನವೀಕರಣ ಹೊಂದಿದ ಗಾಣಗಳು ಅಸ್ತಿತ್ವದಲ್ಲಿವೆ. ಇವರು ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. |

| | |
|---|---|
| ೪. ಸಜ್ಜನ ಗಾಣಿಗರನ್ನು ೫ ಬಳೆಯವರೆಂದು ಕರೆಯುತ್ತಾರೆ. ಇವರ ಎಲ್ಲಾ ಬಣಗಳಲ್ಲಿ ಶುಭ ಕಾರ್ಯಗಳಲ್ಲಿ ವಿವಾಹಗಳಲ್ಲಿ ಕಡ್ಡಾಯವಾಗಿ ಐದು ಹಸಿರು ಬಳೆಗಳನ್ನು ಹಾಕಿಕೊಳ್ಳುವ ಪದ್ಧತಿ ಇದೆ. | ೪. ಇವರಲ್ಲಿ ೨ ಬಳೆಯವರು ಎನ್ನುತ್ತಾರೆ ಇವರು ಶುಭಾಕಾರ್ಯಗಳಲ್ಲಿ ಎರಡು ಬಳೆಗಳನ್ನು ಹಾಕಿಕೊಳ್ಳುವ ಸಂಪ್ರದಾಯವಿದೆ. |
| ೫. ಇವರ ವಿವಾಹದಲ್ಲಿ ಮಾಂಗಲ್ಯವನ್ನು ಕಟ್ಟುತ್ತಾರೆ. | ೫. ಜ್ಯೋತಿಗಾಣಿಗರಲ್ಲಿ ಮಾಂಗಲ್ಯ ಕಟ್ಟುವಾಗ ಎರಡು ತಾಳಿಗಳನ್ನು ಮಾಂಗಲ್ಯಕ್ಕೆ ಜೋಡಿಸಿ ಕಟ್ಟುತ್ತಾರೆ. |
| ೬. ಸಜ್ಜನ ಗಾಣಿಗರಲ್ಲಿ ೧೦೦ಕ್ಕೆ ೧೦೦ ಭಾಗ ಮೂಲ ವೃತ್ತಿಯಲ್ಲಿ ಬದಲಾಗಿದ್ದಾರೆ. | ೬. ಜ್ಯೋತಿ ಗಾಣಿಗರಲ್ಲಿ ವ್ಯಾಪಾರದ ಜೊತೆ ಸ್ವಲ್ಪ ಬದಲಾದ ಗಾಣಗಳು ಇವರಲ್ಲಿವೆ. ಮೂಲ ಗಾಣಗಳಲ್ಲಿ ಇವರಲ್ಲಿಯೂ ಪರಿವರ್ತನೆಯಾಗಿದೆ. |

ಒಟ್ಟಿನಲ್ಲಿ ಈ ಎರಡು ಪಂಗಡಗಳಲ್ಲಿ ಈ ಮೇಲಿನ ವ್ಯತ್ಯಾಸಗಳನ್ನು ಒಳಗೊಂಡಿದೆ ಎನ್ನಬಹುದಾಗಿದೆ.

### ೩.೧. ಕೌಟುಂಬಿಕ ಪದ್ಧತಿ

ಜಂಟಿ ಕುಟುಂಬ ಅಥವಾ ಅವಿಭಕ್ತ ಕುಟುಂಬ. ಜಾತಿ ವ್ಯವಸ್ಥೆ ಹಾಗೂ ಗ್ರಾಮೀಣ ಜೀವನ ವ್ಯವಸ್ಥೆ, ಈ ಮೂರು ಭಾರತೀಯ ಸಮಾಜದ ಆಧಾರ ಸ್ತಂಭಗಳೆಂದು ಕೆ. ಎಂ. ಪಣಿಕ್ಕಾರ್, ಅಭಿಪ್ರಾಯ ಪಟ್ಟಿದ್ದಾರೆ. ನಮ್ಮ ಸಂಸ್ಕೃತಿಯ ಬೇರುಗಳು ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಬಹು ಆಳಕ್ಕೆ ಇಳಿದಿವೆ. ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು, ಕೊಡುವುದು ಕುಟುಂಬವೇ ಉಳಿದೆಲ್ಲಾ ಸಂಸ್ಥೆಗಿಂತಲೂ, ಇದು ಹೆಚ್ಚು ಶಾಶ್ವತವೂ ಪ್ರಭಾವಿಯೂ ಅಗಿರುತ್ತಾರೆ. ಮಾನವನ ವ್ಯಕ್ತಿತ್ವ ಬೆಳೆಸುವ ಮೊದಲ ಸಂಸ್ಥೆ ಎಂದರೆ ಕುಟುಂಬವೆನ್ನಬಹುದು. ಸಮಾಜದಲ್ಲಿ ಕುಟುಂಬವು ಒಂದು ಚಿಕ್ಕದಾದ ಸಾಮಾಜಿಕ ಘಟಕವಾಗಿದ್ದು, ತಂದೆ-ತಾಯಿ ಮತ್ತು ಮಕ್ಕಳಿಂದ ಕೇಂದ್ರೀಕೃತವಾಗಿರುತ್ತದೆ. ಮಗುವಿನ ಜನನಕ್ಕೆ ಇದು ಪ್ರಥಮ ಸಾಮಾಜಿಕ ಪರಿಸರವಾಗುತ್ತದೆ. ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬವನ್ನು ಕುರಿತು ವಿವಿಧ ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ. ಇಲಿಯಟ್ ಮತ್ತು ಮೆರಿಲ್ 'ಕುಟುಂಬವು ಜೈವಿಕ ಘಟಕವಾಗಿದ್ದು, ಗಂಡ ಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ' ಎಂದಿದ್ದಾರೆ. ಸಮ್ನರ್ ಮತ್ತು ಕೆಲ್ಲರ್ ಪ್ರಕಾರ 'ರಕ್ತ ಸಂಬಂಧಗಳಿಂದ ಕೂಡಿದ ಕನಿಷ್ಠ ಎರಡು ತಲೆ ಮಾರುಗಳನ್ನು ಒಳಗೊಂಡಿರುವ ಅತಿ ಸೂಕ್ಷ್ಮ ಸಾಮಾಜಿಕ ಸಂಘಟನೆಯೇ, ಕುಟುಂಬ' ಎಂದಿದ್ದಾರೆ. ಬರ್ಗೆಸ್ ಮತ್ತು ಲಾಕರ್ 'ಕುಟುಂಬದಲ್ಲಿ ಒಂದು ಸಮೂಹದ ಜನರ ವಿವಾಹ ರಕ್ತ ಸಂಬಂಧ, ದತ್ತು ಸ್ವೀಕಾರದಿಂದ ಒಂದೆಡೆ ವಾಸವಾಗಿದ್ದು, ಆಂತರಿಕ ಕ್ರಿಯೆ ಮತ್ತು ಸಂಪರ್ಕ ವಿಧಾನಗಳಲ್ಲಿ ಗಂಡ-ಹೆಂಡತಿ, ತಂದೆ-ತಾಯಿ, ಮಗ-ಮಗಳು, ಸೋದರ ಸೋದರಿ ಸಂಬಂಧದಿಂದ ಏಕರೂಪದ ಸಂಸ್ಕೃತಿಯನ್ನು ಪಡೆದಿದ್ದಾರೆ ಎಂದು ಹೇಳಿದ್ದಾರೆ. ಎಂ. ಎಫ್. ನಿಮ್‌ಕಾಫ್‌ರವರು 'ಮಕ್ಕಳಿರುವ ಅಥವಾ ಇಲ್ಲದ ಗಂಡ-ಹೆಂಡತಿಯವರು ಶಾಶ್ವತ ಸಂಘವೆಂದೂ ಅಥವಾ ಪುರುಷ ಅಥವಾ ಸ್ತ್ರೀಯು ಮಾತ್ರ ಮಕ್ಕಳೊಂದಿಗೆ ಇರುವ ಘಟಕವೆಂದು' ಹೇಳಿದ್ದಾರೆ. ಇದರಿಂದ ಕುಟುಂಬವು ಸಮಾಜದ ಮೂಲಭೂತ ಘಟಕವಾಗಿರುತ್ತದೆ. ಅದು

ಜೈವಿಕ ಘಟಕವಾಗಿದ್ದು ಸಾಂಸಾರಿಕ ರೂಪದಲ್ಲಿ ಗಂಡ-ಹೆಂಡತಿಯರಲ್ಲಿ ಲೈಂಗಿಕ ಬಾಂಧವ್ಯ ರೂಪಿಸುವ ಗುಣಲಕ್ಷಣಗಳನ್ನು ಹೊಂದಿ ಸಮಾಜದ ಎಲ್ಲಾ ಪ್ರಕಾರಗಳಲ್ಲಿಯೂ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಾರೆ.

ಸಜ್ಜನ ಗಾಣಿಗ ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ. ಪಿತೃ ಪ್ರಧಾನ ಅವಿಭಕ್ತ ಕುಟುಂಬಗಳು ಕಂಡು ಬರುತ್ತವೆ. ಕುಟುಂಬದ ಪ್ರತಿಯೊಂದು ಆಗು ಹೋಗುಗಳನ್ನು ಹೆಚ್ಚಾಗಿ ಪುರುಷರೇ ನೋಡಿ ಕೊಳ್ಳುತ್ತಾರೆ. ಆದಿಮ ಸಮಾಜದಲ್ಲಿ ಮನುಷ್ಯ ಗುಂಪು ಜೀವನ ನಡೆಸುತ್ತಿದ್ದ ಎಂಬುದನ್ನು ನಾವು ತಿಳಿದಿದ್ದೇವೆ. ಈ ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚು. ಇಂದಿನ ಜಾಗತೀಕರಣದ ಯುಗದಲ್ಲಿಯೂ ಸಹ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಕಾಣಸಿಗುವುದು ಅಲ್ಲಲ್ಲಿ ವಿಭಕ್ತ ಕುಟುಂಬಗಳು ಇದ್ದರೂ ಅವು ಅಲ್ಪ ಪ್ರಮಾಣದಲ್ಲಿವೆ. ಇಂದಿನ ದಿನಗಳಲ್ಲಿ ಅವಿಭಕ್ತ ಕುಟುಂಬವೆಂದರೆ ೧೦ ರಿಂದ ೧೫ ರ ವರೆಗೆ ಜನಸಂಖ್ಯೆಯಿರುತ್ತದೆ. ಇಂದು ಅವಿಭಕ್ತ ಕುಟುಂಬಗಳ ಜನಸಂಖ್ಯೆಯಲ್ಲಿಯೂ ಇಳಿಮುಖವಾಗಿದೆ. ಅವಿಭಕ್ತ ಕುಟುಂಬಗಳ ಬಗ್ಗೆ ಗಮನಿಸಿದಾಗ ಇವರ ವೃತ್ತಿಯೇ ಇದರ ಮೂಲ ಕಾರಣವಾಗಿರುವುದಾಗಿ ತೋರುತ್ತದೆ. ಈ ಸಮುದಾಯದಲ್ಲಿ ಪಿತೃಪ್ರಧಾನವಾದ ಕುಟುಂಬ ವ್ಯವಸ್ಥೆ ಇರುವುದಾಗಿದೆ, ಆದರೂ ಇವರಲ್ಲಿ ಮಾತೃ ಪ್ರಧಾನಕ್ಕೆ ಹೆಚ್ಚಿನ ಗೌರವವನ್ನು ನೀಡಲಾಗುತ್ತದೆ. ಹಿರಿಯ ಮಗ ಮತ್ತು ಹಿರಿಯ ಸೊಸೆಗೆ ಕುಟುಂಬದಲ್ಲಿ ಬಹಳ ಗೌರವವಿದೆ. ಕುಟುಂಬದ ಕರ್ತನಾಗಲು ಹಿರಿಯ ಮಗನು ಒಪ್ಪದಿದ್ದ ಪಕ್ಷದಲ್ಲಿ ಎರಡನೆಯ ಮಗನಿಗೆ ಆ ಅಧಿಕಾರವನ್ನು ವಹಿಸಿಕೊಡಲಾಗುತ್ತದೆ. ಯಾವುದೇ ಶುಭ ಕಾರ್ಯಗಳಲ್ಲಿ, ಹಿರಿಯ ಮಗ ಮತ್ತು ಹಿರಿಯ ಸೊಸೆಗೆ ಮೊದಲ ಆದ್ಯತೆ ಕೊಡುತ್ತಾರೆ. ತಂದೆಯ ನಂತರ ಆಸ್ತಿಯು ಮಗನಿಗೆ ಸೇರುತ್ತದೆ ಗಂಡು ಮಕ್ಕಳಿಲ್ಲದಿದ್ದ ಸಂದರ್ಭದಲ್ಲಿ ಹೆಣ್ಣು ಮಕ್ಕಳಿಗೆ ಆಸ್ತಿಯನ್ನು ನೀಡಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬ ಪದ್ಧತಿಯಿಂದ ವಿಭಕ್ತ ಕುಟುಂಬಗಳಿಗೆ ಹಂಚಿ ಹೋಗುತ್ತಿರುವ ಕುಟುಂಬಗಳು ಸಹ ಕಾಣಸಿಗುತ್ತದೆ. ಆದರೂ ಬಹಳಷ್ಟು ಕಡಿಮೆ ಪ್ರಮಾಣದಲ್ಲಿದೆ ಎಂದು ಹೇಳಬಹುದಾಗಿದೆ. ಒಟ್ಟಿನಲ್ಲಿ ಈ ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಿದ್ದು, ವಿಭಕ್ತ ಕುಟುಂಬಗಳ ಸಂಖ್ಯೆ ಕಡಿಮೆ ಪ್ರಮಾಣದಲ್ಲಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ.

ಸಜ್ಜನ ಗಾಣಿಗ ಸಮುದಾಯಕ್ಕೂ ಮತ್ತು ಅವಿಭಕ್ತ ಕುಟುಂಬಗಳಿಗೂ ಸಾಕಷ್ಟು ಸಂಬಂಧವಿದೆ ಈ ಜನಾಂಗದವರು ಹೆಚ್ಚಾಗಿ ಅವಿಭಕ್ತ ಕುಟುಂಬದಲ್ಲಿಯೇ ವಾಸಿಸುತ್ತಾರೆ. ಇವರು ವಿಭಕ್ತ ಕುಟುಂಬಗಳಲ್ಲಿ ವಾಸಿಸಿದರೂ ಅದು ಬಹಳ ಕಡಿಮೆ ಪ್ರಮಾಣ.

ಡಾ.ಇರಾವತಿ ಕರ್ವೆರವರ ಪ್ರಕಾರ ಭಾರತೀಯ ಸಾಮಾಜಿಕ ವಿಕಾಸನದಲ್ಲಿ ಕುಟುಂಬವೆಂದರೆ ಜಂಟಿ ಕುಟುಂಬವೇ ಆಗಿದೆ, ವಿಭಕ್ತ ಕುಟುಂಬಕ್ಕೆ ವಿರುದ್ಧವಾಗಿ ಇಲ್ಲಿ ತಂದೆ, ತಾಯಿ, ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳು, ಹೀಗೆ ಮೂರು ಮತ್ತು ನಾಲ್ಕು ತಲೆಮಾರಿನ ಜನಸಂಖ್ಯೆಯ ಆಸ್ತಿಯು ಒಂದೇ ಕುಟುಂಬಕ್ಕೆ ಸೇರುವುದಕ್ಕೆ ಅವಿಭಕ್ತ ಕುಟುಂಬವೆನ್ನುವರು. ಚಿತ್ರದುರ್ಗದಲ್ಲಿರುವ ಸಜ್ಜನ ಗಾಣಿಗರಲ್ಲಿಯೂ ಕುಟುಂಬದಲ್ಲಿ ಈ ಲಕ್ಷಣಗಳು ಕಂಡುಬರುತ್ತದೆ.

ಬಿ.ಮೆಮೋರಿಯಾ, 'ಅವಿಭಕ್ತ ಕುಟುಂಬವು ಒಂದಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಪ್ರಾಥಮಿಕ ಕುಟುಂಬಗಳ ಸಂಕಲನವಾಗಿದ್ದು, ಅದು ತೀರಾ ಸಮೀಪದ ರಕ್ತ ಸಂಬಂಧಿಗಳ ಸಮಾನ ವಾಸ ಸ್ಥಳ, ಹಾಗೂ ಪಿತೃವಂಶೀಯತೆಯ ನೆಲೆಯನ್ನು ಹೊಂದಿರುತ್ತದೆ.

ಐ.ಪಿ.ದೇಸಾಯಿ. ''ಯಾವ ಕುಟುಂಬವು ಮೂಲ ಕುಟುಂಬಕ್ಕಿಂತಲೂ ಹೆಚ್ಚಿನ ತಲೆಮಾರುಗಳ ಗಾಢತೆಯನ್ನು ಹೊಂದಿರುವುದೋ ಮತ್ತು ಯಾವ ಕುಟುಂಬದ ಸದಸ್ಯರ ಆಸ್ತಿ, ಆದಾಯ ಮತ್ತು ಪರಸ್ಪರ ಹಕ್ಕುಗಳು ಮತ್ತು ಬಾಂಧವ್ಯಗಳ ಮೂಲಕ ಒಬ್ಬರಿಗೊಬ್ಬರು ಸಂಬಂಧಿಕರಾಗುವರೋ ಅಂತಹ ಕುಟುಂಬವನ್ನು ನಾವು ಅವಿಭಕ್ತ ಕುಟುಂಬವೆನ್ನುತ್ತೇವೆ.

ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ 'ಕನಿಷ್ಠ ಮೂರು ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ತಲೆಮಾರುಗಳಿಗೆ ಸೇರಿದ ರಕ್ತ ಸಂಬಂಧಿಗಳು ಒಬ್ಬ ವ್ಯಕ್ತಿಯ ಪುರುಷ ಅಥವಾ ಸ್ತ್ರೀ ನೇತೃತ್ವದಲ್ಲಿ ದುಡಿಯುತ್ತಾ ಒಂದೇ ನಿವಾಸದಲ್ಲಿ ಒಂದೇ ಕುಟುಂಬದವರಂತೆ ಒಟ್ಟಿಗೆ ನೆಲೆಸಿರುವುದನ್ನು ಅವಿಭಕ್ತ ಕುಟುಂಬವೆನ್ನುವರು.

ಅವಿಭಕ್ತ ಕುಟುಂಭದ ಲಕ್ಷಣಗಳು ಈ ಕೆಳಗಿನಂತಿವೆ (೧) ಪೀಳಿಗೆಯ ಸಮಾವೇಶ (೨) ಸಾಮಾನ್ಯ ನೆಲೆ ಅಥವಾ ವಾಸಸ್ಥಳ (೩) ಸಾಮಾನ್ಯ ಒಲೆ ಅಥವಾ ಅಡಿಗೆ ಮನೆ (೪) ಸಾಮಾನ್ಯ ಪೂಜಾ ಪದ್ಧತಿ (೫) ಸಾಮಾನ್ಯ ಆಸ್ತಿ (೬) ಅಧಿಕಾರದ ಚಲಾವಣೆ ಅಥವಾ ''ಕರ್ತ'' ನ ಅಧಿಕಾರ (೭) ಪೂರ್ವ ವ್ಯವಸ್ಥಿತ ವಿವಾಹಗಳು. (೮) ಅತಿ ಸಂತಾನ (೯) ಸ್ವಯಂ ಪರಿಪೂರ್ಣತೆ (೧೦) ಪರಸ್ಪರ ಹಕ್ಕುಗಳು ಅಥವಾ ಹೊಣೆಗಾರಿಕೆ ಈ ಮೇಲಿನ ಎಲ್ಲಾ ಲಕ್ಷಣಗಳು ಅವಿಭಕ್ತ ಕುಟುಂಬದವಾಗಿದ್ದೂ ಸಜ್ಜನ ಗಣಿಗರಲ್ಲಿಯೂ ಈ ಕುಟುಂಬಗಳ ಪ್ರಮಾಣ ಹೆಚ್ಚಿದೆ.

**ಒಳ ಪಂಗಡ ವ್ಯವಸ್ಥೆ**

ಸಜ್ಜನ ಗಾಣಿಗರಲ್ಲಿ ಮುಖ್ಯವಾಗಿ ಒಳಪಂಗಡ ವ್ಯವಸ್ಥೆಯಿದ್ದು ಒಂದೇ ಬೆಡಗಿನಲ್ಲಿ ವೈವಾಹಿಕ ಕ್ರಮಗಳು ಜರುಗುವುದಿಲ್ಲ ವಿವಾಹ ನಡೆಯಲು ಅಲ್ಲಿ ಬೇರೆ ಬೇರೆ ಬೆಡಗುಗಳು ಬೇಕಾಗುತ್ತವೆ. ರಕ್ತ ಸಂಬಂಧಿಗಳು ಅಣ್ಣ ತಮ್ಮಂದಿರಾಗುತ್ತಾರೆ ಎಂಬ ನಂಬಿಕೆ ಇವರಲ್ಲಿದೆ. ಆದ್ದರಿಂದ ತಮ್ಮ ಬೆಡಗನ್ನು ಬಿಟ್ಟು, ನೆಂಟರಾಗುವ ಬೆಡಗಿನೊಂದಿಗೆ ವೈವಾಹಿಕ ಸಂಬಂಧ ಬೆಳೆಸಿಕೊಳ್ಳುತ್ತಾರೆ. ಸಜ್ಜನ ಗಾಣಿಗರಲ್ಲಿ ಏಕಪತ್ನಿತ್ವ ಮತ್ತು ಏಕ ಪತಿತ್ವಕ್ಕೆ ಮಹತ್ವ ಕೊಡುತ್ತಾರೆ. ಆದರೆ ಒಬ್ಬನಿಗೆ ಒಂದೇ ಹೆಂಡತಿ ಒಬ್ಬ ಹೆಂಡತಿಗೆ ಒಬ್ಬನೇ ಗಂಡ ಭಾವನೆಯು ಇವರಲ್ಲಿದೆ. ಇಂದಿನ ಯುಗದಲ್ಲಿ ಜನಸಂಖ್ಯೆ ಎಂಬುದು ಹೇಗೆ ಒಂದು ಅಧಿಕಾರ ಸ್ಥಾನ ಮಾನ ಮುಂತಾದವುಗಳನ್ನು ಪಡೆಯಲು ಅವಶ್ಯಕ ಎಂಬುದನ್ನು ಈ ಸಮುದಾಯವರು ಅರಿತಿದ್ದಾರೆ, ಇದರಿಂದ ಸಮುದಾಯದ ಹಿತಾಸಕ್ತಿಗಳಿಗೆ ಹಾಗೂ ಸಾಮಾಜದಲ್ಲಿ ಸಿಗುವ ಸ್ಥಾನಮಾನಗಳನ್ನು ಕಾಪಾಡಿಕೊಳ್ಳಲು ಒಂದಾಗಿದ್ದಾರೆ.

**ರಕ್ತ ಸಂಬಂಧ**

ತಂದೆಯ ಮೂಲಕವೇ ರಕ್ತ ಸಂಬಂಧವನ್ನು ಗುರುತಿಸಿಕೊಳ್ಳುತ್ತಾರೆ. ತಂದೆಯ ನಂತರ ಗಂಡು ಸಂತತಿಯ ಮೂಲಕ ಕುಟುಂಬ, ವಂಶ, ಕುಲ, ಗೋತ್ರ, ಮನೆ ದೇವರು, ವಂಶಾವಳಿ, ಏಕರಕ್ತ ಸಂಬಂಧ, ವಿವಾಹ ಮೊದಲಾದ ಸಾಮಾಜಿಕ ಅಂಶಗಳು ರಕ್ತ ಸಂಬಂಧದ ಅಧಿಕಾರ ಮೇಲೆಯೇ ರಚಿತವಾಗಿರುತ್ತಾರೆ. ತಂದೆ-ತಾಯಿ, ಅಣ್ಣ-ತಮ್ಮ, ಚಿಕ್ಕಪ್ಪ-ದೊಡ್ಡಪ್ಪ, ಅತ್ತೆ-ಮಾವ ಮುಂತಾದವರ ಸುತ್ತ ಕುಟುಂಬ ಮತ್ತು ರಕ್ತ ಸಂಬಂಧ ಕೇಂದ್ರೀಕೃತವಾಗಿರುತ್ತದೆ. ನಾವೆಲ್ಲರೂ ಒಂದೇ ರಕ್ತ ಸಂಬಂಧಿಗಳು, ಒಡನಾಡಿಗಳು, ಕುಟುಂಬದವರು, ವಂಶದವರು, ನೆಂಟರು, ಅಣ್ಣ ತಮ್ಮಂದಿರು ಎಂಬ ಅಭಿಮಾನ ಸಮುದಾಯದಲ್ಲಿ ಪ್ರಧಾನವಾಗಿರುತ್ತದೆ.

ಒಂದು ಸಮುದಾಯದ ಸದಸ್ಯರೆಲ್ಲರೂ ರಕ್ತ ಸಂಬಂಧಿಗಳೇ ಆಗಿರುವುದರಿಂದ ಅವರಲ್ಲಿ ಪ್ರೀತಿ ವಿಶ್ವಾಸಗಳಿಂದ  ಕೂಡಿದ ಸಹಕಾರಮತ್ತು ಸಂಬಂಧಿಗಳು ಬೆಳೆದಿರುತ್ತವೆ. ಪ್ರಸ್ತುತ ಅವಿಭಕ್ತ ಕುಟುಂಬಗಳಲ್ಲಿ ಒಗ್ಗಟ್ಟು, ಐಕ್ಯತೆ, ಮಾಡಲು ರಕ್ತ ಸಂಬಂಧವೇ ಮುಖ್ಯ ಕಾರಣವಾಗಿದೆ. ವೈವಾಹಿಕ ಸಂಬಂಧ ಬೆಳೆಸುವಾಗ ಒಳಬಾಂಧವ್ಯ ವಿವಾಹಕ್ಕೆ ಮಹತ್ವ ಕೊಡುತ್ತಾರೆ. ಅಂತರ್ ಜಾತಿ ವಿವಾಹಕ್ಕೆ ಇವರಲ್ಲಿ ಅವಕಾಶವಿಲ್ಲ. ಏಕ ಪತಿತ್ವ ಮತ್ತು ಏಕ ಪತ್ನಿ ವಿವಾಹಗಳ ಆಚರಣೆಗೆ ಮಹತ್ವ ಕೊಡುತ್ತಾರೆ. ಒಳ ಪಂಗಡಗಳೆಂದು ಕುಲ ಗೋತ್ರಗಳು ಬೇರೆಯಾದರೂ, ಮೂಲತಃ ಒಂದೇ ಕುಟುಂಬದ ರಕ್ತ ಕುಟುಂಬದ ರಕ್ತ ಸಂಬಂಧಿಗಳಂತೆ ಬಾಳಿ ಬದುಕುವ ಸಂಸ್ಕೃತಿ ಸಜ್ಜನ ಗಾಣಿಗ ಸಮುದಾಯದವರಲ್ಲಿ ನಾವು ಕಾಣಬಹುದು.

**ಹಿಂದೂ ಸಜ್ಜನ ಗಾಣಿಗ ಅವಿಭಕ್ತ ಕುಟುಂಬದ ಸಂರಚನೆ ಮತ್ತು ಕಾರ್ಯಗಳಲ್ಲಿನ ಪರಿವರ್ತನೆಗಳು**

ನಮ್ಮ ಸಾಮಾಜಿಕ ಜಗತ್ತಿನಲ್ಲಿ ಪರಿವರ್ತನೆಯಾಗದಿರುವುದು ಯಾವುದೂ ಇಲ್ಲ, ಅಂತೆಯೇ ಭಾರತದ ಅವಿಭಕ್ತ ಕುಟುಂಬಗಳಲ್ಲಿ ಪರಿವರ್ತನೆಗೊಂಡಿರುವುದು ಪರಿವರ್ತನೆಗೊಳ್ಳುತ್ತಿರುವುದು ನಿಜ. ಈ ಬಗ್ಗೆ ಭಿನ್ನಾಭಿಪ್ರಾಯಗಳಲ್ಲಿ ಆದರೆ ಪರಿವರ್ತನೆಯ ಸ್ವರೂಪದ ಬಗ್ಗೆ ಮಾತ್ರ ಸಾಕಷ್ಟು ಜಿಜ್ಞಾಸೆಯಿದೆ. ಈಗ ಅವಿಭಕ್ತ ಕುಟುಂಬದಲ್ಲಿ ಕಾಣಬರುತ್ತಿರುವ ಪರಿವರ್ತನೆಗಳು ಯಾವುವು? ಅವು ತಾತ್ಕಾಲಿಕ ಸ್ವರೂಪದವುಗಳೇ? ಅವುಗಳಲ್ಲಿ ಯಾವುವು ಸಾಧಾರಣ? ಯಾವುದು ಮೌಲ್ಯಿಕ? ಅವುಗಳ ಕಾರಣಗಳೇನು? ಪರಿಣಾಮಗಳೇನು? ಇಂತಹ ಹಲವಾರು ಪ್ರಶ್ನೆಗಳು ಈ ಜಿಜ್ಞಾಸೆಯನ್ನು ಮತ್ತಷ್ಟು ಗಾಢವಾಗಿಸುತ್ತದೆ, ಸಮಾಜಶಾಸ್ತ್ರೀಯ ದೃಷ್ಟಿಯಿಂದ ಸಂಸ್ಥೆಯೆಂದರೇ ಸಂರಚನೆಯಲ್ಲಿ ಮತ್ತು ಕಾರ್ಯಗಳಲ್ಲಿ ಸಂಬಂಧಿಸುವ ಪರಿವರ್ತನೆಗಳಿಗೆ ವಿಶೇಷ ಮಹತ್ವವಿದೆ, ಈ ಹಿನ್ನೆಲೆಯಲ್ಲಿ ಭಾರತದ ಹಿಂದೂ ಸಜ್ಜನ ಗಾಣಿಗ ಅವಿಭಕ್ತ ಕುಟುಂಬದ ರಚನೆ ಹಾಗೂ ಕಾರ್ಯಗಳಲ್ಲಿ ಆಗುತ್ತಿರುವ ಪರಿವರ್ತನೆಗಳನ್ನು ವಿಶ್ಲೇಷಿಸುವುದು ಇಲ್ಲಿ ತೀರಾ ಅಗತ್ಯ,

**ಹಿಂದೂ ಸಜ್ಜನ ಗಾಣಿಗರಲ್ಲಿ ಅವಿಭಕ್ತ ಕುಟುಂಬದ ಸಂರಚನೆಯಲ್ಲಿನ ಪರಿವರ್ತನೆಗಳು**

ಹಿಂದೂ ಸಜ್ಜನಗಾಣಿಗರಲ್ಲಿ ಕುಟುಂಬದ ಸಂರಚನೆಯಲ್ಲಿ ಇತ್ತೀಚೆಗೆ ಬಹಳಷ್ಟು ಪರಿವರ್ತನೆಗಳಾಗಿವೆ, ಕುಟುಂಬದ ಗಾತ್ರ, ತಲೆಮಾರುಗಳ ಸಂಖ್ಯೆ, ಆಸ್ತಿಯ ಒಡೆತನ ಹಾಗೂ ನಿರ್ವಹಣೆ, ಅಧಿಕಾರ ಚಲಾವಣೆ, ಸ್ತ್ರೀ- ಪುರುಷ ಸಂಬಂಧಗಳು, ವಿವಾಹದ ಸ್ವರೂಪ ಹಾಗೂ ದಾಂಪತ್ಯ ಸಂಬಂಧ ಮತ್ತು ಕೌಟುಂಬಿಕ ಭಾವನೆ

ಇವೇ ಮುಂತಾದ ಸಂರಚನೀಯ ಅಂಶಗಳಿಗೆ ಸಂಬಂಧಿಸಿದ ಬದಲಾವಣೆಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸಬಹುದಾಗಿದೆ.

**೧. ಕುಟುಂಬದ ಗಾತ್ರ ಹಾಗೂ ತಲೆಮಾರುಗಳ ಗಾಢತೆ**

ಅವಿಭಕ್ತ ಕುಟುಂಬದ ಗಾತ್ರ ಕುಗ್ಗುತ್ತಾ ಬಂದಿದೆ. ಹತ್ತಿಪ್ಪತ್ತು ಸದಸ್ಯರುಗಳಿಂದ ನೂರಕ್ಕೂ ಮಿಕ್ಕಿ ಸದಸ್ಯರಿರುತ್ತಿದ್ದ ದೊಡ್ಡ ಗಾತ್ರದ ಕುಟುಂಬಗಳು ಇಂದು ತೀರ ವಿರಳ. ಚಿಕ್ಕ ಕುಟುಂಬಗಳ ಬಗೆಗಿನ ಆಕರ್ಷಣೆ ಹೆಚ್ಚುತ್ತಿದೆ ಪಾಶ್ಚಾತ್ಯರಲ್ಲಿ ಕಾಣುವಂತೆ ಇಬ್ಬರು-ಮೂವರನ್ನು ಮಾತ್ರ ಒಳಗೊಂಡಿರುವ ಅತಿ ಚಿಕ್ಕ ಗಾತ್ರದ ''ದಾಂಪತ್ಯ ಕುಟುಂಬ''ಗಳಂತೆ (U.S.A - ಯಲ್ಲಿ ೪೦% ಕುಟುಂಬಗಳು ಅತೀ ಚಿಕ್ಕ ಕುಟುಂಬಗಳಾಗಿ, ಒಬ್ಬ ವ್ಯಕ್ತಿ ಒಬ್ಬ ಮಹಿಳೆ ವಾಸಿಸುವ ಕುಟುಂಬಗಳ ಸಂಖ್ಯೆ ಹೆಚ್ಚ ತೊಡಗಿದೆ) ಅಲ್ಲವಾದರೂ ಆರು-ಎಂಟು ಸದಸ್ಯರುಗಳನ್ನು ಒಳಗೊಂಡಿದ್ದು, ಮಧ್ಯಮ ಗಾತ್ರಕ್ಕೆ ಅದು ಇಳಿದಿದೆ.

ಕುಟುಂಬವೊಂದರ ವ್ಯಾಪ್ತಿಯಲ್ಲಿ ವಾಸಿಸುವವರ ತಲೆಮಾರುಗಳ ಸಂಖ್ಯೆ ಕೂಡ ಕಡಿಮೆಯಾಗಿದೆ, ಅಂದರೆ ಈ ಹಿಂದೆ ಅವಿಭಕ್ತ ಕುಟುಂಬಗಳಲ್ಲಿ ನಾಲ್ಕು ಅಥವಾ ಅದಕ್ಕೂ ಹೆಚ್ಚು ತಲೆಮಾರುಗಳಿಗೆ ಸೇರಿದ ವ್ಯಕ್ತಿಗಳನ್ನು ಕಾಣಬಹುದಾಗಿದ್ದರೆ ಈಗ ಅಂತಹ ತಲೆಮಾರುಗಳ ಸಂಖ್ಯೆ ಕೇವಲ ಎರಡು-ಮೂರಕ್ಕೆ ಇಳಿದಿದೆ. ಈ ಸಂಖ್ಯೆ ಎರಡಕ್ಕೆ ಇಳಿದ ಕುಟುಂಬವು ವಿಭಕ್ತ ಸ್ವರೂಪದ್ದಾಗುವುದೂ ಇದೆ. ಮಾತ್ರವಲ್ಲ, ದೂರದ ಬಳಗದವರಿಗೆ ಸಿಗುವ ಪ್ರಾಶಸ್ತ್ಯ ಈಗ ಕಡಿಮೆಯಾಗಿದೆ, ಹೆಣ್ಣಿಗೆ ಅಥವಾ ಗಂಡಿನ ಕಡೆಯವರಲ್ಲಿ ಬಹಳ ಹತ್ತಿರದ ಸಂಬಂಧಿಕರಿಗೆ ಮಾತ್ರ ಆಶ್ರಯ ನೀಡಲಾಗುತ್ತಿದೆ.

**೨. ಆಸ್ತಿಯ ಒಡೆತನ ಹಾಗೂ ನಿರ್ವಹಣೆ**

ಪರಂಪರಾಗತ ಹಿಂದು ಸಜ್ಜನ ಗಾಣಿಗರಲ್ಲಿ ಅವಿಭಕ್ತ ಕುಟುಂಬದಲ್ಲಿ ಆಸ್ತಿಯ ವಿಲೇವಾರಿಯಲ್ಲಿ ಹುಟ್ಟಿನಿಂದ ಆಸ್ತಿಯು ಪ್ರಾಪ್ತವಾಗುತ್ತದೆ. ತಂದೆಯ ಮರಣದ ನಂತರ ಅದನ್ನು ಗಂಡು ಮಕ್ಕಳಿಗೆ, ಅವರಿಲ್ಲದಿದ್ದಲ್ಲಿ ಉಳಿದ ಪುರುಷ ವಾರಸುದಾರರಿಗೆ ಆ ಅಧಿಕಾರ ಲಭ್ಯ. ಹೆಣ್ಣು ಮಕ್ಕಳು ಹಾಗೂ ಇತರ ಸ್ತ್ರೀಯರು ಆಸ್ತಿಯಲ್ಲಿ ಪಾಲನ್ನು, ಉತ್ತರಾಧಿಕಾರವನ್ನು ಪಡೆಯಲಾರರು. ಸ್ತ್ರೀ-ಧನದ ಮೇಲೆ ಮಾತ್ರ ಅವರಿಗೆ ಅಧಿಕಾರ, ಎಲ್ಲಾ ಸದಸ್ಯರ ಆಸ್ತಿ-ಸಂಪಾದನೆಗಳು ಕುಟುಂಬದ ಆಸ್ತಿಗೆ ಸೇರ್ಪಡೆಯಾಗುತ್ತಿತ್ತು. ''ಭಾರತದ ಜನಗಣತಿಯೊಂದರಲ್ಲಿ ಬಂಗಾಳದ ೧ ಕುಲೀನ ಬ್ರಾಹ್ಮಣ ಕುಟುಂಬದಲ್ಲಿ ಸುಮಾರು ೨೦೦ ಸದಸ್ಯರಿದ್ದುದು ದಾಖಲೆಯಾಗಿದೆ'' (ಹೆಚ್.ವಿ. ನಾಗೇಶ್ ಪು-೫) ಧಾರವಾಡ ಜಿಲ್ಲೆಯ ಲೋಕೂರ್‌ನಲ್ಲಿ ೨೦೦ ಜನ ಸದಸ್ಯರನ್ನು ಒಳಗೊಂಡ ಒಂದು ಅವಿಭಕ್ತ ಕುಟುಂಬವಿದೆ.

ಆಸ್ತಿಯ ವಿಷಯದಲ್ಲಿ ಈಗ ಬಹಳಷ್ಟು ಮಾರ್ಪಾಡುಗಳಾಗಿವೆ. ಕುಟುಂಬದ ಆಸ್ತಿಯಲ್ಲಿ ಈಗ ಗಂಡಿನಂತೆ ಹೆಣ್ಣಿಗೂ ಅಧಿಕಾರವಿದೆ. ''ಹಿಂದೂ ಉತ್ತರಾಧಿಕಾರ ಅಥವಾ ವಾರಸುದಾರಿಕೆಯ ಕಾಯ್ದೆ ೧೯೫೬ರಂತೆ ಹೆಣ್ಣು ಮಗಳಿಗೂ ಈಗ ಆಸ್ತಿಯಲ್ಲಿ ಪಾಲಿದೆ. ಈ ಕಾಯ್ದೆಗೆ ಬಹಳ ಹಿಂದೆಯೇ (೧೯೩೦) ಸ್ವಯಾರ್ಜಿತ ಆಸ್ತಿ''

ಎಂದು  ವ್ಯಕ್ತಿಯ ಸ್ವಂತ ದುಡಿಮೆಯಿಂದ ವಿದ್ಯೆ ಅಥವಾ ಪ್ರತಿಭೆ ಸಾಮರ್ಥ್ಯಗಳ ಮೂಲಕ ಸಂಪಾದಿಸಿದ ಆಸ್ತಿಯನ್ನು ಅನುಬೋಗಿಸುವ ಅಥವಾ ತನಗಿಷ್ಟವಾದಂತೆ ಅದನ್ನು ಬಳಸುವ ಹಕ್ಕನ್ನು ನೀಡಲಾಗಿತ್ತು. ಕುಟುಂಬದ ಸಹಾಯವಿಲ್ಲದೆ ಆಸ್ತಿಯನ್ನು ಹೊಂದುವುದು ಹಾಗೂ ಪ್ರತ್ಯೇಕವಾಗಿ ಅನುಭೋಗಿಸುವುದು ಈಗ ಸಾಧ್ಯವಾಗಿದೆ.

**೩. ಅಧಿಕಾರ ಚಲಾವಣೆ**

ಭಾರತೀಯ ಅವಿಭಕ್ತ ಕುಟುಂಬವು ಸಾಂಪ್ರದಾಯಿಕವಾಗಿ ಪಿತೃಪ್ರಧಾನವಾದುದು. ಕುಟುಂಬದ ಹಿರಿಯ ಪುತ್ರನಿಗೆ ಇಲ್ಲಿ ಗೌರವಾದರಗಳು ಸಲ್ಲುತ್ತವೆ. ತಾಯಿಗೆ ಗಂಡಸಿನ ಅಧಿಕಾರ ದರ್ಪ ಹಾಗೂ ಹೊಣೆಗಾರಿಕೆಗಳಿರುವುದಿಲ್ಲ ಈಗ ಪರಿಸ್ಥಿತಿ ಬದಲಾಗಿದೆ.

ಈಗ ಬದಲಾದ ಪರಿಸ್ಥಿತಿಯಲ್ಲಿಯೂ ಪುರುಷನಿಗೇ ಪ್ರಾಶಸ್ತ್ಯ ವಿದೆ. ಆದಾಗ್ಯೂ ಈಗಿನ ಕುಟುಂಬವನ್ನು ಪಿತೃ ಪ್ರಧಾನವಾದುದೆನ್ನುವಂತಿಲ್ಲ, ''ಅದು ಉಭಯ ಪ್ರಧಾನ ಅಥವಾ ವಿಭಯ ಪಕ್ಷೀಯ ಕುಟುಂಬಗಳೆಂದರೇನೆ ಸರಿಹೋದಿತು'' (ಹೆಚ್.ವಿ. ನಾಗೇಶ್, ಪುಟ - ೪೫). ಅಂದರೆ ಈಗ ಕೌಟುಂಬಿಕ ವಿಚಾರಗಳಲ್ಲಿ ಸ್ತ್ರೀಯರಿಗೆ, ಸ್ತ್ರೀಯರ ಅಭಿಪ್ರಾಯಗಳಿಗೆ ಬಹಳಷ್ಟು ಮಹತ್ವ ಬಂದಿದೆ. ಸ್ತ್ರೀಯರು ಕುಟುಂಬದ ಹೊರಗಡೆ ದುಡಿಮೆಯಲ್ಲಿ ಅಥವಾ ಉದ್ಯೋಗಗಳಲ್ಲಿರುವುದಿದ್ದರಂತೂ ಅವರ ಮಾತಿಗೆ ಇನ್ನಷ್ಟು ಪ್ರಾಮುಖ್ಯವಿದೆ. ಕುಟುಂಬದ ಅತ್ಯಂತ ಹಿರಿಯ ಪುರುಷನೆನ್ನಿಸಿಕೊಳ್ಳುವಂತಿರುವ ಅಜ್ಜ ಈಗ ತನ್ನ ಪ್ರಾಮುಖ್ಯ ಕಳೆದುಕೊಳ್ಳುತ್ತಿದ್ದಾನೆ. ''ವ್ಯಕ್ತಿವಾದ''ದ ಪ್ರಭಾವದಿಂದಾಗಿ ವ್ಯಕ್ತಿಯ ವಯಸ್ಸು ಅಥವಾ ಅಂತಸ್ತಿನ ಆಧಾರಕ್ಕಿಂತ ಮಿಗಿಲಾಗಿ ಆತನ ಸಾಮರ್ಥ್ಯ ಹಾಗೂ ಸಾಧನೆಗಳಿಗೆ ಮಹತ್ವ ಲಭಿಸುವ ಸ್ಥಿತಿ ಕುಟುಂಬದಲ್ಲಿಯೂ ಇದೆ. ಆದ್ದರಿಂದ ಈಗ ಕಿರಿಯರಿಗೂ ಮಹತ್ವ ಬಂದಿದೆ. ನಗರದ ಪರಿಸರದಲ್ಲಂತೂ (ರಾಸ್ - ೧೯೬೧, ಹಾಗೂ ಎಂ.ಎಸ್. ಗೋರೆ ೧೯೬೧ ಅವರ ಅಧ್ಯಯನಗಳು ಸೂಚಿಸಿದಂತೆ) ಅಧಿಕಾರವೆಂಬುದು ಕುಟುಂಬದ ಹಿರಿಯ 'ಅಜ್ಜ'ನ ಬದಲು ಆತನ ಗಂಡು ಮಕ್ಕಳಲ್ಲಿ ಹಂಚಿಹೋಗಿದೆ. ಇಲ್ಲಿಯೂ ಗಂಡು ಮಕ್ಕಳ ಸರ್ವಾಧಿಕಾರವಿಲ್ಲ. ಅವರು ಮುಖ್ಯವಾದ ತೀರ್ಮಾನಗಳನ್ನು ಕೈಗೊಳ್ಳುವಾಗ ತಮ್ಮ ಪತ್ನಿಯರ ಹಾಗೂ ಸೋದರಿಯರ ಅಭಿಪ್ರಾಯವನ್ನು ಪರಿಗಣನೆಗೆ ತೆಗೆದುಕೊಳ್ಳುವರು. ಕುಟುಂಬದ ಅಧಿಕಾರವು ಈಗ ಹೆಚ್ಚು ಹೆಚ್ಚಾಗಿ ಪ್ರಜಾಸತ್ತಾತ್ಮಕ ಪತ್ಯದ ನೆಲೆಯಲ್ಲಿ ಚಲಾವಣೆಯಾಗಲ್ಪಡುತ್ತಿದೆ ಎನ್ನಬಹುದು. ತಾಯ್ತಂದೆಯರ ಹಾಗೂ ಅಜ್ಜ-ಅಜ್ಜಿಯರ ಅಥವಾ ಅತ್ತೆ-ಮಾವಂದಿರ ಹತ್ತಿರ ಮಾತನಾಡುವಾಗ ವ್ಯವಹರಿಸುವಾಗ ಈ ಹಿಂದೆ ಇದ್ದಂತಹ ಭಯ, ಭಕ್ತಿ ಹಾಗೂ ಹಿಂಜರಿಕೆ ಈಗ ಕಾಣಿಸುವುದಿಲ್ಲ. ಹೆಚ್ಚು ಧೈರ್ಯದಿಂದ, ಸ್ನೇಹ-ವಿಶ್ವಾಸದಿಂದ ಮುಕ್ತವಾಗಿ ಅವರು ಮಾತನಾಡಬಲ್ಲರು,  ಚರ್ಚಿಸಬಲ್ಲರು.

**ದುರ್ಬಲಗೊಳ್ಳುತ್ತಿರುವ ಕೌಟುಂಬಿಕ ನಿಯಮಗಳು**

ಪರಂಪರಾಗತ ಕುಟುಂಬವು ಎಲ್ಲಾ ವಿಷಯದಲ್ಲಿ ಸಂಪ್ರದಾಯಕ್ಕೆ ಬದ್ಧವಾಗಿತ್ತು. ಎಲ್ಲವೂ ವ್ಯವಸ್ಥಿತ ಕ್ರಮದಂತೆ, ನಿಗದಿತ ರೀತಿಯಲ್ಲಿ ಸಂಪ್ರದಾಯದಿಂದ ಹಿಡಿದು ಆಸ್ತಿಯನ್ನು ಕೊಳ್ಳುವ, ಕೊಡುವ ಹಾಗೂ

ಮಕ್ಕಳಿಗೆ ಶಿಕ್ಷಣ ನೀಡುವ ಇಲ್ಲವೇ ವಿವಾಹ ಮಾಡುವಂತಹ ಮುಖ್ಯ ವಿಷಯಗಳವರೆಗೆ ಈ ಸಂಪ್ರದಾಯ ಎದ್ದು ಕಾಣಿಸುತ್ತಿತ್ತು.

ಈಗಿನ ಕುಟುಂಬಗಳಲ್ಲಿ ಹಿಂದಿನ ಕಟ್ಟುನಿಟ್ಟು, ಶಿಸ್ತು ಸಂಪ್ರದಾಯಕತೆ ಅಷ್ಟಾಗಿ ಕಾಣಿಸದು. ಈಗ ಕೌಟುಂಬಿಕ ಹೊಂದಾಣಿಕೆ, ಸಾಮರಸ್ಯ ಹಾಗೂ ಯಶಸ್ಸಿಗೆ ಮಹತ್ವ ನೀಡಲಾಗುತ್ತಿದೆ. ಆದ್ದರಿಂದ ವ್ಯಕ್ತಿಗೆ ಕೇವಲ ಆತನ ಕೌಟುಂಬಿಕ ಸದಸ್ಯತ್ವದ ಸ್ಥಾನವನ್ನು ಅಥವಾ ವಯಸ್ಸನ್ನು ಹೊಂದಿಕೊಂಡು ಜವಾಬ್ದಾರಿಯನ್ನು ಅವಕಾಶಗಳನ್ನು ಅಥವಾ ಪ್ರತಿಫಲಗಳನ್ನು ನೀಡುವ ಕ್ರಮವನ್ನು ಅನುಸರಿಸುತ್ತಿಲ್ಲ. ಅದಕ್ಕೆ ಬದಲಾಗಿ ವ್ಯಕ್ತಿಯ ಪ್ರತಿಭೆ ಸಾಮರ್ಥ್ಯಗಳನ್ನು ಗಣನೆಗೆ ತಂದುಕೊಂಡು ಈಗ ಅವಕಾಶಗಳನ್ನು ನೀಡಲಾಗುತ್ತಿದೆ. ವ್ಯಕ್ತಿಯ ಕೌಟುಂಬಿಕ ಸದಸ್ಯತ್ವ, ವಯಸ್ಸು, ಅಥವಾ ಲಿಂಗದ ಅಂಶಗಳನ್ನು ಮಾತ್ರ ಅವಲಂಬಿಸಿದ್ದ ಸಾಂಪ್ರದಾಯಕ ''ಶ್ರಮವಿಭಜನೆ ತತ್ವ'' ಈಗ ಅಪ್ರಸ್ತುತವಾಗುತ್ತಿದೆ. ವ್ಯಕ್ತಿಗತ ಪ್ರತಿಭೆ, ಆಸಕ್ತಿ ಹಾಗೂ ಅಭಿರುಚಿಗೆ ಈಗ ಮಹತ್ವ ಬರುತ್ತಿದೆ. ಇದರಿಂದ ಶಿಕ್ಷಣ ಪಡೆಯುವಿಕೆ, ಉದ್ಯೋಗ ಗಳಿಸಿಕೊಂಡು ಸಂಪಾದಿಸುವಿಕೆ, ಸಂಪಾದನೆಯನ್ನು ಅನುಭವಿಸುವಿಕೆ, ವಿವಾಹವಾಗುವಿಕೆ ಎಲ್ಲದರಲ್ಲಿಯೂ ಹಳೆಯ ಮಾದರಿಯ ಬದಲು ವ್ಯಕ್ತಿ ಸ್ವಾತಂತ್ರ್ಯದ ಆದರ್ಶವನ್ನು ಪಾಲಿಸುವ ಕಡೆಗೆ ಒಲವು ಮೂಡುತ್ತಿದೆ. ಬೆಳೆಯುತ್ತಿರುವ ಈ ವ್ಯಕ್ತಿ ಸ್ವಾತಂತ್ರ್ಯದ ಹಾಗೂ ಪ್ರಜಾಪ್ರಭುತ್ವದ ಭಾವನೆಗಳು ಕುಟುಂಬದ ಪರಂಪರಾಗತ ನಿಯಮಗಳನ್ನು ದುರ್ಬಲಗೊಳಿಸುತ್ತಿವೆ. ಇಂದಿನ ಕುಟುಂಬಗಳು ಹೊಸ ಭಾವನೆಗಳಿಗೆ ಹೊಂದಿಕೊಳ್ಳುತ್ತಿವೆ.

**ಕುಟುಂಬದ ಭಾವನೆ ಅಥವಾ ಅಭಿಮಾನಿಗಳಿಗೆ ಕುಂದುಂಟಾಗುತ್ತಿದೆ**

ಸಜ್ಜನ ಗಾಣಿಗರಲ್ಲಿ ಸಂಪ್ರದಾಯವಾಗಿ ಅವಿಭಕ್ತ ಕುಟುಂಬದ ಬಗ್ಗೆ ಇದ್ದ ಗೌರವ ಹಾಗೂ ಅಭಿಮಾನ ಈಗ ಕುಸಿಯುತ್ತಿದೆ. ಈಗಿನ ಕುಟುಂಬದ ಬಗೆಗಿನ ಕೆಲವು ಅವಲೋಕನಗಳು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಿವೆ ಉದಾ: ಕೌಟುಂಬಿಕ ಸಂಬಂಧಗಳು ಸಡಿಲಗೊಳ್ಳುತ್ತಿವೆ.

**ಸಜ್ಜನ ಗಾಣಿಗರ ಅವಿಭಕ್ತ ಕುಟುಂಬದ ಕಾರ್ಯಗಳಲ್ಲಿನ ಪರಿವರ್ತನೆಗಳು**

ಪರಂಪರಾಗತ ಅವಿಭಕ್ತ ಕುಟುಂಬದ ಅನೇಕ ಕಾರ್ಯಗಳಲ್ಲಿ ಹಾಗೂ ಅದರ ಸದಸ್ಯರುಗಳ ಕರ್ತವ್ಯ ಹಾಗೂ ಹೊಣೆಗಾರಿಕೆಗಳಲ್ಲಿ ಈಗ ಬಹಳಷ್ಟು ಬದಲಾವಣೆಗಳಾಗಿವೆ. ಕುಟುಂಬವು ಈ ಹಿಂದೆ ತನ್ನ ಸದಸ್ಯರುಗಳ ಬಹಳಷ್ಟು ಬೇಡಿಕೆಗಳನ್ನು ಅವಶ್ಯಕತೆಗಳನ್ನು ಪೂರೈಸುತ್ತಿತ್ತು. ಈಗ ಅವುಗಳನ್ನು ಪೂರೈಸುತ್ತಿಲ್ಲ. ಈ ಅಗತ್ಯ ಪೂರೈಸಲು ಕಾರ್ಖಾನೆ ಅಥವಾ ಕಛೇರಿಗಳು, ಶಾಲೆ ಕಾಲೇಜು, ಅಥವಾ ವಿದ್ಯಾರ್ಥಿ ನಿಲಯಗಳು, ವಸತಿ ನಿಲಯಗಳು, ನಾಟ್ಯಶಾಲೆ ಅಥವಾ ಸಿನಿಮಾ ಮಂದಿರಗಳು, ಆಸ್ಪತ್ರೆಗಳು, ಇವೆಲ್ಲವೂ ಕಾರ್ಯತತ್ಪರವಾಗಿವೆ. ಮಕ್ಕಳ ವಿದ್ಯಾಭ್ಯಾಸ, ರೋಗಿಗಳ ಶುಶ್ರೂಷ, ವೈದ್ಯರ ಸೇವೆ, ಅನಾಥರ ರಕ್ಷಣೆ, ದುರ್ಬಲರ ಸಂಪೋಷಣೆ ಇವೆಲ್ಲಾ ಕಾರ್ಯಗಳನ್ನು ಹಿಂದೆ ಕುಟುಂಬವೇ ನಿರ್ವಹಿಸುತ್ತಿತ್ತು. ಆದರೆ ಈಗ ಬೇರೆ ಬೇರೆ ಸಂಘ ಸಂಸ್ಥೆಗಳು ಕುಟುಂಬದ ಕಾರ್ಯವನ್ನು ಹೊತ್ತುಕೊಂಡಿವೆ,

ಲೈಂಗಿಕ ನಿಯಂತ್ರಣ ಹಾಗೂ ಪ್ರಜನನದ ಕಾರ್ಯಗಳು ಈಗಲೂ ಕುಟುಂಬದೊಂದಿಗೆ ಸೇರಿಕೊಂಡಿವೆ. ಲೈಂಗಿಕತೆಯ ಬಗೆಗಿದ್ದ ಈ ಹಿಂದಿನ ಬಿಗಿ ಈಗ ಕಾಣಿಸದು. ಗಂಡ-ಹೆಂಡಿರು ಕೂಡ ಪ್ರಕಟವಾಗಿ ತಮ್ಮ ಪ್ರೀತಿ- ಪ್ರೇಮಗಳನ್ನು ವ್ಯಕ್ತಪಡಿಸಿಕೊಳ್ಳಲಾಗದ ಪರಿಸ್ಥಿತಿ ಈಗಿನದಲ್ಲ. ಮಕ್ಕಳನ್ನು ಪಡೆಯಬೇಕೆಂಬ ಅದರಲ್ಲೂ ವಂಶೋದ್ಧಾರಕ್ಕೆ ಗಂಡು ಮಕ್ಕಳು ಬೇಕೆಂಬ ಬಯಕೆ ಈಗಲೂ ಇದೆ. ಆದ್ದರಿಂದ ಪ್ರಜನನದ ಕಾರ್ಯಕ್ಕೆ ಚ್ಯುತಿ ಬಂದಿಲ್ಲ. ಆದರೆ ಇಂದು ಕುಟುಂಬಕ್ಕಿಂತ ಹೆಚ್ಚಾಗಿ ಆಸ್ಪತ್ರೆಗಳು ಪ್ರಜನನದ ಕಾರ್ಯವನ್ನು ಹೊತ್ತಿವೆ. ಕುಟುಂಬ ಯೋಜನೆಯ ಕ್ರಮಗಳನ್ನು ಅನುಸರಿಸುವ ಈಗಿನ ಗಂಡ - ಹೆಂಡಿರು ನಾಲ್ಕಾರು ಮಕ್ಕಳ ಬದಲು ಒಂದೆರಡು ಮಕ್ಕಳಲ್ಲಿಯೇ ತೃಪ್ತಿಯನ್ನು ಕಾಣುತ್ತಾರೆ. ''ಅಷ್ಟ ಪುತ್ರರನ್ನು ಹಡೆದು ಸೌಭಾಗ್ಯವತಿಯಾಗಿ ಬಾಳು'' (''ಅಷ್ಟ ಪುತ್ರ ಸೌಭಾಗ್ಯವತೀ ಭವ'') ಎಂಬ ಆಶೀರ್ವಾದವು ಈಗ ಕೇವಲ ಔಪಚಾರಿಕವಾಗಿದೆ. ಆದ್ದರಿಂದ ಕುಟುಂಬದ ಗಾತ್ರ ಕಿರಿದಾಗುತ್ತಾ ಬರುತ್ತಿದೆ.

ಹಿಂದೊಂದು ಕಾಲದಲ್ಲಿ ಅವಿಭಕ್ತ ಕುಟುಂಬಗಳಿಗೆ ಹೆಣ್ಣನ್ನು ಕೊಡುವುದೆಂದರೆ ಅದು ಗೌರವದ ಸಂಕೇತವಾಗಿತ್ತು. ಆದರೆ ಈಗ ಅವಿಭಕ್ತ ಕುಟುಂಬವೆಂದರೆ ಹೆಣ್ಣನ್ನು ವಿವಾಹ ಮಾಡಿಕೊಡಲು ತಂದೆ ತಾಯಿಗಳೇ ಒಪ್ಪುತ್ತಿಲ್ಲ. ಕಾರಣ ಇಂದಿನ ತಂದೆ ತಾಯಿಗಳು ಕೇವಲ ಪ್ರತ್ಯೇಕತೆಯನ್ನು ಬಯಸುತ್ತಿದ್ದಾರೆ. ವಿವಾಹವಾದ ಮಗಳು ಅಳಿಯ ಪ್ರತ್ಯೇಕವಾಗಿರಬೇಕು ಎಂದು ಬಯಸಿ ಆದಷ್ಟು ವಿಭಕ್ತ ಕುಟುಂಬಗಳಿಗೆ ತಮ್ಮ ಮಗಳನ್ನು ವಿವಾಹ ಮಾಡಿಕೊಡುತ್ತಿದ್ದಾರೆ.

ಧಾರ್ಮಿಕ ಚಟುವಟಿಕೆಗಳನ್ನು ನಡೆಸುವ ಕುಟುಂಬದ ಕಾರ್ಯಗಳಲ್ಲಿ ಬದಲಾವಣೆ ಕಾಣಬರುತ್ತಿದೆ. ಅಂತಹ ಚಟುವಟಿಕೆಗಳ ಸಂಖ್ಯೆ ಈಗ ಕಾಣುತ್ತಿದೆ. ಹಬ್ಬ, ಹರಿದಿನ, ಉತ್ಸವ, ಸಮಾರಂಭಗಳಲ್ಲಿ ಈ ಹಿಂದೆ ಕಾಣುತ್ತಿದ್ದ ಸಡಗರ ಸಂಭ್ರಮ ಹಾಗೂ ಅದ್ದೂರಿಯ ವ್ಯವಸ್ಥೆ ಅಥವಾ ಧಾರ್ಮಿಕ ಶ್ರದ್ಧೆ ಈಗ ಕಾಣಬರುತ್ತಿಲ್ಲ. ''ಪಂಚಮಹಾಯಜ್ಞ''ಗಳನ್ನು ಮಾಡಿ ಸಲ್ಲಿಸಬೇಕಾದ ಎಲ್ಲಾ ಬಗೆಯ ಋಣಗಳನ್ನು ಸಂದಾಯ ಮಾಡಲು ಈಗ ಯಾರೂ ವಿವಾಹವಾಗುತ್ತಿಲ್ಲ. ಆದರೂ ಸಾಂಕೇತಿಕವಾಗಿ ಕುಲಧರ್ಮ, ಕುಲ ಪರಂಪರೆ ಹಾಗೂ ಕುಲದೇವತೆಯ ಆರಾಧನೆಗೆ ಸಂಬಂಧಿಸಿದ ಚಟುವಟಿಕೆಗಳು ಈಗಲೂ ನಡೆಯುವುದುಂಟು. ಶ್ರಾದ್ಧಾದಿ ಕರ್ಮಗಳು ಕೂಡ ಈಗ ನಿಮಿತ್ತಿಕವಾಗತೊಡಗಿವೆ. ಈ ಚಟುವಟಿಕೆಗಳನ್ನು ಸ್ವಲ್ಪ ವಿಸ್ತರಿಸಿ ಸಂಭ್ರಮದಿಂದ ಕೈಗೊಳ್ಳುವ ಸಂಭವವಿದ್ದಾಗ ಕುಟುಂಬದಿಂದ ದೂರವಿರುವ ಕುಲಬಾಂಧವರಿಗೆ, ಮನೆತನದ ಬಂಧುಗಳಿಗೆ ಪರಸ್ಪರ ಒಂದುಗೂಡಿ ಸುಖ ದುಖ ವಿಚಾರಿಸಿಕೊಳ್ಳಲು ಅವಕಾಶ ಆಗುವುದು.

ಮಕ್ಕಳ ಸಂಪೋಷಣೆ ಅಥವಾ ಸಮಾಜೀಕರಣದ ಕಾರ್ಯದ ಬಗ್ಗೆ ತಾಯಿ-ತಂದೆಯರು ಈ ಹಿಂದಿಗಿಂತಲೂ ಹೆಚ್ಚು ಆಸಕ್ತರಾಗಿದ್ದಾರೆ. ಮಕ್ಕಳನ್ನು ನೋಡಿಕೊಳ್ಳುವ ಹಾಗೂ ಅವರಿಗೆ ಪ್ರಾಥಮಿಕ ಸ್ವರೂಪದ ಅನೌಪಚಾರಿಕ ಶಿಕ್ಷಣ ನೀಡುವ ಎಲ್ಲಾ ಹೊಣೆಗಾರಿಕೆಯನ್ನು ಮಕ್ಕಳ ಅಜ್ಜ ಅಜ್ಜಿಯರ ಮೇಲೆ ಹೊರಿಸುವ ಪ್ರವೃತ್ತಿ ಈಗಿನ ತಾಯ್ತಂದೆಯರದಲ್ಲ. ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಯಶಸ್ವೀ ಜೀವನ ನಡೆಸಲು ಶಿಕ್ಷಣ ತೀರಾ ಅಗತ್ಯವೆಂದು ಮನಗಂಡಿರುವ ಅವರು ಮಕ್ಕಳು ಚಿಕ್ಕ ವಯಸ್ಸಿನಲ್ಲಿದ್ದಾಗಲೇ ಶಿಶುವಿಹಾರದ

ಹಾಗೂ ಶಾಲೆಗಳ ಮುಖಾಂತರ ಅವರಿಗೆ ಔಪಚಾರಿಕ ಶಿಕ್ಷಣ ಕೊಡಿಸುವ ಯತ್ನ ಮಾಡುವರು. ಚಿಕ್ಕ ಮಕ್ಕಳಿಗೆ ಭಾವನಾತ್ಮಕವಾದ ಒತ್ತಾಸೆಯನ್ನು ನೀಡುವ ಕಾರ್ಯವನ್ನು ಮಾತ್ರ ಅಜ್ಜ ಅಜ್ಜಿಯರು ಮಾಡಿದರೆ ಸಾಕೆಂಬ ಅಪೇಕ್ಷೆ ಅವರದಾಗಿದೆ. ತಮ್ಮ ಮಕ್ಕಳ ಮೇಲಿನ ಪ್ರೀತಿ ವಾತ್ಸಲ್ಯಗಳನ್ನು ಅವರು ವಿಶೇಷ ಮುಜುಗರಕ್ಕೆ ಒಳಗಾಗದೆ ತೋರ್ಪಡಿಸಬಲ್ಲವರಾಗಿದ್ದಾರೆ. ಈ ಹಿಂದಿನಂತಹ ಬಿಗುವಾದ ಹಾಗೂ ಶಿಸ್ತಿನಿಂದ ಕೂಡಿದ ವಾತಾವರಣದ ಬದಲು ಹೆಚ್ಚು ಮುಕ್ತವಾದ ಕೌಟುಂಬಿಕ ಪರಿಸರದಲ್ಲಿ ಮಕ್ಕಳನ್ನು ಬೆಳೆಸಬೇಕೆಂಬ ಹಂಬಲ ಅವರದ್ದಾಗಿದೆ ಎನ್ನಬಹುದು.

ಕುಟುಂಬದ ಆರ್ಥಿಕ ಕಾರ್ಯಗಳಲ್ಲಿ ಅಥವಾ ಆಸ್ತಿಯ ನಿರ್ವಹಣೆಯಲ್ಲಿ ಬಹಳಷ್ಟು ಪರಿವರ್ತನೆಗಳಾಗಿವೆ. ಕುಟುಂಬವು ಈಗ ಆರ್ಥಿಕವಾಗಿ ಸ್ವಾವಲಂಬಿಯಾಗಿಲ್ಲ. ಕೃಷಿಯೇತರ ಕ್ಷೇತ್ರದಲ್ಲಿ ಉದ್ಯೋಗಗಳನ್ನು ಅರಸುವ ಯತ್ನ ಆರಂಭವಾದಂದಿನಿಂದಲೇ ಕುಟುಂಬದ ಆರ್ಥಿಕ ಸ್ವಾವಲಂಬನೆ ಕುಸಿಯ ತೊಡಗಿತು ಎನ್ನಬಹುದು. ಜನಸಂಖ್ಯೆ ಹೆಚ್ಚುತ್ತಾ ಹೋದಂತೆ ದುಡಿಮೆಯ ನಿಮಿತ್ಯ ಕುಟುಂಬದ ಹೊರಗೆ ಹೋಗುವವರ ಸಂಖ್ಯೆ ಹೆಚ್ಚುತ್ತಾ ಹೋಯಿತು. ಕುಟುಂಬದ ಹೊರಗಡೆಯೇ ದುಡಿದು ಹೊರಗೆ ಸಂಪಾದಿಸುವವರ ಸಂಖ್ಯೆ ಈಗ ಹೆಚ್ಚುತ್ತಿದೆ ಹಾಗೆ ದುಡಿಯುವವರು ಈಗ ತಮ್ಮ ಮೂಲ ಕುಟುಂಬಕ್ಕೆ ಅವರ ನಿರ್ವಹಣೆಯ ದೃಷ್ಟಿಯಿಂದ ತಮ್ಮ ದುಡಿಮೆಯ ಚಿಕ್ಕಪಾಲೊಂದನ್ನು ನೀಡುವುದು ಇದೆ.

ಕುಟುಂಬದ ಆಸ್ತಿಯ ನಿರ್ವಹಣೆಯ ದೃಷ್ಟಿಯಿಂದ ನೋಡುವುದಾದರೆ ಮೊದಲು ಈ ಕಾರ್ಯವನ್ನು ಮಾಡುತ್ತಿದ್ದ ಕುಟುಂಬದ ಹಿರಿಯನಾದ ಯಜಮಾನ ಅಥವಾ ಕರ್ತನ ಅಧಿಕಾರ ಬಹಳಷ್ಟು ಮೊಟಕಾಗಿದೆ. ಈಗ ಆಸ್ತಿಯ ನಿರ್ವಹಣೆಯ ಕಾರ್ಯವನ್ನು ಮೂಲ ಕುಟುಂಬದಲ್ಲಿ ಉಳಿಯುವ ಗಂಡು ಮಕ್ಕಳಲ್ಲಿ ಓರ್ವನು (ಸಾಮಾನ್ಯವಾಗಿ ಹಿರಿಯನಾದವನು) ನೋಡಿಕೊಳ್ಳುತ್ತಾನೆ. ಕುಟುಂಬದ ಹಿರಿಯನಾಗಿದ್ದು ಕರ್ತನೆಂದು ಕರೆಯಿಸಿಕೊಳ್ಳುತ್ತಿದ್ದ ತಂದೆಯು ಆದಷ್ಟು ಬೇಗನೆ ತನ್ನ ವಿವಾಹಿತ ಮಗನಿಗೆ ಆಸ್ತಿಯ ಜವಾಬ್ದಾರಿ ವಹಿಸುತ್ತಾನೆ. ಈಗ ಆಸ್ತಿ ನಿರ್ವಹಣೆ ಮಾಡುವಾತನು ಸರ್ವಾಧಿಕಾರಿಯಂತೆ ವ್ಯವಹರಿಸುವಂತಿಲ್ಲ. ಇತರರ ಅಭಿಪ್ರಾಯಗಳಿಗೆ ಹಾಗೂ ಹಕ್ಕುಗಳಿಗೆ ಆತ ಮನ್ನಣೆ ನೀಡಬೇಕಾಗುವುದು. ಈಗ ಆತ ಯಜಮಾನನಲ್ಲಿ ಆದರೆ ಪಾರುಪತ್ಯಗಾರ ಸ್ವಂತ ದುಡಿಮೆ ಮಾಡಿ ಸಂಪಾದಿಸುವ ಸದಸ್ಯರುಗಳಿಗೆ ಕುಟುಂಬದ ಕರ್ಚಿಗಾಗಿ ಇಂತಿಷ್ಟೇ ಕೊಡಬೇಕೆಂದು ಆತ ಆಜ್ಞಾಪಿಸಲಾರ, ಅವರು ಕೊಟ್ಟದ್ದನ್ನು ಆತ ಸ್ವೀಕರಿಸಬೇಕಾಗುತ್ತದೆ. ಮೂಲ ಕುಟುಂಬದ ಆಸ್ತಿಯು ಬಹಳ ದೊಡ್ಡ ಮಟ್ಟದಿದ್ದಾಗ ಮಾತ್ರ ದೂರದಲ್ಲಿರುವ ಮಕ್ಕಳು ಅದರಲ್ಲಿ ತಮಗೂ ಪಾಲು ಬರಬೇಕೆಂದು ಅಪೇಕ್ಷಿಸುತ್ತಾರೆ. ಅದು ತೀರಾ ಚಿಕ್ಕ ಪ್ರಮಾಣದಲ್ಲಿದ್ದರೆ ತಾವೇ ಕೈಯ್ಯಲ್ಲಾದಷ್ಟು ಸಹಾಯ ನೀಡುತ್ತಾರೆ.

ಸದಸ್ಯರುಗಳಿಗೆ ವಾಸಿಸುವ ಮನೆಯನ್ನು ಒದಗಿಸುವ ಕಾರ್ಯವು ಈಗ ಮುಂದುವರೆದಿದ್ದರೂ ಅದರಲ್ಲಿ ಬದಲಾವಣೆಗಳಾಗಿವೆ. ಕುಟುಂಬದ ವಿವಾಹಿತ ಸಹೋದರರು ತಮ್ಮದೇ ಆದ ಪ್ರತ್ಯೇಕ ಸಂಸಾರ ಹೂಡುವ ನಿಮಿತ್ತ ಕೆಲವೊಮ್ಮೆ ದೂರ ಹೋದರೂ ತಮ್ಮ ಕಾಯಾತ್ಮಕ ಸಂಬಂಧವನ್ನು ಕಳೆದುಕೊಳ್ಳದೆ

ಮುಂದುವರೆಸುತ್ತಾರೆ. ಮತ್ತೆ ಕೆಲವರು ಬೃಹತ್ ಗಾತ್ರದ ಮೂಲ ಮನೆಯಲ್ಲಿಯೇ ಅಡ್ಡಗೋಡೆ ಇಟ್ಟುಕೊಂಡು ಪ್ರತ್ಯೇಕ ಅಡಿಗೆ ಊಟ ಮಾಡುತ್ತಾ ಸಂಸಾರ ನಡೆಸುತ್ತಾರೆ. ವಿಶೇಷ ಸಂದರ್ಭಗಳಲ್ಲಿ ಅಂದರೆ ಮದುವೆ, ಧಾರ್ಮಿಕ ಕಾರ್ಯಗಳು ಮುಂತಾದವುಗಳಲ್ಲಿ ಎಲ್ಲರೂ ಒಗ್ಗೂಡುತ್ತಾರೆ (ಚ.ನ. ಶಂಕರರಾವ್, ಪುಟ.೧೨೯).

**೩.೨ ಇತ್ತೀಚಿನ ಬದಲಾವಣೆಗಳು**

* ಹುಟ್ಟಿದ ಮಕ್ಕಳಿಗೆ ಸ್ಥಾನಮಾನವನ್ನು ನೀಡುವ ಕಾರ್ಯವನ್ನು ಇಂದಿಗೂ ಕುಟುಂಬವೇ ಮಾಡುತ್ತಿದೆ. ದೂರದ ಅವಲಂಬಿತ ''ಕೇಂದ್ರ ಕುಟುಂಬ''ದಲ್ಲಿ ಹುಟ್ಟಿದ ಮಕ್ಕಳಿಗೂ ಕೂಡ ಮೂಲಕುಟುಂಬದೊಂದಿಗೆ ತಮ್ಮ ಸಂಬಂಧವನ್ನು ಇಂದಿಗೂ ಗುರುತಿಸಿಕೊಳ್ಳುವುದುಂಟು.
* ಸದಸ್ಯರುಗಳಿಗೆ ರಕ್ಷಣೆ ಅಥವಾ ಭದ್ರತೆಯನ್ನು ನೀಡುವ ಕಾರ್ಯವನ್ನು ಕುಟುಂಬವೇ ಅಲ್ಪ-ಸ್ವಲ್ಪ ಮಾಡುತ್ತಿದೆಯಾದರೂ ಈ ಉದ್ದೇಶಕ್ಕಾಗಿಯೇ ಸ್ಥಾಪಿತವಾದ ಸಾರ್ವಜನಿಕ ಸ್ವರೂಪದ ''ಸಾಮಾಜಿಕ ಭದ್ರತೆ''ಯ ಹಾಗೂ ''ಸಾಮಾಜಿಕ ಕಲ್ಯಾಣ''ದ ಸಂಸ್ಥೆಗಳೊಂದಿಗೆ ಹಂಚಿಕೊಂಡಿದೆ.
* ಸದಸ್ಯರುಗಳಿಗೆ ಮನರಂಜನೆ ನೀಡುವ ಹೊಣೆಯನ್ನು ಕುಟುಂಬವು ಬಾಹ್ಯ ಸಂಸ್ಥೆಗಳಿಗೆ ವಹಿಸಿದೆ ಎನ್ನಬಹುದು. ಸಾಂಪ್ರದಾಯಕ ಮಾದರಿಯ ಮನೋರಂಜನೆಯನ್ನು ನೀಡುವ ಸ್ಥಿತಿಯಲ್ಲಿಯೂ ಕುಟುಂಬವಿಲ್ಲ. ಸದಸ್ಯರಿಗೆ ಅದರ ಅಪೇಕ್ಷೆಯೂ ಇಲ್ಲ.

ಶಿಕ್ಷಣದ ಪ್ರಭಾವ, ಕೈಗಾರಿಕೆಗಳ ಪ್ರಭಾವ, ನಗರೀಕರಣ, ವೈವಾಹಿಕ ಬದಲಾವಣೆಗಳು, ಶಾಸನಾತ್ಮಕ ಕ್ರಮಗಳ ಪ್ರಭಾವ, ಪಾಶ್ಚಿಮಾತ್ಯರ ಮೌಲ್ಯಗಳ ಪ್ರಭಾವ, ಆಧುನಿಕ ವಿಜ್ಞಾನ, ವಿಚಾರವಾದ, ವ್ಯಕ್ತಿವಾದ, ಸಮಾನತೆ, ಪ್ರಜಾಪ್ರಭುತ್ವ, ಸ್ತ್ರೀ ಸ್ವಾತಂತ್ರ್ಯ ಮುಂತಾದವು ಅವಿಭಕ್ತ ಕುಟುಂಬದ ಪರಿವರ್ತನೆಗೆ ಕಾರಣಗಳಾಗಿವೆ.

ಚಿತ್ರದುರ್ಗ ತಾಲ್ಲೂಕು ಮಲ್ಲಾಪುರ ಗ್ರಾಮದ ಅವಿಭಕ್ತ ಕುಟುಂಬದ ವಾಸಿಗಳು ಹಿರಿಯ ನಾಗರೀಕರು ಮತ್ತು ಸಜ್ಜನ ಗಾಣಿಗರ ಸದಸ್ಯರು ಆದ ಎಂ. ಮಹಾಲಿಂಗಪ್ಪ ಮತ್ತು ಶ್ರೀಮತಿ, ಬಸಮ್ಮ ಇವರ ಸಂದರ್ಶನ. ಪ್ರಶ್ನಾವಳಿಯ ಮೂಲಕ.

(೧) ನಿಮ್ಮ ಹೆಸರೇನು? ನಿಮ್ಮ ವಯಸ್ಸೆಷ್ಟು? ನೀವು ವಾಸಿಸುವ ಕುಟುಂಬ ಎಂತದ್ದು?

**ಉತ್ತರ:** ನನ್ನ ಹೆಸರು ಎಂ. ಮಹಾಲಿಂಗಪ್ಪ ವಯಸ್ಸು - ೮೮ ವರ್ಷಗಳು. ನನ್ನ ಹೆಂಡತಿಯ ಹೆಸರು ಶ್ರೀಮತಿ ಬಸಮ್ಮ ವಯಸ್ಸು - ೭೮ ವರ್ಷಗಳು. ನಾವು ವಾಸಿಸುವ ಕುಟುಂಬ ಅವಿಭಕ್ತ ಕುಟುಂಬವಾಗಿದೆ.

೨. ನಿಮ್ಮ ಕುಟುಂಬದ ಒಟ್ಟು ಸದಸ್ಯರ ಸ್ಪಷ್ಟ ಚಿತ್ರವನ್ನು ಕೊಡ ಬಯಸುತ್ತೀರಾ? ಹಾಗೂ ಆಸ್ತಿ ಎಷ್ಟಿದೆ?

**ಉತ್ತರ:** ಎಂ. ಮಹಾಲಿಂಗಪ್ಪ ಮತ್ತು ಶ್ರೀಮತಿ ಬಸಮ್ಮ.

ಮಗ ಎಂ. ಶರಣಪ್ಪ ಮತ್ತು ಶ್ರೀ ಮತಿ ಗೌರಮ್ಮ.

ಮಗ ಎಂ. ಚನ್ನಬಸಪ್ಪ ಮತ್ತು ಶ್ರೀ ಮತಿ ಸರೋಜಮ್ಮ.

ಮಗ ಎಂ. ಶಶಿಧರ ಮತ್ತು ಶ್ರೀ ಮತಿ ರುದ್ರಮ್ಮ.

ಮಗ ಎಂ. ರಾಜಶೇಖರಪ್ಪ, ಮತ್ತು ಶ್ರೀಮತಿ ಎನ್. ಚಂದಮ್ಮ.

ಮೊಮ್ಮಕ್ಕಳು ಎಂ. ಶರಣಪ್ಪ ದಂಪತಿಗಳಿಗೆ ೨ (೧) m.s. ಉದಯ ಕುಮಾರ್ (೨) ಅರಣ್ ಕುಮಾರ್

ಮೊಮ್ಮಕ್ಕಳು. M.S. ಉದಯ ಕುಮಾರ್ ಮತ್ತು ಶ್ರೀಮತಿ ಮಂಜುಳ ದಂಪತಿಗಳಿಗೆ ಮರಿಮಕ್ಕಳು-ಚೇತನ್.

ಮಗ ಎಂ. ಚನ್ನಬಸಪ್ಪ ಮತ್ತು ದಂಪತಿಗಳಿಗೆ - M.C. ವಿನಯ್ ಮೊಮ್ಮಗ

ಮಗ ಎಂ. ಶಶಿಧರ ಮತ್ತು ದಂಪತಿಗಳಿಗೆ (೧) M.S. ಮಂಜುನಾಥ್

(೨) M.S. ಮಧು ಕುಮಾರ್

ಮಗ ಎಂ. ರಾಜಶೇಖರಪ್ಪ ದಂಪತಿಗಳಿಗೆ (೧) R.C. ಪವನ್ ಕುಮಾರ್ (೨) R.C. ಅನುಶ್ರೀ

ಎಂ. ಮಹಾಲಿಂಗಪ್ಪ ಮತ್ತು ಶ್ರೀಮತಿ ಬಸಮ್ಮ

ಶರಣಪ್ಪ, ಎಂ. ಚನ್ನಬಸಪ್ಪ, ಶಶಿಧರ, ಎಂ ರಾಜಶೇಖರಪ್ಪ

ಶ್ರೀಮತಿ ಗೌರಮ್ಮ, ಶ್ರೀಮತಿ ಸರೋಜಮ್ಮ, ಶ್ರೀಮತಿ ರುದ್ರಮ್ಮ, ಎನ್. ಚಂದಮ್ಮ

೧. ಉದಯಕುಮಾರ್ ಅರಣ್‌ಕುಮಾರ್ ವಿನಯ್‌ಕುಮಾರ್ M.S. ಮಂಜುನಾಥ್‌ಕುಮಾರ್
M.S. ಮಧುಕುಮಾರ್. R.C. ಪವನ್ ಕುಮಾರ್, ಕುಮಾರಿ ಅನುಶ್ರೀ

ಶ್ರೀಮತಿ, ಮಂಜುಳಮ್ಮ ಚೇತನ್

ಒಟ್ಟು ಕುಟುಂಬದ ಜನಸಂಖ್ಯೆ - ೧೯ ಜನ.

ಒಟ್ಟು ಕುಟುಂಭದ ನೀರಾವರಿ, - ೦೭ ಎಕರೆ.

ಮಳೆಯಾ ಶ್ರಿತ ಎರೆಭೂಮಿ - ೧೩ ಎಕರೆ.

ಮಳೆಮಾಶ್ರೀತ ಕೆಂಪುಭೂಮಿ - ೨೧ ಎಕರೆ.

ಒಟ್ಟು ೪೧ ಎಕರೆ ಆಸ್ತಿ ಇದೆ.

೩. ಒಟ್ಟು ಕುಟುಂಬದಲ್ಲಿ ಎಷ್ಟು ತಲೆ ಮಾರುಗಳಿವೆ

**ಉತ್ತರ:** ೧. ಎಂ. ಮಹಾಲಿಂಗಪ್ಪ, ವಯಸ್ಸು-೮೮ ಮತ್ತು ಶ್ರೀ ಮತಿ ಬಸಮ್ಮ ವಯಸ್ಸು-೭೮

**ಮಕ್ಕಳು ಮತ್ತು ಸೊಸೆಯರು**

೧. ಎಂ. ಶರಣಪ್ಪ ವಯಸ್ಸು-೬೦ ಮತ್ತು ಶ್ರೀಮತಿ ಗೌರಮ್ಮ ವಯಸ್ಸು-೫೬.

೨. ಎಂ ಚನ್ನ ಬಸಪ್ಪ ವಯಸ್ಸು-೫೭ ಮತ್ತು ಶ್ರೀಮತಿ ಸರೋಜಮ್ಮ ವಯಸ್ಸು-೫೦.

೩ ಎಂ. ಶಶಿಧರ ವಯಸ್ಸು-೪೫ ಮತ್ತು ಶ್ರೀ ಮತಿ ರುದ್ರಮ್ಮ ವಯಸ್ಸು-೪೦.

೪. ಎಂ. ರಾಜಶೇಖರಪ್ಪ ವಯಸ್ಸು-೪೨ ಮತ್ತು ಶ್ರೀ ಮತಿ ಚಂದಮ್ಮ ವಯಸ್ಸು-೪೨.

**ಮೊಮ್ಮಕ್ಕಳು**

೧. M.S. ಉದಯ ಕುಮಾರ್ ಶ್ರೀ ಮತಿ ಮಂಜುಳಮ್ಮ.

೨. M.S. ಅರಣ್ ಕುಮಾರ್

೧. M.S. ಮಂಜುನಾಥ

೨. M.S. ಮಧು ಕುಮಾರ್

೧. M.S. ವಿನಯ್ ಕುಮಾರ್

೧. R.C. ಪವನ್ ಕುಮಾರ್

೨. R.C. ಅನುಶ್ರೀ

**ಮರಿಮಕ್ಕಳು**

೧ ಚೇತನ

ಒಟ್ಟು ನಾಲ್ಕು ತಲೆಮಾರಿನ ಜನಸಂಖ್ಯೆ, ನಮ್ಮ ಅವಿಭಕ್ತ ಕುಟುಂಬದಲ್ಲಿ ವಾಸಮಾಡುತ್ತಿದ್ದೇವೆ.

೪. ನಿಮ್ಮ ಅವಿಭಕ್ತ ಕುಟುಂಬದಲ್ಲಿ ಮೂಲ ವೃತ್ತಿಗಳಿವೆಯೇ ಮತ್ತು ವೃತ್ತಿ ಪರಿವರ್ತನೆಗಳಾಗಿವೆಯೇ?

**ಉತ್ತರ:** ನಮ್ಮಲ್ಲಿ ಮೂಲ ವೃತ್ತಿಯಾದ ಗಾಣದಿಂದ ಎಣ್ಣೆ ತೆಗೆಯುವ ವ್ಯಕ್ತಿಗಳು ಈಗ ಇಲ್ಲ. ಬದಲಾದ ಕುಟುಂಬದ ಇಂದಿನ ವೃತ್ತಿಗಳು.

| ಹೆಸರು | ವಯಸ್ಸು ಶಿಕ್ಷಣ ಬದಲಾದ ವ್ಯಕ್ತಿ |
|---|---|
| ಶ್ರೀ ಎಂ. ಮಹಾಲಿಂಗಪ್ಪ | ವ - ೮೮ ಶಿಕ್ಷಕರ ತರಬೇತಿ ಪ್ರಾಥಮಿಕ ಶಾಲಾ ಶಿಕ್ಷಕರು, ನಿವೃತ್ತಿ ದಿನಾಂಕ - ೧೯೭೫ ಇಸವಿ. |
| ಶ್ರೀಮತಿ ಬಸಮ್ಮ | ವ - ೭೮ ಇಲ್ಲ ವ್ಯವಸಾಯ ಮತ್ತು ಗೃಹ ಕೆಲಸಗಳು. |
| ಶ್ರೀ. ಎಂ. ಶರಣಪ್ಪ | ವ - ೬೦ 9th ವ್ಯವಸಾಯ ಮತ್ತು ಗೃಹ ಕೆಲಸಗಳು. |
| ಶ್ರೀಮತಿ. ಗೌರಮ್ಮ | ವ - ೫೬ 7th ವ್ಯವಸಾಯ. |

| | |
|---|---|
| ಶ್ರೀ. ಎಂ. ಚೆನ್ನಬಸಪ್ಪ | ವ - ೫೦ B.A. ವ್ಯವಸಾಯ |
| ಶ್ರೀಮತಿ ಸರೋಜಮ್ಮ | ವ - ೫೦ 4st ವ್ಯವಸಾಯ ಮತ್ತು ಗೃಹ ಕೆಲಸಗಳು. |
| ಶ್ರೀ. ಎಂ. ಶಶಿಧರ | ವ - ೪೫ ಶಿಕ್ಷಣ ವೃತ್ತಿ. 9th ವ್ಯವಾಸಾಯ ಮತ್ತು ಆಟೋ ಚಾಲನೆ. |
| ಶ್ರೀಮತಿ ರುದ್ರಮ್ಮ | ವ - ೪೦ - 4st ವ್ಯವಸಾಯ ಮತ್ತು ಗೃಹ ಕೆಲಸ. |
| ಎಂ. ರಾಜಶೇಖರಪ್ಪ | ವ - ೪೨ M.A.MEd ಉಪನ್ಯಾಸಕರು. |
| ಶ್ರೀಮತಿ ಚಂದಮ್ಮ | ವ - ೪೨ M.SC. ಉಪನ್ಯಾನಕರು. |
| ಪವನ್ ಕುಮಾರ್ | ವ - ೧೧ 5th ಓದುತ್ತಿದ್ದಾನೆ. |
| ಅನುಶ್ರೀ | ವ - ೦೭ 3th ಓದುತ್ತಿದ್ದಾಳೆ. |
| ಉದಯ ಕುಮಾರ್ | ವ - ೨೫ B.A. ವ್ಯವಸಾಯ. |
| ಮಂಜುಳಮ್ಮ | ವ - ೨೦ S.S.L.C. ವ್ಯವಸಾಯ ಮತ್ತು ಗೃಹಕೆಲಸ. |
| ಅರುಣ್ ಕುಮಾರ್ | ವ - ೨೩ S.S.L.C. ವ್ಯವಸಾಯ. |
| ಎಂ. ಎಸ್. ಮಂಜುನಾಥ | ವ - ೨೦ I.T.I. ಓದುತ್ತಿದ್ದಾನೆ. |
| ಎಂ. ಎಸ್. ಮಧುಕುಮಾರ್ | ವ - ೧೮ I.T.I. ಓದುತ್ತಿದ್ದಾನೆ. |
| ವಿನಯ್ | ವ - ೦೪ L.K.G. ಓದುತ್ತಿದ್ದಾನೆ. |
| ಚೇತನ್ | ವ - ೦೨ L.K.G. ಓದುತ್ತಿದ್ದಾನೆ. |

ಇಡೀ ಕುಟುಂಬದಲ್ಲಿಯೇ ಎಂ. ರಾಜಶೇಖರಪ್ಪ ಮತ್ತು ಶ್ರೀಮತಿ ಚಂದಮ್ಮನನ್ನು ಬಿಟ್ಟರೆ, ಉಳಿದ ಎಲ್ಲಾ ಸದಸ್ಯರು ವ್ಯವಸಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸುಮಾರು ಏಳು ಜನ ಮಕ್ಕಳು ಓದುತ್ತಿದ್ದಾರೆ ಮತ್ತು ಒಬ್ಬ ಮೊಮ್ಮಗ ಮಾತ್ರ ಇನ್ನೂ ಓದುತ್ತಿಲ್ಲ. ಕುಟುಂಬದಲ್ಲಿ ಅತೀ ಚಿಕ್ಕವನೆಂದರೆ ಅವನೇ. ಈ ಇಡೀ ಕುಟುಂಬದಲ್ಲಿಯೇ, ಮೂಲ ವೃತ್ತಿಯನ್ನು ಬಿಟ್ಟು ವ್ಯವಸಾಯ, ಶಿಕ್ಷಣ, ಉಪನ್ಯಾಸಕ ವೃತ್ತಿಯನ್ನು ಈ ಕುಟುಂಬವು ಹೊಂದಿದೆ.

೫. ನಿಮ್ಮ ಕುಟುಂಬದ ಎಲ್ಲಾ ಸದಸ್ಯರು ಒಟ್ಟಾಗಿ ಅಡಿಗೆ ಮಾಡಿ ಕೊಳ್ಳುತ್ತಿರೋ ಅಥವಾ ಬೇರೆ ಬೇರೆ ಮಾಡಿಕೊಳ್ಳುತ್ತೀರೋ? ಪೂಜಾ ಕಾರ್ಯ ವಿಶೇಷವೇನು?

**ಉತ್ತರ:** ಕುಟುಂಬದ ಎಲ್ಲಾ ಸದಸ್ಯರು ಒಂದೇ ಒಲೆಯಲ್ಲಿ ತಯಾರಿಸಿದ ಅಡಿಗೆಯನ್ನು ಊಟ ಮಾಡುತ್ತಾರೆ. ಇವರಲ್ಲಿ ಬೇರೆ ಬೇರೆ ಒಲೆಗಳಿಲ್ಲ, ಇರುವುದೊಂದೇ ಒಲೆ. ಇಡೀ ಕುಟುಂಬದ ಎಲ್ಲಾ ಸದಸ್ಯರೂ ಒಂದೇ ಪೂಜಾ ಮನೆಯಲ್ಲಿ ಪೂಜೆ ಮತ್ತು ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿಕೊಳ್ಳುತ್ತಾರೆ.

೬. ನಿಮ್ಮ ಮನೆ ದೇವರ ಹೆಸರೇನು? ಜಾತ್ರೆ ಉತ್ಸವಗಳಲ್ಲಿ ಮನೆ ದೇವರಿಗೆ ಹೋಗುತ್ತೀರಾ?

**ಉತ್ತರ:** ನಮ್ಮ ಮನೆಯ ದೇವರು ಶ್ರೀ ಮಾವಿನಳ್ಳಿ ಬಸವೇಶ್ವರ, ಇದರ ಜಾತ್ರೆಗೆ ನಮ್ಮ ಕುಟುಂಬದ ಸದಸ್ಯರೆಲ್ಲಾ ಹೋಗುತ್ತಾರೆ.

೭. ನಿಮ್ಮ ಕುಟುಂಬದಲ್ಲಿ ಕರ್ತನ ಪಾತ್ರ ನಿರ್ವಹಿಸುವವರು ಯಾರು?

**ಉತ್ತರ:** ಈ ಕುಟುಂಬದಲ್ಲಿ ಹಿರಿಯ ಪುತ್ರನಾದ ಶರಣಪ್ಪ ಹಾಗೂ ಹಿರಿಯ ಸೊಸೆಯಾದ ಗೌರಮ್ಮನಿಗೆ ಮನೆಯಲ್ಲಿ ಹಿರಿಯರ ಸ್ಥಾನ ಹೊಂದಿದ್ದರೂ, ಕರ್ತನ ಆಳ್ವಿಕೆ ಕೊಟ್ಟಿಲ್ಲ. ಕುಟುಂಬದಲ್ಲಿ ತಂದೆಯ ಮಾರ್ಗ ದರ್ಶನದಲ್ಲಿ ೨ ನೇಯ ಮಗನಾದ ಎಂ. ಚೆನ್ನಬಸಪ್ಪ ಮತ್ತು ಶ್ರೀಮತಿ ಸರೋಜಮ್ಮ ಇವರು ಮನೆಯ ಕರ್ತನ ಜವಾಬ್ದಾರಿ ಹೊತ್ತು ಕರ್ತನಾಗಿ ಆಳ್ವಿಕೆ ನಡೆಸುವವರ ಮಾತನ್ನು ಇಡೀ ಕುಟುಂಬವೇ ಕೇಳುತ್ತದೆ. ಮತ್ತು ಆ ವ್ಯಕ್ತಿಯನ್ನು ಕುಟುಂಬದಲ್ಲಿ ಗೌರವಿಸಲಾಗುತ್ತದೆ. ಈ ಕುಟುಂಬವು ''ಒಬ್ಬ ಎಲ್ಲರಿಗಾಗಿ ಎಲ್ಲರೂ ಒಬ್ಬನಿಗಾಗಿ'' ಎಂಬ ಸಹಕಾರದ ಮೇಲೆ ಮುನ್ನಡೆಯುತ್ತಿದೆ.

೮. ಅವಿಭಕ್ತ ಕುಟುಂಬವು ಸದಸ್ಯನನ್ನು ನಿಯಂತ್ರಿಸುತ್ತದೆಯೇ

**ಉತ್ತರ:** ಎಲ್ಲಾ ಅವಿಭಕ್ತ ಕುಟುಂಬಗಳಲ್ಲಿ ಕಂಡುಬರುವಂತೆ ಈ ಕುಟುಂಬದಲ್ಲಿಯೂ ಕೌಟುಂಬಿಕ ನಿಯಂತ್ರಣ ಕ್ರಮಗಳಿವೆ. ಇಲ್ಲಿ ಕುಟುಂಬವು ಅನೌಪಚಾರಿಕ ಸಾಧನಗಳಿಂದ ಸದಸ್ಯರ ಮೇಲೆ ನಿಯಂತ್ರಣ ತರುತ್ತದೆ. ಅಂದರೆ, ಸಂಪ್ರದಾಯ, ಆಚಾರ - ವಿಚಾರಗಳು, ಮತ್ತು ಆದರ್ಶಗಳು ಕುಟುಂಬದ ಜನರನ್ನು ನಿಯಂತ್ರಿಸುತ್ತವೆ. ಕುಟುಂಬದ ಸದಸ್ಯರು ತಪ್ಪು ಮಾಡಿದಾಗ ಅವರನ್ನು ತಿದ್ದಿ ನಡೆಸುವ ಜವಾಬ್ದಾರಿ ಆ ಕುಟುಂಬದ ಹಿರಿಯರ ಮೇಲಿರುತ್ತದೆ.

೯. ನಿಮ್ಮ ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಕುಟುಂಬದ ಸದಸ್ಯರೆಲ್ಲರೂ ಕೂಡಿ ದುಡಿಮೆ ಮಾಡುತ್ತಾರೆಯೇ?

**ಉತ್ತರ:** ''ಹೌದು'' ಕುಟುಂಬದ ಆಸ್ತಿಯಲ್ಲಿ ನಮ್ಮ ಕುಟುಂಬದ ಸದಸ್ಯರೆಲ್ಲರೂ ದುಡಿಯುತ್ತಾರೆ. ದುಡಿಮೆಗೆ ತಕ್ಕದಾದ ಪ್ರತಿಫಲವಾಗಿ ಕುಟುಂಬದ ಎಲ್ಲಾ ಸದಸ್ಯರೂ ಊಟ ಮಾಡುತ್ತಾರೆ. ಈ ಕುಟುಂಬದಲ್ಲಿ ಎಲ್ಲರೂ ಎಲ್ಲರಿಗೋಸ್ಕರ ದುಡಿಮೆ ತೋರಿಸುತ್ತಾರೆ. ಈ ಕುಟುಂಬದ ಪ್ರತಿಯೊಬ್ಬರಿಗೂ ಆಸ್ತಿಯಲ್ಲಿ ಪಾಲು ಮತ್ತು ಭಾಗವಿರುತ್ತದೆ.

೧೦. ಯಾವಾಗಲಾದರೂ ನಿಮ್ಮ ಕುಟುಂಬದ ಸದಸ್ಯರಲ್ಲಿ ಜಗಳಗಳು ಮತ್ತು ಕಲಹಗಳು ಕಂಡು ಬರುವುದಿಲ್ಲವೆ?

**ಉತ್ತರ:** ನಮ್ಮ ಕುಟುಂಬದಲ್ಲಿ ಎಲ್ಲಾ ಸದಸ್ಯರನ್ನು ಪ್ರೀತಿ ಗೌರವಗಳಿಂದ ಕಾಣಿಸುವುದರಿಂದ ಇಲ್ಲಿ ಹೆಚ್ಚು ಜನರಿದ್ದರೂ ಜಗಳಗಳು ಕಡಿಮೆ. ಇಲ್ಲಿ ಎಲ್ಲಾ ಸದಸ್ಯರೂ ಕುಟುಂಬದ ಮಕ್ಕಳ, ತಂದೆಯ, ಹಿರಿಯರ ಮಾತುಗಳಿಂದ ಮನೋರಂಜನೆ ಪಡೆಯುತ್ತಾರೆ. ಕುಟುಂಬದ ಜನಸಂಖ್ಯೆ ಬೆಳೆಯುತ್ತಾ ಹೋಗುತ್ತಿತ್ತು, ಆದರೆ

ಇಂದು ಸಜ್ಜನ ಗಾಣಿಗರ ಮಹಿಳೆಯರು ಎರಡು ಮತ್ತು ಮೂರು ಮಕ್ಕಳನ್ನು ಪಡೆಯುವುದರ ಮೂಲಕ ಶಾಶ್ವತ ಜನಸಂಖ್ಯೆ ನಿಯಂತ್ರಣ ಶಸ್ತ್ರ ಚಿಕಿತ್ಸೆಗೆ ಒಳಗಾಗುತ್ತಿದ್ದಾರೆ. ಇದರಿಂದ ಅವಿಭಕ್ತ ಕುಟುಂಬಗಳ ಜನಸಂಖ್ಯೆಯು ಮೊದಲಿನ ದಿನ ಮಾನಗಳಲ್ಲಿ ಇರುವಂತೆ ಇರದೇ ಕುಟುಂಬದಲ್ಲಿ ರಚನಾತ್ಮಾಕವಾಗಿ ಜನ ಸಂಖ್ಯೆ ಇಳಿಮುಖವಾಗುತ್ತಿದೆ.

೧೧. ಇಂದಿನ ದಿನಮಾನಗಳಲ್ಲಿ ಅವಿಭಕ್ತ ಕುಟುಂಬಗಳ ಸಂಖ್ಯಾತ್ಮಕ ಇಳಿಮುಖ ಕಾಣುತ್ತಿದೆ. ನಿಮ್ಮ ಅನಿಸಿಕೆ ಏನು?

**ಉತ್ತರ:** ಹಿಂದಿನ ದಿನಮಾನಗಳಲ್ಲಿ ಜನಸಂಖ್ಯೆಯನ್ನು ನಿಯಂತ್ರಿಸುವ ಯಾವುದೇ ಶಾಶ್ವತ ಪರಿಹಾರಗಳು ಇರಲಿಲ್ಲ. ಆದ್ದರಿಂದ ಒಂದು ಕಡೆ ?

೧೨. ನಿಮ್ಮ ಕುಟುಂಬದಲ್ಲಿ ವಿವಾಹ ಪದ್ಧತಿಗಳು ಹೇಗೆ ನಡೆಯುತ್ತವೆ?

**ಉತ್ತರ:** ಸಾಂಪ್ರದಾಯಿಕ ವಿವಾಹಗಳು ನಮ್ಮ ಅವಿಭಕ್ತ ಕುಟುಂಬಗಳಲ್ಲಿ ನಡೆಯುತ್ತಿವೆ, ಹಾಗೂ ಅವಿಭಕ್ತ ಕುಟುಂಬಗಳಲ್ಲಿ ಆದಷ್ಟು ಎರಡು ಮತ್ತು ಮೂರು ವಿವಾಹಗಳನ್ನು ಒಂದೇ ಬಾರಿಗೆ ಲಗ್ನ ಮಾಡುತ್ತೇವೆ.

೧೩. ನಿಮ್ಮ ಕುಟುಂಬದಲ್ಲಿ ಅತಿಥಿ ಸತ್ಕಾರ, ಉಳಿದ ಆಚರಣೆಗಳು ಹೇಗೆ ನಡೆಯುತ್ತವೆ.

**ಉತ್ತರ:** ನಾವು ಅತಿಥಿ ಸತ್ಕಾರಕ್ಕೆ ಮೊದಲ ಪ್ರಧಾನ್ಯತೆ ಕೊಡುತ್ತೇವೆ. ಹಾಗೆಯೇ ಶುಭ ಕಾರ್ಯಗಳು, ಹಬ್ಬ ಹರಿದಿನಗಳನ್ನು ಈ ಕುಟುಂಬದಲ್ಲಿ ಚಾಚುತಪ್ಪದೆ ಮಾಡುತ್ತೇವೆ. ಅಂತಹ ಕಾರ್ಯಕ್ರಮಗಳಿಗೆ ಬಂಧು ಬಳಗ, ಮಿತ್ರರನ್ನು ಆಹ್ವಾನಿಸುತ್ತಲೇ ಇರುತ್ತೇವೆ.

೧೪. ನಿಮ್ಮ ಕುಟಂಬಕ್ಕೆ ಸಂಭಂಧಿಸಿದಂತೆ ಎತ್ತು ಮತ್ತು ದನ ಕರುಗಳ ಸಂಖ್ಯೆ ಎಷ್ಟಿದೆ?

**ಉತ್ತರ:** ಒಂದು ಜೊತೆ ಎತ್ತುಗಳು, ಆರು ಹಸುಗಳು ಮತ್ತು ನಾಲ್ಕು ಕರುಗಳಿವೆ. ಈ ಕುಟುಂಬದಲ್ಲಿ ಇಂದು ಎಮ್ಮೆಗಳು ಇಲ್ಲ. ಹಿಂದಿನ ದಿನ ಮಾನಗಳಲ್ಲಿ ಕುಟುಂಬದಲ್ಲಿ ಸುಮಾರು ಸಂಖ್ಯೆಯಲ್ಲಿ ಹಸುವಿಗಿಂತ ಎಮ್ಮೆಗಳನ್ನೇ ಹೆಚ್ಚು ಸಾಕಲಾಗಿತ್ತು. ಆದರೆ ಇಂದು ಎಮ್ಮೆಗಳನ್ನು ಸಂಪೂರ್ಣ ಮಾರಾಟ ಮಾಡಿ ಹಸುಗಳನ್ನಷ್ಟೇ ಉಳಿಸಿಕೊಂಡಿದ್ದೇವೆ.

೧೫. ಕುಟುಂಬದಲ್ಲಿ ಸಾಕು ಪ್ರಾಣಿಗಳನ್ನೇನಾದರೂ ಸಾಕಿದ್ದೀರಾ?

**ಉತ್ತರ:** ಹಿಂದಿನ ಕಾಲದಲ್ಲಿ ಮನೆಯಲ್ಲಿ ಅದರಲ್ಲೂ ಅವಿಭಕ್ತ ಕುಟುಂಬಗಳಲ್ಲಿ ಒಂದು ನಾಯಿ ಮತ್ತು ಬೆಕ್ಕು ಇರುತ್ತಿದ್ದವು. ಇಂದು ಕುಟುಂಬಗಳು ಈ ಜವಾಬ್ದಾರಿಯಿಂದ ನುಣಿಚಿಸಿ ಕೊಳ್ಳುತ್ತಿವೆ. ಅಂತಹ ದೊಡ್ಡ ಅವಿಭಕ್ತ ಕುಟುಂಬ ವಿದ್ದರೂ ಸಾಕು ಪ್ರಾಣಿಗಳನ್ನು ಸಾಕುವ ಗೋಜಿಗೆ ಇಂದು ಹೋಗದೇ ಇರುವುದು. ಇವರಲ್ಲಾದ ಬದಲಾವಣೆಯಾಗಿದೆ.

೧೬. ನಿಮ್ಮ ಜಮೀನುಗಳಲ್ಲಿ ಬೆಳೆಯುವ ಮುಖ್ಯ ಬೆಳೆಗಳು ಯಾವುವು?

**ಉತ್ತರ:** ಅಡಿಕೆ, ತೆಂಗು, ಈರುಳ್ಳಿ, ಜೋಳ, ಮೆಕ್ಕೆಜೋಳ, ತೊಗರಿ, ಶೇಂಗಾ, ಸೂರ್ಯಕಾಂತಿ ಮುಂತಾದ ಮಾಣಿಜ್ಯೇತರ ಬೆಳೆಗಳನ್ನು ಇಂದು ಕುಟಂಬದಲ್ಲಿ ಬೆಳೆಯಲಾಗುತ್ತದೆ. ಇತ್ತೀಚಿನ ದಿನ ಮಾನಗಳಲ್ಲಿ ಬೆಳೆ ಮತ್ತು ಲಾಭಾಂಶ ಈ ಎರಡನ್ನು ಆಧಾರವಾಗಿಟ್ಟುಕೊಂಡು ಬೆಳೆಯನ್ನು ಬೆಳೆಯಲಾಗುತ್ತಿದೆ.

ಈ ಮೇಲಿನ ಎಲ್ಲಾ ಲಕ್ಷಣಗಳನ್ನು ಇವರ ಅವಿಭಕ್ತ ಕುಟುಂಬವು ಹೊಂದಿದೆ. ಇಂದಿಗೂ ಚಿತ್ರದುರ್ಗದಲ್ಲಿ ಸಜ್ಜನ ಗಾಣಿಗರಲ್ಲಿ ಅವಿಭಕ್ತ ಕುಟುಂಬಗಳೆ ಜಾಸ್ತಿ ಇವೆ.

**ಗಾಣಿಗ ಸಮಾಜದ ಒಳಪಂಗಡಗಳು**

''ದೀಪವನ್ನು ಎಂದಾದರೂ ಕತ್ತಲೆಯು ಮಲೀನಗೊಳಿಸೀತೇ'' ಚೂಡಾಮಣಿ

ಒಂದು ಜನಾಂಗದ ನಡೆನುಡಿಗಳು ರೀತಿ-ನೀತಿಗಳು, ಸಂಪ್ರದಾಯಗಳು ಕಾಲಮಾನಕ್ಕೆ ತಕ್ಕಂತೆ ಬದಲಾವಣೆ ಹೊಂದುತ್ತಾ ಪ್ರಗತಿಯ ದಾಪುಗಾಲು ಹಾಕುತ್ತವೆ. ಯಾವುದೇ ಸಮಾಜವು ಇದರಿಂದ ಹೊರತಾಗಿಲ್ಲೆಂಬುದು ಸ್ಪಷ್ಟ.

ಸಂಸ್ಕೃತಿ ಎಂಬ ಪದವನ್ನು ಇಂಗ್ಲಿಷಿನ ಕಲ್ಚರ್ ಎಂಬ ಶಬ್ದ ಉಪಯೋಗಿಸಿ ಬಳಸಲಾಗುತ್ತದೆ. ಇದು ಲ್ಯಾಟಿನ್ ಭಾಷೆಯ 'ಕಲ್ಟ್' ಎಂಬ ಪದದಿಂದ ಬಂದಿದೆ. ಈ ಪದದ ಅರ್ಥ ಗೌರವಿಸು, ಪೂಜಿಸು, ಸೇವೆಮಾಡು ಎಂದಾಗುತ್ತದೆ. ಇಂದು ಈ ಶಬ್ದವು ನಾನಾ ಜನಾಂಗಗಳ ಸಂಪ್ರದಾಯಗಳ ಜೀವನಕ್ರಮಗಳ ಸೂಚಕವಾಗಿ ಬಳಸಲಾಗುತ್ತದೆ. ಡಿ.ವಿ.ಜಿ.ಯವರ ಪ್ರಕಾರ ''ಜೀವನದ ಪ್ರತಿಯೊಂದು ಸನ್ನಿವೇಷದಲ್ಲೂ ಮನೋಭಾವವು ವರ್ತನೆಯು ಔಚಿತ್ಯಪೂರ್ಣವಾಗುವಂತೆ ಮಾಡುವ ಪ್ರಯತ್ನವೇ ಸಂಸ್ಕೃತಿ.'' ಅದರಂತೆ ಹಿರಿಯರ ಪ್ರಕಾರ ಸಂಸ್ಕಾರದಿಂದ ರೂಪಿತವಾಗಿರುವ ಸಮ್ಯಕ್ ಕಾಂತಿ ಸಂಸ್ಕೃತಿ, ಎಲ್ಲದರಲ್ಲಿಯೂ ಪರಿಶುದ್ಧತೆಯನ್ನು ಕಂಡು ಸಂತೋಷ ಪಡುವುದೇ ಸಂಸ್ಕೃತಿ. ಒಟ್ಟಿನಲ್ಲಿ ಅಂತರಂಗದ ಪರಿಮಳ, ಇದುವೇ ಉತ್ತಮ ಸಂಸ್ಕಾರ ಎಂದೆನಿಸುತ್ತದೆ. ಸಂಸ್ಕಾರ ಹೊಂದಿದ ಕುಟುಂಬಗಳು ಸಂಸ್ಕಾರಯುತ ಸಮಾಜವನ್ನು ನಿರ್ಮಾಣ ಮಾಡಬಲ್ಲವು.

ಇಂಥ ಸಂಸ್ಕಾರಯುತ ಸಮಾಜದಲ್ಲಿ ಗಾಣಿಗ ಸಮಾಜವು ಒಂದು ಗಾಣದಿಂದ ತೆಗೆಯಲ್ಪಟ್ಟ ಎಣ್ಣೆಯಿಂದ ಜ್ಯೋತಿ ಬೆಳಗಿಸುವುದು, ದೇವರ ಮುಂದೆ ಸದಾ ನಂದಾದೀಪ, ಆರತಿ ಬೆಳಗಿಸುವುದು ಶುಭ ಸಂಕೇತದ ಪವಿತ್ರ ಕಾಯಕ. ಇಂದಿಗೂ ಮಹಾನವಮಿ ಹಬ್ಬದಲ್ಲಿ ದೇವರನ್ನು ಶೃಂಗಾರಮಾಡಿ ಕೂಡಿಸಿ ದೇವರ ಮುಂದೆ ಎಣ್ಣೆ ದೀಪದ ಜ್ಯೋತಿ ಬೆಳಗಿಸುವುದು ವಾಡಿಕೆ ಅಥವಾ ಸಂಪ್ರದಾಯ. ಈ ದೀಪವನ್ನು ಆರದಂತೆ ನೋಡಿಕೊಳ್ಳುತ್ತಾರೆ. ಅಡಿಗೆಗೆ ಎಣ್ಣೆ ಎಷ್ಟು ಅವಶ್ಯ ಅಷ್ಟೇ ಊರಿಗೊಂದು ಗಾಣಿಗ ಮನೆತನ ಇರಲೇಬೇಕೆಂಬುದು ಪ್ರತೀತಿ.

ಅನಾದಿ ಕಾಲದಿಂದಲೂ ಗಾಣದ ಎಣ್ಣೆಯ ಕಾಯಕ ಕೈಗೊಂಡವರಿಗೆ ''ಖರೇ ಗಾಣಿಗರು'' ಗಾಣದ ಕಾಯಕ ಮಾಡಿ ಸಜ್ಜನಿಕೆಯ ನಡವಳಿಕೆದಾರರಿಗೆ ''ಸಜ್ಜನ ಗಾಣಿಗರು'' ಕಲ್ಲಿನ ಗಾಣದ ಎಣ್ಣೆಯನ್ನು ವ್ಯಾಪಾರ

ಮಾಡಿದ ಜನಾಂಗಕ್ಕೆ ''ಕಲಶೆಟ್ಟಿ'' ಗಾಣಿಗರು. ಗಾಣದ ಕಾಯಕದೊಂದಿಗೆ ಶೀಲಕ್ಕೆ ಒತ್ತು ನೀಡಿದ ಗಾಣಿಗರಿಗೆ ''ಶೀಲವಂತ ಪಂಚಮ ಗಾಣಿಗರು'' ಎಂದು ಹೆಸರನ್ನು ಹೊತ್ತು ನಮ್ಮ ಜಿಲ್ಲೆ ಅಥವಾ ನೆರೆಯ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಅದರಂತೆ ಇಂದು ಕರ್ನಾಟಕದಲ್ಲಿ ಬೇರೆ ಕಡೆಯಿಂದ ಬಂದು ನೆಲೆಸಿದ ಹಲವಾರು ಒಳಪಂಗಡಗಳು ಇಂತಿವೆ,

* **ಖರೇ ಗಾಣಿಗರು:** ಮುಂಬಯಿ ಕರ್ನಾಟಕ ಅಥವಾ ಹೈದ್ರಾಬಾದ ಕರ್ನಾಟಕದಲ್ಲಿ ಬಹಳಷ್ಟು ಜನ ಇರುತ್ತಾರೆ, ಅದರಲ್ಲೂ ವಿಜಾಪುರ - ಬಾಗಲಕೋಟೆ ಜಿಲ್ಲೆಯಲ್ಲಿ ಹಾಗೂ ಮೈಸೂರು ಜಿಲ್ಲೆಯಲ್ಲಿ ಖರೇ ಗಾಣಿಗರು ದಟ್ಟವಾಗಿ ಇರುತ್ತಾರೆ, ಇವರು ಲಿಂಗ ಧರಿಸುತ್ತಾರೆ.
* **ಸಜ್ಜನ ಗಾಣಿಗರು:** ಉತ್ತರ ಕರ್ನಾಟಕ ಅಥವಾ ಹೈದ್ರಾಬಾದ ಕರ್ನಾಟಕದಲ್ಲಿ ಬಹಳಷ್ಟು ಜನ ಇರುತ್ತಾರೆ. ಚಿತ್ರದುರ್ಗ, ಜಿಲ್ಲೆಯ ೪ ತಾಲ್ಲೂಕುಗಳಲ್ಲಿ ಸಜ್ಜನ ಗಾಣಿಗರಿದ್ದಾರೆ. ಅಂದರೆ ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಸಜ್ಜನ ಗಾಣಿಗರು ಇದ್ದು ಹೊಸದುರ್ಗ ಅಥವಾ ಹೊಳಲ್ಕೆರೆಗಳಲ್ಲಿ ಜ್ಯೋತಿ ಗಾಣಿಗರಿದ್ದಾರೆ. ಸಜ್ಜನ ಗಾಣಿಗರ ಜಾತಿ ಕಲ್ಯಾಣ ಪಟ್ಟಣದಲ್ಲಿ ಉದ್ಭವಿಸಿತೆಂದು ಬಸವೇಶ್ವರರಿಂದ ಸಂಘಟಿತರಾದೆವೆಂದು ಅನ್ನುತ್ತಾರೆ. ಇವರು ಲಿಂಗಧರಿಸುತ್ತಾರೆ. ವೀರಶೈವ ಧರ್ಮವು ಇವರ ಧರ್ಮವಾಗಿದೆ.
* **ಜ್ಯೋತಿ ನಗರ ಉಳ್ಳಾರು:** ಅಯೋಧ್ಯಾಪುರದವರು ಕರ್ನಾಟಕಕ್ಕೆ ಉತ್ತರ ಭಾರತ ಅಥವಾ ಆಂದ್ರದಿಂದ ವಲಸೆ ಬಂದವರೆಂದು ಅಂದುಕೊಳ್ಳುತ್ತಾರೆ. ಇವರು ಜನಿವಾರ ಧರಿಸುತ್ತಾರೆ.
* **ಶ್ರೀ ಜ್ಯೋತಿಫಣ ಗಾಣಿಗರು:** ಮೈಸೂರು, ಮಂಡ್ಯ, ಹಾಸನ, ಚಿಕ್ಕಮಂಗಳೂರು ಹಾಗೂ ಶಿವಮೊಗ್ಗ ಜಿಲ್ಲೆಗಳಲ್ಲಿ ವಾಸಮಾಡುತ್ತಾರೆ. ಇವರು ಲಿಂಗ, ಜನಿವಾರ, ಧರಿಸುವುದಿಲ್ಲ.
* **ಶೆಟ್ಟಿ ಗಾಣಿಗರು:** ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಾರೆ.
* **ವಾಣಿಯ ಗಾಣಿಗರು:** ತಮಿಳು ನಾಡಿನಿಂದ ಬಂದವರು ಹಳೆಮೈಸೂರಿನ ಪ್ರದೇಶಗಳಲ್ಲಿ ವಾಸಿಸುತ್ತಾರೆ. ವ್ಯಾಪಾರ ಇವರ ಮುಖ್ಯ ಉದ್ಯೋಗವಾಗಿದೆ.
* **ದೇವ ಗಾಣಿಗರು:** ಆಂದ್ರದಿಂದ ಕರ್ನಾಟಕಕ್ಕೆ ವಲಸೆ ಬಂದವರು. ಕರ್ನಾಟಕದಲ್ಲಿ ತುಮಕೂರು, ಬಳ್ಳಾರಿ, ಕೋಲಾರ, ಬೆಂಗಳೂರು ಜಿಲ್ಲೆಗಳಲ್ಲಿ ವಾಸಮಾಡಿದ್ದಾರೆ.
* **ಚೆಟ್ಟಿಯಾರ ಗಾಣಿಗರು:** ತಮಿಳುನಾಡಿನಿಂದ ಬಂದವರು. ಇವರು ಯಾವಾಗಲೂ ಹೋಲ್‌ಸೇಲ್ ವ್ಯಾಪಾರ ಮಾಡುತ್ತಾರೆ.
* **ಗಂಡ್ಲರು:** ಆಂದ್ರದಲ್ಲಿ ವಾಸವಾಗಿರುತ್ತಾರೆ. ಕರ್ನಾಟಕದಲ್ಲಿ ವಿರಳ.
* **ಸಾಹೂ ಗಾಣಿಗರು:** ಉತ್ತರ ಹಿಂದೂ ಸ್ಥಾನದಲ್ಲಿ ವಾಸಿಸುತ್ತಾರೆ.
* **ತೇಲಿ ಗಾಣಿಗರು:** ತಮಿಳುನಾಡಿನಿಂದ ಬಂದವರು. ಕರ್ನಾಟಕದಲ್ಲಿ ಅತಿ ವಿರಳರಾಗಿದ್ದಾರೆ.

ಇಡೀ ದೇಶದಲ್ಲಿ ಗಾಣಿಗರ ಒಳಪಂಗಡಗಳನ್ನು ಗಮನಿಸಿದರೆ ಸುಮಾರು ೨೦ ಕೋಟಿ ಜನ ಇರಬಹುದೆಂದು ಅಂದಾಜು ಮಾಡಲಾಗಿದೆ.

ಎರಡು ಎತ್ತುಗಳನ್ನು ತಮ್ಮ ಗಾಣಕ್ಕೆ ಹೂಡುವರು ಹಿಗ್ಗಾಣಿಗರು,ಇವರದು ಕಲ್ಲಿನ ಗಾಣ. ಎರಡೆತ್ತಿನ ನೊಗ, ಒಂದೆತ್ತು ತಮ್ಮ ಗಾಣಕ್ಕೆ ಹೂಡುವವರು ಕಿರಿಗಾಣಿಗರು ಅಥವಾ ಕರಿಗಾಣಿಗರು. ಇವರ ಗಾಣ ಕಟ್ಟಿಗೆಯದು. ಹೀಗೆ ವಿವಿಧ ಪಂಗಡಗಳು ಗಾಣದ ಮೂಲಕ ಎಣ್ಣೆತೆಗೆದು ತಮ್ಮ ಬೆಳಕನ್ನು ವಿಶ್ವದಾದ್ಯಂತ ಪಸರಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಭಾರತದಲ್ಲಿಯೂ ಕೂಡ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ರೀತಿಯಿಂದ ಕರೆಯುತ್ತಾರೆ. ಕರ್ನಾಟಕದಲ್ಲಿ ಗಾಣಿಗ, ಜ್ಯೋತಿ, ತೇಲಿ ಎಂದೂ ಆಂಧ್ರ ಪ್ರದೇಶದಲ್ಲಿ ಗಾಂಡ್ಲೆ ಎಂದೂ, ಕೇರಳ ರಾಜ್ಯದಲ್ಲಿ ಚಟ್ಟಿ, ಚಟ್ಟಿಯಾರ ಎಂದೂ, ತಮಿಳುನಾಡಿನಲ್ಲಿ ವರೆಮನ್ ಎಂದೂ ಮಹಾರಾಷ್ಟ್ರ ಮತ್ತು ಗುಜರಾತದಲ್ಲಿ ತೇಲಿ ಎಂದೂ ಬಿಹಾರ ಮತ್ತು ಒರಿಸ್ಸಾ ರಾಜ್ಯಗಳಲ್ಲಿ 'ಸಾಹೂ' ಎಂದೂ, ಉತ್ತರ ಪ್ರದೇಶ ಅಥವಾ ಮಧ್ಯ ಪ್ರದೇಶದಲ್ಲಿ ಗುಪ್ತಾ ಎಂದೂ, ಬಂಗಾಳದಲ್ಲಿ ಜ್ಯೋತಿ ಎಂದೂ ಕರೆಯಲ್ಪಡುತ್ತಾರೆ.

ಭಾರತದ ತುಂಬೆಲ್ಲ ಗಾಣಿಗ ಸಮಾಜದವರು ಇದ್ದಾರೆ. ಇವರೆಲ್ಲಾ ಒಂದೇ ಪಂಗಡಕ್ಕೆ ಸೇರಿದವರು. ಏಕೆಂದರೆ ಮೂಲತಃ ಗಾಣದಿಂದ ಎಣ್ಣೆಯನ್ನು ತೆಗೆದು ಸಮಾಜಕ್ಕೆ ಒದಗಿಸಬೇಕಾಗಿರುವದರಿಂದ ಎಲ್ಲೆಡೆಯಲ್ಲಿ ಕಾಣಸಿಗುತ್ತಾರೆ. ಆದರೆ ಇಂದು ಯಂತ್ರಯುಗದಲ್ಲಿರುವದರಿಂದ ತಮ್ಮ ಉದ್ಯೋಗದಲ್ಲಿ ಯಶಸ್ಸನ್ನು ಕಾಣಲು ಎಲ್ಲಾ ಸಮಾಜದವರು ಎಣ್ಣೆಯನ್ನು ತೆಗೆಯುತ್ತಿದ್ದಾರೆ.

ಮಾನವ ತನ್ನ ಹೊಟ್ಟೆಯ ಪಾಡಿಗಾಗಿ ವಂಶ ಪರಂಪರೆಯಾಗಿ ಉದ್ಯೋಗ ಮಾಡುತ್ತಾ ಬಂದಿರುವದರಿಂದ ಆಯಾ ಉದ್ಯೋಗಗಳೇ (ಕಸುಬು) ಜಾತಿನಿರ್ಮಾಣಕ್ಕೆ ಕಾರಣವಾದವು ಉದಾ,

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ

ಹಾಸನಿಕ್ಕಿ ಸಾಲಿಗನಾದ, ವೇದವನೋದಿ

ಬ್ರಾಹ್ಮಣನಾದ.........................

ಎನ್ನುವ ವಚನವು ನೈಜರೂಪವನ್ನು ಪ್ರತಿನಿಧಿಸುತ್ತದೆ. ಒಂದೊಂದು ಕೆಲಸವನ್ನು ಮೇಲು ಕೀಳು ಎನ್ನದೆ ಕರ್ತವ್ಯನಿಷ್ಟರಾದಾಗ ಎಲ್ಲರೂ ಸಮಾನರೆಂದು ತಿಳಿಯಬೇಕಾದುದು ನ್ಯಾಯ. ಆದರೆ ಹಾಗಾಗದೇ ಕಾರ್ಯದಿಂದ ಜಾತಿಗಳು ಸಮಾಜದಲ್ಲಿ ಕಬ್ಜಾ ವಹಿಸಿಕೊಂಡಿವೆ. ಇದರಿಂದ ನಮ್ಮ ಕುಲವೇ ಶ್ರೇಷ್ಠ ಎಂದು ಹೇಳಿಕೊಳ್ಳುತ್ತವೇ ವಿನಃ ನಾವು ಮಾಡುವ ಕಾರ್ಯಗಳು ಶ್ರೇಷ್ಠ ಎಂದು ಹೇಳುವುದಿಲ್ಲ. ಆದರೆ ನಮ್ಮ ವ್ಯಕ್ತಿತ್ವದ ವಿಕಸನವಾಗುವುದು ನಮ್ಮ ಕಾರ್ಯದಿಂದ ಮಾತ್ರ. ದುಡಿಮೆಯೇ ದುಡ್ಡಿನ ತಾಯಿ. ಕಾಯಕವೇ ಕೈಲಾಸ. ಕೈ ಕೈಸರಾದರೆ ಬಾಯಿ ಮೊಸರು ಈ ನಾಣ್ಣುಡಿಗಳು ಸಮಾಜದಲ್ಲಿ ನಿಷ್ಠೆಯಿಂದ ಕೆಲಸ ಮಾಡುವವರಿಗೆ ಅನ್ವಯವಾಗುತ್ತವೆ. ಇವರಲ್ಲಿ ಗಾಣಿಗ ಸಮಾಜದವರು ಪ್ರಮುಖರೆನ್ನಿಸಿಕೊಳ್ಳುತ್ತಾರೆ,

ಏಕೆಂದರೆ ಸರ್ವಜ್ಞ,

ಜಾಣ ಜಾಣಗೆ ಲೇಸು, ಕೋಣ ಕೋಣಗೆ ಲೇಸು,

ನಾಣ್ಯವದು ಲೇಸು ಲೋಕಕ್ಕೆ, ಊರವರಿಗೆ

ಗಾಣಿಗನು ಲೇಸು ಸರ್ವಜ್ಞಾ,

ಈ ತ್ರಿಪದಿಯನ್ನು ಗಮನಿಸಿದಾಗ ಅವನ ಅವಶ್ಯಕತೆಯನ್ನು ಎತ್ತಿ ತೋರಿಸುತ್ತದೆ. ಯಾವುದೇ ಸಮಾಜದಲ್ಲಿ ವ್ಯಕ್ತಿ ಬೇಕಾದವನಾಗಬೇಕಾದಲ್ಲಿ ಅವನ ಕಾಯಕ, ಪರಸ್ಪರ ನಂಬಿಕೆ, ನಿಷ್ಠೆ ಪ್ರಮುಖ ಪಾತ್ರವಹಿಸುತ್ತವೆ. ಅದಕ್ಕಾಗಿ ಊರಿನಲ್ಲಿ ಆತನು ಇದ್ದರೆ ಲೇಸು ಎಂದು ಅನಿಸಿಕೊಳ್ಳುತ್ತಾನೆ. ಆದರೆ ನಮ್ಮ ಸುತ್ತಮುತ್ತ ಇಲ್ಲಿ ಎರಡು ಪ್ರಮುಖವಾದ ಒಳಪಂಗಡಗಳು ವಿಶೇಷವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ಎದ್ದು ಕಾಣಿಸುತ್ತವೆ, ೧. ಸಜ್ಜನ ಗಾಣಿಗರು. ೨. ಜ್ಯೋತಿ ಗಾಣಿಗರು,

**೧. ಸಜ್ಜನ ಗಾಣಿಗರು**: ಸಜ್ಜನ ಎಂದರೆ ಸತ್ಕುಲೀನ ಸತ್ಪುರುಷ. ಒಳ್ಳೆಯ ನಡತೆ, ಸೌಜನ್ಯ ಇರುವವರನ್ನು ಸಜ್ಜನರು ಎಂದು ಕರೆಯಬಹುದು.ಅಂತೆಯೇ ಸರ್ವಜ್ಞ

ಸಜ್ಜನ ಸಂಗವದು ಹೆಜ್ಜೇನು ಸವಿದಂತೆ

ದುರ್ಜನರ ಸಂಗದೊಡನಾಟ ಬಚ್ಚಲಿನ

ರೊಜ್ಜಿನಂತಿಕ್ಕು ಸರ್ವಜ್ಞ,

ಇಲ್ಲಿ ಒಂದು ಜಾತಿಯನ್ನು ಕುರಿತು ಹೇಳಿರುವುದಲ್ಲ. ಪ್ರತಿಯೊಬ್ಬರು ಸಮುದಾಯ ಸಮಾಜದಲ್ಲಿ ಸಜ್ಜನನಾಗಿ ಬಾಳಬೇಕೆಂಬುದೇ ಇದರ ತಾತ್ಪರ್ಯ. ಇವರು ಕೂಡ ಸತ್ಯದ ಪಾಲನೆಯ ಜನರು ಎಂದು ಹೇಳಬಹುದು. ದುಷ್ಟ ಶಕ್ತಿಗಳಿಗೆ ಶಿಷ್ಟರಾಗಿ, ಅಸತ್ಯವಂತರಿಗೆ ಸತ್ಯಶೀಲರಾಗಿ, ಅಜ್ಞಾನಿಗಳಿಗೆ ಸುಜ್ಞಾನಿಗಳಾಗಿ, ದುರ್ಜನರಿಂದ ದೂರವಾಗಿ ಸಾತ್ವಿಕತೆಯನ್ನು ಮೆರೆದು ಸಜ್ಜನರಾಗಿ ಹೊರ ಬಂದಿರಬಹುದು. ಎಲ್ಲವೂ ಅಳಿದರೂ ಸತ್ಯ ಮಾತ್ರ ಉಳಿಯುತ್ತದೆ. ಅಂತೆಯೇ ಮಂಡೂಕ ಉಪನಿಷತ್ತಿನಲ್ಲಿ ''ಸತ್ಯಮೇವ ಜಯತೆ'' ಎಂಬುದು ಇದೆ. ಕೊನೆಗೆ ಸತ್ಯವೇ ಗೆಲ್ಲುವುದು ಇದು ಶಾಶ್ವತ. ಅಂತಹ ಜನರು ಮರೆಯಾದರೂ ಅವರು ಮಾಡಿರುವ ಕಾರ್ಯಗಳು ಉಳಿಯಬಲ್ಲವು.

ಸಜ್ಜನರಲ್ಲಿ ಒಂದರಿಂದ ಹನ್ನೆರಡು ಗಡಗ (ಕಡಗ)ಗಳ ಬೇಧಮಾಡಿಕೊಂಡು ತಮ್ಮೊಳಗೆ ವಿವಾಹ ಸಂಬಂಧಗಳನ್ನು ಮಾಡಿದ್ದು ರೂಢಿಯಾಗಿದೆ. ಹೀಗಾಗಿರುವದರಿಂದ ಸಜ್ಜನ ಗಾಣಿಗರು ಉಳಿದ ಪಂಗಡದವರ ಜೊತೆ ವಿವಾಹ ಸಂಬಂಧಗಳನ್ನು ಮಾಡಲಿಲ್ಲ. ಇವರಲ್ಲಿ ವಿಧವೆಯರು ಪುನರ್ವಿವಾಹ ಮಾಡಿಕೊಳ್ಳದಂತೆ ಬಂಧನವಿದೆ. ಇದನ್ನು ಮೀರಿದರೆ ಸಮಾಜದಿಂದ ಬಹಿಷ್ಕೃತರಾದ ಉದಾಹರಣೆಗಳು ಇವೆ. ಈ ಕಾರಣಕ್ಕಾಗಿ ಪ್ರತ್ಯೇಕವಾಗಿಯೇ ಮುಂದುವರೆದಿದ್ದಾರೆ. ವೀರಶೈವ ಒಳಪಂಗಡಗಳಲ್ಲಿ ಇಂತಹ ಆಚರಣೆಗಳನ್ನು ಕಾಣುತ್ತೇವೆ. ಅನಿಷ್ಟ ಸಂಪ್ರದಾಯಗಳು ಸಜ್ಜನ ಗಾಣಿಗರಲ್ಲಿ ಇನ್ನೂ ಮನೆ ಮಾಡಿಕೊಂಡಿರುವುದರಿಂದ ಸಮುದಾಯಕ್ಕೂ, ಸಮಾಜಕ್ಕೂ, ದೇಶಕ್ಕೂ ಪ್ರಗತಿಯಿಲ್ಲ, ಗೊಡ್ಡು ಆಚರಣೆಗಳು ಹೆಡ್ಡನನ್ನಾಗಿ ಮಾಡಿವೆ.

ಹೆಂಡತಿ ಸತ್ತಾಗ ಗಂಡಿಗೆ ಮರುಮದುವೆ ಇದೆ. ಆದರೆ ಗಂಡ ಸತ್ತಾಗ ಹೆಣ್ಣಿಗೆ ಮರು ಮದುವೆ ಇಲ್ಲ. ಈ ತಾರತಮ್ಯ ಏಕೆ? ಸುಶಿಕ್ಷಿತರಾದರೂ ಇದರಿಂದ ನಮಗೇಕೆ ಹೊರಬರಲು ಸಾದ್ಯವಾಗಿಲ್ಲ. ನಂಬಿಕೆಗಳು, ಆಚರಣೆಗಳು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಬರುವಾಗ ಬಹಳಷ್ಟು ಬದಲಾವಣೆಯಾಗಬೇಕು. ಮನುಷ್ಯನಿಗೆ ನೆಮ್ಮದಿ, ಸಂತೋಷ ಕೊಡದ ಆಚರಣೆಗಳು ಇದ್ದು ವ್ಯರ್ಥ. ಮುಂದುವರೆಯುತ್ತಿರುವ ಯುಗದಲ್ಲಿ ನಾವಿಂದು ಕಾಲಿಟ್ಟಿರುವಾಗ ನಮ್ಮ ಮನೋಭಾವನೆಗಳು ಅಥವಾ ಕಾರ್ಯಗಳು ಬದಲಾಗಬೇಕೆಂಬುದೇ ಸತ್ಯವಾದ ಮಾತು. ಅಂದಾಗ ಮಾತ್ರ ನಮ್ಮ ಸಜ್ಜನಿಕೆಯು ಸಾರ್ಥಕವೆನ್ನಿಸುತ್ತದೆ. ಆದರೂ ಇನ್ನೂ ಸಂಪ್ರದಾಯ ಸಂಸ್ಕೃತಿಬದಲಾಗಬೇಕಿದೆ. ಅಂದರೆ ಒಳಪಂಗಡಗಳಲ್ಲಿಯ ವ್ಯತ್ಯಾಸ ತೋರದೆ ಗಾಣಿಗ ಸಮಾಜ ಒಂದು ಎಂಬುದನ್ನು ತೋರಿಸುವುದು ಅವಶ್ಯಕವಾಗಿದೆ. ಇಂದು ಬಹುಮಟ್ಟಿನ ಸಜ್ಜನ ಗಾಣಿಗ ಕಡಗದ ಕಟ್ಟಳೆ ಅಳಿದು ಪುನರ್ ವಿವಾಹಕ್ಕೆ ಆಸ್ಪದನೀಡಿದ್ದು ಎದ್ದು ಕಾಣುವುದು ಉಂಟು. ಇದು ಪ್ರಗತಿಯ ಲಕ್ಷಣ.

**ಖರೆಕುಲ ಗಾಣಿಗರು**: ಖರೆ ಕುಲ ಎನ್ನುವದು ಅವರು ಆಚರಿಸುವ ವ್ಯಕ್ತಿಯ ಮೂಲಕ ರೂಢಿ ನಾಮವಾಗಿ ಬಂದಿರಬಹುದು, ಏಕೆಂದರೆ ಕುಲ ಎನ್ನುವದು ಒಂದು ಜಾತಿಗೆ ಸೀಮಿತವಲ್ಲ,

ಕಾಗೆ ಒಂದಗುಳ ಕಂಡಡೆ

ಕರೆಯದೆ ತನ್ನ ಬಳಗವನು?

ಕೋಳಿ ಒಂದು ಕುಟಕ ಕಂಡಡೆ

ಕೂಗಿ ಕರೆಯದೆ ತನ್ನ ಕುಲವೆಲ್ಲವ

ಈ ವಚನದ ಮೂಲಕ ಸಾಮಾನ್ಯವಾಗಿ ಪಕ್ಷಿಕುಲ, ಪ್ರಾಣಿಕುಲ ಮಾನವಕುಲ ಎಂಬುದನ್ನು ವಿಶೇಷವಾದ ಗುಂಪಿಗೆ ಸೇರಿಸುತ್ತೇವೆ. ಇದರಿಂದ ಒಂದು ಗುಂಪು ಅಥವಾ ಸಮೂಹವನ್ನು ಪ್ರತಿನಿಧಿಸುತ್ತೇವೆ. ಅಂತೇ ಪಂಪ ಭಾರತದಲ್ಲಿ ಛಲಂ ಒಂದೆ ಕುಲಂ, ಅಣ್ಮೆ ಒಂದೆ ಕುಲಂ, ಅಭಿಮಾನ ಒಂದೆ ಕುಲಂ ಎಂದು ಗುಣಗಳನ್ನು ಕುರಿತು ಹೇಳಲಾಗಿದೆ. ಅಂದರೆ ಮಾನವರಲ್ಲಿಯೇ ಕೆಲವರು ತಪ್ಪುದಾರಿ ತುಳಿದಾಗ, ದುಷ್ಟ ಶಕ್ತಿಗಳು ಮನೆ ಮಾಡಿದಾಗ ಕೂಪಮಂಡೂಕದಂತೆ ಹಿಂಬಾಲಿಸಿದಾಗ ಕೆಲವರು ಅದರಿಂದ ಹೊರಬಂದು ತಮ್ಮ ಸತ್ಯವನ್ನು ಪ್ರದರ್ಶಿಸಿರಬಹುದು. ಛಲ, ನಿಷ್ಠೆ, ಸತ್ಯ ತೋರಿಸಿದ್ದಕ್ಕಾಗಿ ಖರೆ ಎಂಬುದನ್ನು ವಿಶೇಷವನ್ನಾಗಿಬಳಸಿಕೊಂಡು ಖರೆ ಕುಲದವರಾಗಿ ಹೊರಬಂದಿರಬಹುದು, ಇದರ ಬಗ್ಗೆ ನಿಖರವಾದ ಸಂಶೋಧನೆ ನಡೆಯಬೇಕಾಗಿದೆ.

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರ ಧಾರ್ಮಿಕ ಕ್ರಾಂತಿ ಗಾಣಿಗ ಜನಾಂಗದ ಮೇಲೆ ಗಾಢವಾದ ಪ್ರಭಾವ ಬೀರಿದೆ. ಅಂದಿನ ಕಾಲದಲ್ಲಿ ಕ್ರಾಂತಿಗೆ ಸ್ಪಂದಿಸಿ ಲಿಂಗವಂತ ಸಮಾಜದಲ್ಲಿ ಬೆರತುಹೋದ ಗಾಣಿಗ ಜನಾಂಗ ಮುಂದೆ ಭಿನ್ನವಾಗಿ ಗುರುತಿಸಿತು. ಗಾಣಿಗ ಜನಾಂಗದವರು ಬಾಲಾಢ್ಯರು, ಶೂರರು, ಅಧೀರರು ಆಗಿದ್ದರಿಂದ ಬಹು ಜನರನ್ನು ಸೈನಿಕರಾಗಿ ಆಯ್ಕೆ ಮಾಡಿದ್ದುಂಟು. ಖರೆ ಕುಲದವರು ಕ್ರಾಂತಿಯಲ್ಲಿ

ಭಾಗವಹಿಸಿ ಹೋರಾಡಿದರು. ಆದರೆ ಹೋರಾಡದೇ ಇದ್ದು ಸಜ್ಜನಿಕೆಯನ್ನು ತೋರಿಸಿದವರು ಸಜ್ಜನರು ಆಗಿರಬಹುದು. ಮಾನವೀಯ ದೃಷ್ಟಿಯಿಂದ ಖರೆಕುಲ ಸಮಾಜದಲ್ಲಿ ವಿಧವೆಯರಿಗೆ ಮರು ಮದುವೆ ಇದೆ. ಆದರೆ ಸಜ್ಜನರಲ್ಲಿ ಮರು ಮದುವೆಗೆ ಮಹಿಳೆಯರಿಗೆ ಅವಕಾಶವಿಲ್ಲ. ಅದಕ್ಕಾಗಿ ಸಜ್ಜನರು ಹೋರಾಟ ಮಾಡದೇ ಸರಳ ಸಜ್ಜನಿಕೆಯ ರೀತಿಯಿಂದ ಸಾತ್ವಿಕವಾಗಿ ಇರುವುದು ಸೂಕ್ತವೇನು ಎಂದು ಅನಿಸಿ ನಿರ್ಧಾರ ತೆಗೆದುಕೊಂಡಿರಬೇಕು.

೧೮ನೇ ಶತಮಾನದ ಉತ್ತರಾರ್ಧದಲ್ಲಿ ಬಾಜಿರಾವನ ಮಗ ಪೇಶ್ವೆ ಮಾಧವರಾವ್- ವೀರನೂ ಸಮರ್ಥನೂ ಆಗಿದ್ದನು. ಆತ ಗಾಣಿಗ ಜನಾಂಗಕ್ಕೆ ಹೋರಾಡಲು ಕರೆ ನೀಡಿದನು. ಖರೆ ಅನಿಸಿಕೊಂಡ ಇವರು ಹೋರಾಟಮಾಡಿದರು. (ಹಿರಿಯರು ಹೇಳಿದ ಮಾತು) ಈ ರೀತಿ ಇವರು ಖರೇಕ ಬಡಿದಾಡಿದವರು. ಖರೇಕ ಸಾಯುವವರು ಎಂದು ಹೇಳಬಹುದು. ಅದಕ್ಕಾಗಿ 'ಖರೆ' ಎಂದರೆ ಸತ್ಯ ಎಂದು ಅರ್ಥ. ಎಲ್ಲಿ ಖರೆ ಇದೆ ಅಲ್ಲಿ ಸತ್ಯವಿದೆ. ಎಲ್ಲಿ ಸತ್ಯ ಇದೆ ಅಲ್ಲಿ ಶಿವಂ ಇದೆ. ಹೀಗೆ ಸರ್ವವ್ಯಾಪಿಯಾಗಿ ಆ ಶಿವಂ ಗೋಚರಿಸುತ್ತದೆ. ಅದುವೇ ಶಾಶ್ವತವಾಗಿ ಉಳಿಯುತ್ತದೆ.

ಖರೆಕುಲ ಗಾಣಿಗ, ಸಜ್ಜನ ಗಾಣಿಗ ಇವೆರಡು ಒಳ ಪಂಗಡಗಳಲ್ಲಿ ಭಿನ್ನತೆ ಕಂಡರೂ ವೃತ್ತಿ ಮಾತ್ರ ಒಂದು ಎಂಬುದನ್ನು ಮರೆಯಬಾರದು. ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಯಾವುದೇ ವೃತ್ತಿ ತೆಗೆದುಕೊಳ್ಳಲಿ ಆತನು ನಿಷ್ಠೆಯಿಂದ ಕೆಲಸ ಮಾಡುತ್ತಾನೆ. ಜೊಳ್ಳು ಪೊಳ್ಳು ಇರುವದನ್ನು ಗಾಳಿಗೆ ತೂರಿ ಗಟ್ಟಿ ಇರುವುದನ್ನು ಹಿಡಿದುಕೊಂಡು ಗಾಣ ಹೊಡೆಯುವುದರ ಮೂಲಕ ಶಿರಸಾವಹಿಸಿ ತಮ್ಮ ಕಾರ್ಯ ನಿರ್ವಹಿಸುತ್ತಾರೆ. ಎಣ್ಣೆ ಕತ್ತಲೆಯನ್ನು ಹೋಗಲಾಡಿಸಿ ಬೆಳಕನ್ನು ನೀಡುವ ಸಾಮರ್ಥ್ಯ ಹೊಂದಿದೆ. ಅದರಂತೆ ತನ್ನನ್ನು ತಾನು ಇಲ್ಲವಾಗಿಸಿ ಬೇರೆಯವರಿಗೆ ಬೆಳಕು ಕೊಡುವ ಗುಣದೊಂದಿಗೆ ತನ್ನ ಗೌರವವನ್ನು ಎತ್ತಿ ಹಿಡಿಯುವರು. ಅಜ್ಞಾನದ ಕತ್ತಲೆಗೆ ಸುಜ್ಞಾನದ ಬೆಳಕು ನೀಡುತ್ತದೆ. ಇದಕ್ಕೆ ಮುಖ್ಯ ಕಾರಣ ಆಡಿಸಿ ಆಳವಾದ ನಂಬಿಗೆ. ಈ ನಂಬಿಗೆಯು ಇಂಚುಗಿಯಾಗಿ ಗಾಣದ ಮಧ್ಯದಲ್ಲಿ ಲಕ್ಷ್ಮಿಯನ್ನೋ, ಲಿಂಗವನ್ನೋ, ಪರಮಾತ್ಮನನ್ನೋ, ಸಂಕೇತ ರೂಪದಲ್ಲಿ ಬಳಸುವುದುಂಟು. ಇದಕ್ಕಾಗಿಯೇ ''ಶಿವಶಕ್ತಿ ಗಾಣಪ್ರದಂ'' ಎಂಬ ಉಕ್ತಿ ಬಂದಿರಬಹುದು. ಇವರು ಕಾಯಕದಲ್ಲಿಯೇ ಶಿವಪಾರ್ವತಿಯರನ್ನು ಕಾಣುವ ಹಂಬಲ. ಕಾಯಕದಲ್ಲಿ ನಿರತನಾದರೆ, ಗುರು, ಲಿಂಗ, ಜಂಗಮ ಮರೆಯಬೇಕು. ಅಂದರೆ ದೇವರೇ ನಮ್ಮ ಹತ್ತಿರ ಬರಬೇಕು ವಿನಃ ನಾವೇ ಅವನ ಹತ್ತಿರ ಹೋಗುವದಲ್ಲ ಎಂಬ ಮಾತನ್ನು ನಾವು ಅರಿಯಬೇಕು, ಅದನ್ನು ತಿಳಿದ ಸರ್ವಜ್ಞ

''ಗಾಣಿಗನು ಈಶ್ವರನ ಕಾಣನೆಂಬುದು ಸಹಜ
ವಾಣಾಂಕಧರನು ಧರೆಗೆ ಇಳಿಯಲವನಿಂದ
ಗಾಣವಾಡಿಸುವ ಸರ್ವಜ್ಞ''

ಈ ತನ್ನ ಕಾಯಕದಲ್ಲಿ ನಿರತನಾದಾಗ ಈಶ್ವರನೇ ಈ ಕಾರ್ಯನಡೆಸಿರುವನೇನೋ ಎಂಬ ಒಂದಾದ ನಂಬಿಗೆ, ಅಪಾರವಾದ ಶ್ರದ್ಧೆ. ಆದರೂ ಈಶ್ವರನೂ ಇಲ್ಲಿ ಕಾಣದೇ ಅಡಗಿರುವನು. ಅದೃಶ್ಯವಾಗಿದ್ದುಕೊಂಡು ಒಂದೇ ಸಮನೆ, ಕಾಯ, ವಾಚಾ, ಮನಸಾ, ನಿಷ್ಠೆಯಿಂದ ಕಾಯಕದಲ್ಲಿ ನಿರತನಾಗುವಂತೆ ಮಾಡಿರಬಹುದು. ಅದಕ್ಕಾಗಿ ಸರ್ವಜ್ಞ ಇವನ ನಿಷ್ಠೆ, ಪರಿಶ್ರಮ, ಕೆಲಸದಲ್ಲಿ ತಾದತ್ಮತೆ ಹಾಗೂ ಏಕಾಗ್ರತೆ ಕಂಡು ಏಣಾಂಕಧರನು (ಶಿವನು) ಭೂಮಿಗೆ ಇಳಿಯಲಿ ಅವನಿಂದ ಎಂದು ಹೇಳಿದ್ದಾನೆ. ಅವನಿಂದಾದರೂ ಈಶ್ವರನನ್ನು ಕಾಣುವ ಭಾಗ್ಯ ನಮ್ಮದಾಗಲಿ ಎಂದು ಹೇಳಿರುವಂತಿದೆ. ಅದರಂತೆ ನಾವು ಕೆಲಸ ಮಾಡೋಣ, ನಂತರ ಈಶ್ವರನನ್ನು ನೋಡಿ ಪುನೀತರಾಗೋಣ ಎಂಬುದೇ ತಾತ್ಪರ್ಯ. ಸರ್ವಜ್ಞನು ಎಲ್ಲ ವೀರಶೈವ ಒಳಪಂಗಡಗಳ ಬಗ್ಗೆಯೂ ವಿಮರ್ಶೆ ಮಾಡಿದ್ದಾನೆ. ದೇವರನ್ನು ಕಾಣಲು ಅವನ ವೃತ್ತಿಯನ್ನು ಕುರಿತು ಹೇಳಿರುವುದನ್ನು ನೋಡಿದರೆ ಅವನು ಕೈಗೊಂಡ ವೃತ್ತಿ ಗೌರವ, ಸಾಮರ್ಥ್ಯ, ಈ ಕಾಯಕ ಇರಲಾರದೇ ಬದುಕು ನಡೆಯಲಾರದ ಅನುಭವ ಆತನಿಗೆ ಗೋಚರಿಸಿರಬಹುದು. ಅದಕ್ಕಾಗಿ ಶರಣರು ಕೂಡಾ ''ಕಾಯಕವೇ ಕೈಲಾಸ'' ಎಂದು ಹೇಳಿರುವುದುಂಟು. ''ಕಾಯಕವೇ ದೇವರು'' ಎಂದಿರುವುದು ಸಹ ಇಲ್ಲಿ ಗೋಚರಿಸುತ್ತದೆ. ಕಾಯಕ ನಿಷ್ಠೆಗೆ ಮತ್ತೊಂದು ಹೆಸರೇ ಗಾಣಿಗ ಸಮುದಾಯವಾಗಿದೆ.

ಈ ಸಮಾಜದಲ್ಲಿ ಸಾಹಿತಿಗಳು, ಸಂತರು, ಶಿಕ್ಷಣ ತಜ್ಞರು, ಸಮಾಜ ಸುಧಾರಕರು, ದಾನಿಗಳು, ಪರೋಪಕಾರಿ ಜೀವಿಗಳು ಮತ್ತು ತ್ಯಾಗಿಗಳು ಆಗಿಹೋಗಿದ್ದಾರೆ. ಇವರಲ್ಲಿ ಮುಖ್ಯವಾಗಿ ಅದೃಶ್ಯ ಕವಿಗಳು, ಸದ್ಗುರು ಗಿರಿಮಲ್ಲೇಶ್ವರರು, ಕಡಕೋಳ ಮಡಿವಾಳಪ್ಪನವರು, ಎದ್ದು ಕಾಣುವಂತವರಾಗಿದ್ದಾರೆ.

ತೆರೆಯ ಮರೆಯಲ್ಲಿ ಉದ್ಯಮಿಗಳು, ಕೃಷಿ ತಜ್ಞರು, ರಾಷ್ಟ್ರಾಭಿಮಾನಿಗಳು, ಸ್ವಾತಂತ್ರ್ಯ ಯೋಧರು, ಶರಣರು, ಮಠಮಾನ್ಯ ಕಟ್ಟಿಕೊಂಡು ಜಂಗಮ ಸೇವೆ ಮಾಡಿದವರು ತಮ್ಮನ್ನು ತಾವಷ್ಟೇ ಅರಿಯದೆ ಪರರಿಗೋಸ್ಕರ ತಮ್ಮ ಜೀವನವನ್ನೇ ತ್ಯಾಗ ಮಾಡಿದ್ದಾರೆ.

ಪ್ರತಿಯೊಂದು ರಂಗದಲ್ಲಿ ತಾವು ಕೈಗೊಂಡು ಕಾರ್ಯಗಳನ್ನು ಯಶಸ್ವಿ ರೂಪದಲ್ಲಿ ಮಾಡಿ ತೋರಿಸಿದ್ದಾರೆ. ಖರೆಗೆ ಖರೇಹಚ್ಚೆ, ಸತ್ಯ ಹಾಗೂ ಸಜ್ಜನಿಕೆಯನ್ನು ಬದುಕಿನಲ್ಲಿ ಅಳವಡಿಸಿ ಸೈ ಎನಿಸಿಕೊಂಡಿದ್ದಾರೆ. ಗೊಡ್ಡು ಪುರಾಣ, ಸುಳ್ಳು ಡಾಂಭಿಕತೆ ಪೊಳ್ಳು ಮಾತುಗಳನ್ನು ಎಂದೆಂದೂ ಸೇರಲಾರರು. ಇವು ಒಂದು ವೇಳೆ ಅಳವಡಿಸಿಕೊಂಡಾಗ ಕ್ಷಣಿಕ ಸುಖ ನೀಡುತ್ತವೆ. ಆದರೆ ಧರ್ಮ ಮಾರ್ಗದಲ್ಲಿ ನಡೆದಾಗ ನಮ್ಮನ್ನು ಗುಣಗಳು ರಕ್ಷಣೆ ಮಾಡುತ್ತವೆ. ಅಂತಹ ಕಟ್ಟುಪಾಡಿನಲ್ಲಿ ಬೆಳೆದಿರುವ ಈ ಜನಾಂಗದ ಸಂಸ್ಕೃತಿಯು ನಮ್ಮ ಪ್ರಕೃತಿಯೊಂದಿಗೆ ಪ್ರವೃತ್ತಿಯಲ್ಲಿ ಹೊಂದಿಕೊಂಡು ಒಂದಾಗಿದೆ. ಇಂದು ಹಲವಾರು ಪಂಗಡಗಳಿದ್ದರೂ ಅವುಗಳನ್ನು ಒಂದುಗೂಡಿಸುವ ಕೆಲಸ ಆಗಬೇಕಾಗಿದೆ. ಅಂದರೆ ವೃತ್ತಿ, ಭೇಟಿ ಸಮನ್ವಯಗೊಳ್ಳಬೇಕು.

ಅಂದಾಗ ನಾವು ಪ್ರಗತಿ ಪಥದಲ್ಲಿ ಮುನ್ನಡೆಯಲು ಸಾಧ್ಯವಾಗುತ್ತದೆ. ಅದರಂತೆ, ಸಂಘ ಸಂಸ್ಥೆಗಳು ಮತ್ತು ಸಮ್ಮೇಳನಗಳು ಒಂದುಗೂಡಿ ಕೆಲಸ ಮಾಡಲು ಪ್ರೇರಕ ಶಕ್ತಿಗಳಾಗಿ ಕಾರ್ಯ ಮಾಡುತ್ತವೆ.

**ಸಜ್ಜನ ಗಾಣಿಗ ಸಮುದಾಯದ ಒಳಪಂಗಡಗಳು ಐದು ಬಳೆಯವರ ಪೈಕಿ**

**ಮನೆತನದ ಹೆಸರುಗಳು**

| ಮನೆತನದ ಹೆಸರುಗಳು | ಮನೆದೇವರ ಹೆಸರುಗಳು |
|---|---|
| ೧. ತುಪ್ಪದವರು | ಮಾವಿನಹಳ್ಳಿ ಬಸವೇಶ್ವರ, ನಾಯಕ ಹಟ್ಟಿ ತಿಪ್ಪೇರುದ್ರ ಸ್ವಾಮಿ, ವೀರಭದ್ರಸ್ವಾಮಿ |
| ೨. ತಿಪ್ಪನೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೩. ದರೋಜರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೪. ರಾಜಾನೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೫. ಗೌರಾನೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೬. ತಮ್ಮ ಗಾನಳ್ಳೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೭. ಜಂತ ಕಲ್ಲೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೧. ತುಡು ಮಾನೋರು | ವೀರಭದ್ರಸ್ವಾಮಿ |
| ೨. ವಾಲೇನೋರು | ವೀರಭದ್ರಸ್ವಾಮಿ |
| ೩. ಗುಮ್ಮನೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೪. ಗುಡಸನೋರು | ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| ೫. ಕೊಟ್ಟಾದವರು | ವೀರಭದ್ರಸ್ವಾಮಿ |
| ೬. ಸೂರಶೆಟ್ಟಿಯವರು | ವೀರಭದ್ರಸ್ವಾಮಿ |
| ೭. ದ್ಯಾವಕ್ಕೀರು | ಹುಲಿಗೇಶಮ್ಮ ಮತ್ತು ವೀರಭದ್ರಸ್ವಾಮಿ |
| ೧. ಯಲೆಯೋರು | ವೀರಭದ್ರಸ್ವಾಮಿ, ನಾಯಕನ ಹಟ್ಟಿ ತಿಪ್ಪೇಸ್ವಾಮಿ |
| ೨. ಹತ್ತಾಯೋರು | ಕೊಟ್ಟೂರು ಬಸವೇಶ್ವರ |
| ೩. ಕಣೇಕಲ್ಲೋರು | ವೀರಭದ್ರಸ್ವಾಮಿ |
| ೪. ಕುರುಗೋಡೋರು | ಕುರುಗೋಡು ಬಸವೇಶ್ವರ |
| ೫. ಕೊಡ್ಲಗೋರು | ವೀರಭದ್ರಸ್ವಾಮಿ |

| ಜೋಡಿ ಮನೆತನಗಳು ಅಥವಾ ಜಂಟಿ ಮನೆತನಗಳು | |
|---|---|
| ೧. ದ್ಯಾಮಚ್ಚೋರು | ಹುಲಿಗೇಶಮ್ಮ |
| ೨. ಹುಲಿಯಪ್ಪ, ದ್ಯಾಮಚ್ಚೋರು | |
| ೩. ಕೋಣನೋರು | ವೀರಭದ್ರಸ್ವಾಮಿ |
| ೪. ಸಂಕಾನೋರು | |
| ೫. ಸಂಕರ ಶೆಟ್ಟಿಯವರು | ವರವಿನ ಮಲ್ಲೇಶ್ವರ |
| ೬. ಬಾರೇರು | ಉಜ್ಜಯಿನಿ ಸಿದ್ದೇಶ್ವರ |
| | ವೀರಭದ್ರ ಸ್ವಾಮಿ ಮತ್ತು ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ |
| **ಜೋಡು ಬಳೆಯವರು (ಎರಡು ಬಳೆಯವರು)** | |
| ೧. ಶಿರಿವಾರದವರು | ನಂಜನಗೂಡಿನ ನಂಜುಡೇಶ್ವರ |
| ೨. ಧರಣಿಯವರು | ನಂಜನಗೂಡಿನ ನಂಜುಡೇಶ್ವರ |

**ತುಪ್ಪದವರು:** ಇವರು ಸಜ್ಜನ ಗಾಣಿಗರ ಒಂದು ಭಾಗವಾಗಿದ್ದು. ಪ್ರಾಂತೀಯತೆಗೆ ಅನುಗುಣವಾಗಿ ಮಾವಿನಹಳ್ಳಿ ಬಸವೇಶ್ವರ, ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ, ವೀರಭದ್ರಸ್ವಾಮಿ, ಮನೆದೇವರನ್ನು ಪೂಜಿಸುವವರಾಗಿದ್ದಾರೆ. ಊಟಕ್ಕೂ ಮತ್ತು ತುಪ್ಪಕ್ಕೂ ಸಂಬಂಧವಿದೆ. ತುಪ್ಪವಿಲ್ಲದ ಊಟ ಸ್ವಾರಸ್ಯಕರವಾಗಿರಲಾರದು. ಎಲ್ಲರೂ ತುಪ್ಪವನ್ನು ಊಟಕ್ಕೆ ಬಳಸುತ್ತಾರೆ.

ತುಪ್ಪದವರು ತುಪ್ಪದವರಲ್ಲಿ ವೈವಾಹಿಕ ಸಂಬಂಧಗಳು ಬೆಳೆಯುವುದಿಲ್ಲ. ಏಕೆಂದರೆ ಅವರು ಅಣ್ಣ ತಮ್ಮಂದಿರಾಗುತ್ತಾರೆ. ಆದ್ದರಿಂದ ತುಪ್ಪದವರು ತಮ್ಮ ಸಮುದಾಯವನ್ನು ಒಟ್ಟು ಬೇರೆ ಯಾವುದೇ ಸಜ್ಜನ ಗಾಣಿಗರಲ್ಲಿ ವೈವಾಹಿಕ ಸಂಬಂಧವನ್ನು ಬೆಳೆಸಬಹುದಾಗಿದೆ. ತುಪ್ಪದವರಿಗೆ ತಮ್ಮವರನ್ನು ಹೊರತು ಪಡಿಸಿ ಎಲ್ಲ ಸಜ್ಜನ ಒಳಪಂಗಡಗಳು ನೆಂಟರಾಗುತ್ತಾರೆ. ಆದ್ದರಿಂದ ಅದು ಎಲ್ಲ ಒಳಪಂಗಡಗಳ ಜೋಡಿ ವೈವಾಹಿಕ ಸಂಬಂಧವನ್ನು ಇಟ್ಟುಕೊಳ್ಳುತ್ತದೆ. ಇವರು ಹೆಚ್ಚಾಗಿ ಚಿತ್ರದುರ್ಗ ತಾಲ್ಲೂಕಿನ ಮಲ್ಲಾಪುರ ಗ್ರಾಮದಲ್ಲಿ ಕಂಡುಬರುತ್ತಾರೆ.

**ಜೋಡಿ ಮನೆತನಗಳು ಅಥವಾ ಜಂಟಿ ಮನೆತನಗಳು**

ಸಜ್ಜನ ಗಾಣಿಗರಲ್ಲಿ ಐದು ಬಳೆಯವರ ಪೈಕಿ ಮೂರು ಜಂಟಿ ಮನೆತನಗಳನ್ನು ಅಸ್ತಿತ್ವಕ್ಕೆ ತರಲಾಗಿದೆ. ಜಂಟಿ ಮನೆತನಗಳಲ್ಲಿ ಎರಡು ಸಮೂಹಗಳು ಆಚರಣೆಗಳಲ್ಲಿ ಒಂದೇ ರೀತಿಯಲ್ಲಿ ಆಚರಿಸುತ್ತಾರೆ. ಇಲ್ಲಿ

ಎರಡು ಮನೆತನಗಳಲ್ಲಿ ವೈವಾಹಿಕ ಸಂಬಂಧಗಳು ಜರುಗುವುದಿಲ್ಲ. ಕಾರಣ ಆ ಎರಡು ಸಮೂಹಗಳಲ್ಲಿ ಅಣ್ಣ ತಮ್ಮಂದಿರಂತೆ ವರ್ತಿಸುತ್ತಾರೆ. ಇವೆರಡು ಸಮೂಹಗಳಲ್ಲಿ ವೈವಾಹಿಕ ಸಂಬಂಧಗಳು ಬೆಳೆಯುವುದಿಲ್ಲ. ಉದಾ: ದ್ಯಾಮಚೋರು ಮತ್ತು ಹುಲಿಯಪ್ಪ ದ್ಯಾಮಚೋರು ಈ ಎರಡು ಮನೆತನಗಳ ಸದಸ್ಯರ ಮನೆ ದೇವರು ಒಂದೇ ಆಗಿದ್ದು ಕೌಟುಂಬಿಕವಾಗಿ ವೈವಾಹಿಕ ಸಂಬಂಧಗಳು ಬೆಳೆಯುವಂತಿಲ್ಲ. ಇವರನ್ನು ಹೊರತು ಪಡಿಸಿ ಉಳಿದ ಜೋಡಿ ಮನೆತನಗಳಾದ ಕೋಣನವರು, ಸಂಕಾನೋರು ಮತ್ತು ಸಂಕನ ಶೆಟ್ಟಿಯರು ಮತ್ತು ಬಾರೇರು ಈ ಜೋಡಿ ಮನೆತನಗಳಲ್ಲಿ ದ್ಯಾಮಚೋರು ಮತ್ತು ಹುಲಿಯಪ್ಪ ದ್ಯಾಮಚೋರು ವೈವಾಹಿಕ ಸಂಬಂಧವನ್ನು ಬೆಳೆಸಬಹುದಾಗಿದೆ ಕಾರಣ ಇವರುಗಳು ದ್ಯಾಮಚೋರು ಮತ್ತು ಹುಲಿಯಪ್ಪ ದ್ಯಾಮಚೋರು ನೆಂಟರಾಗಿದ್ದು ವೈವಾಹಿಕ ಸಂಬಂಧಗಳು ಬೆಳೆಯುತ್ತವೆ. ವೈವಾಹಿಕ ಸಂಬಂಧ ಇದೆ.

| | |
|---|---|
| ೧. ಹುಲಿಯಪ್ಪ ದ್ಯಾಮಚೋರು ಮತ್ತು ದ್ಯಾಮಚೋರು | ೧. ಕೋಣನವರು ಮತ್ತು ಸಂಕಾನೋರು<br>೨. ಸಂಕನ ಶೆಟ್ಟಿಯರು ಮತ್ತು ಬಾರೇರು |

ಅದೇ ರೀತಿ ಕೋಣನೋರು ಮತ್ತು ಸಂಕಾನೋರು ಈ ಜೋಡಿ ಮನೆತನಗಳು ಅಣ್ಣ ತಮ್ಮರಾಗುತ್ತಿದ್ದು, ಇವರಲ್ಲಿ ವೈವಾಹಿಕ ಸಂಬಂಧಗಳು ಬೆಳೆಯುವುದಿಲ್ಲ. ಕೋಣನೋರಿಗೆ ಉಳಿದ ಎರಡು ಜೋಡಿ ಮನೆತನದವರು ನೆಂಟರಾಗುತ್ತಾರೆ. ಅವರಲ್ಲಿ ವೈವಾಹಿಕ ಸಂಬಂಧಗಳು ಬೆಳೆಯುತ್ತವೆ. ವೈವಾಹಿಕ ಸಂಬಂಧ ಇದೆ.

| | |
|---|---|
| ೧. ಕೋಣನವರು ಮತ್ತು ಸಂಕಾನೋರು | ೧. ದ್ಯಾಮಚೋರು ಮತ್ತು ಹುಲಿಯಪ್ಪ ದ್ಯಾಮಚೋರು<br>೨. ಸಂಕನ ಶೆಟ್ಟಿಯರು ಮತ್ತು ಬಾರೇರು |

ಅದೇ ರೀತಿ ಸಂಕನ ಶೆಟ್ಟಿಯರು ಮತ್ತು ಬಾರೇರು ಜೋಡಿ ಮನೆತನಗಳಾಗಿದ್ದು, ಈ ಎರಡು ಮನೆತನಗಳಲ್ಲಿ ವೈವಾಹಿಕ ಸಂಬಂಧಗಳು ಇರುವುದಿಲ್ಲ. ಕಾರಣ ಇವರು ಅಣ್ಣ ತಮ್ಮಂದಿರಂತೆ ವರ್ತಿಸಬೇಕಾಗುತ್ತದೆ. ಇವರಲ್ಲಿ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ, ಇವರನ್ನು ಹೊರತು ಪಡಿಸಿ ಇನ್ನುಳಿದ ೧.ದ್ಯಾಮಚೋರು ಮತ್ತು ಹುಲಿಯಪ್ಪ ದ್ಯಾಮಚೋರು ೨.ಕೋಣನೋರು ಮತ್ತು ಸಂಕಾನೋರು, ಈ ಜೋಡಿ ಮನೆತನಗಳಲ್ಲಿ ವೈವಾಹಿಕ ಸಂಬಂಧ ಬೆಳೆಸಬಹುದಾಗಿದೆ. ಏಕೆಂದರೆ ಇವರು ನೆಂಟರಾಗುವದರಿಂದ ಈ ಎರಡು ಜೋಡಿ ಮನೆತನಗಳ ಮಧ್ಯದಲ್ಲಿ ವೈವಾಹಿಕ ಸಂಬಂಧವನ್ನು ಇಟ್ಟುಕೊಳ್ಳಬಹುದಾಗಿದೆ. ವೈವಾಹಿಕ ಸಂಬಂಧ ಈ ಜೋಡಿ ಮನೆತನದಲ್ಲಿ ಇದೆ.

| | |
|---|---|
| ೧. ಸಂಕನ ಶೆಟ್ಟಿಯರು ಮತ್ತು ಬಾರೇರು | ೧. ದ್ಯಾಮಚೋರು ಮತ್ತು ಹುಲಿಯಪ್ಪ ದ್ಯಾಮಚೋರು<br>೨. ಕೋಣನೋರು ಮತ್ತು ಸಂಕಾನೋರು |

ಈ ಮೇಲಿನ ಐದು ಬಳೆಯವರು ಯಾವುದೇ ಶುಭ ಸಂದರ್ಭದಲ್ಲಿ ವೈವಾಹಿಕ ಸಂದರ್ಭದಲ್ಲಿ ಐದು ಬಳೆಗಳನ್ನು ತೋಡುತ್ತಾರೆ. ಇದಕ್ಕೆ ಒಂದು ದಂತ ಕಥೆಯಿದೆ. ಸಜ್ಜನ ಗಾಣಿಗನು ಜೋಡು ಬಳೆಯವರ ವೈವಾಹಿಕ ಸಂಬಂಧ ಬೆಳೆಸಿರುತ್ತಾನೆ. ಹೆಂಡತಿಯು ಮನೆಯ ಹಬ್ಬಕ್ಕೆಂದು ಹೋದಾಗ ಅವರ ಹೆಂಡತಿ ಮನೆಯವರು ಕುಂಕುಮ ದೋಕುಳಿ ಮಾಡಿ, ಅನ್ನದಲ್ಲಿ ಗೊಂಬೆ ಮಾಡಿ, ಅದನ್ನು ಕುಂಕುಮದ ನೀರಿನಲ್ಲಿ ಅದ್ದಿ ಆ ಗೊಂಬೆಯನ್ನು ಗಾಣಕ್ಕೆ ಬಲಿಕೊಡುವ ಪದ್ಧತಿ ಇತ್ತೆಂದು, ಈ ಪದ್ಧತಿಯನ್ನು ನೋಡಿದ. ಸಜ್ಜನ ಗಾಣಿಗನು ತನ್ನ ಹೆಂಡತಿಯನ್ನು ಆಕೆಯ ತವರು ಮನೆಯಿಂದ ತನ್ನ ಮನೆಗೆ ಕರೆದುಕೊಂಡು ಬರುವಾಗ ಹೆಂಡತಿಯು ಮನೆಯಲ್ಲಿ ೨ ಬಳೆಗಳನ್ನು ಬಿಟ್ಟು ಬಂದಿರುವುದಾಗಿ ಗಂಡನಿಗೆ ತಿಳಿಸುತ್ತಾಳೆ. ಆಗ ಅವಳ ಗಂಡನು ಎರಡು ಬಳೆ ಹೋದರೆ ಏನಂತೆ ನಾನು ಐದು ಬಳೆಯನ್ನು ಮಾಡಿಸುತ್ತೇನೆ ಬಾ ಎಂದು ತನ್ನ ಮನೆಗೆ ಕರೆದುಕೊಂಡು ಬಂದು ತನ್ನ ಹೆಂಡತಿಗೆ ಬಂಗಾರದ ಐದು ಬಳೆಗಳನ್ನು ಮಾಡಿಸಿದನಂತೆ. ಅಂದಿನಿಂದ ಸಜ್ಜನ ಗಾಣಿಗರನ್ನು ಐದು ಬಳೆಯವರೆಂದು ಕರೆಯುತ್ತಾರೆ. ಇವರು ಶುಭ ಕಾರ್ಯಗಳಲ್ಲೆಲ್ಲಾ ಐದು ಬಳೆಗಳನ್ನು ತೊಡುವುದು ಕಡ್ಡಾಯವಾಗಿದೆ. ಇನ್ನೂ ಜೋಡು ಬಳೆಯವರು ಎರಡೇ ಬಳೆ ತೊಡುವ ಪದ್ಧತಿಯನ್ನು ಬೆಳೆಸಿಕೊಂಡು ಬಂದವರಾಗಿದ್ದಾರೆ. ಜೋಡು ಬಳೆಯವರಲ್ಲಿ ಎರಡು ಒಳ ಪಂಗಡಗಳಿದ್ದೂ ಅವರು ನಂಜನಗೂಡಿನ ನಂಜುಡೇಶ್ವರನನ್ನು ಮನೆ ದೇವರೆಂದು ಸ್ವೀಕರಿಸಿದ್ದಾರೆ. ಇವರಲ್ಲಿ ಸಿರಿವಾರದವರು ಸಿರಿವಾರದವರ ಮಧ್ಯೆ ವೈವಾಹಿಕ ಸಂಬಂಧಗಳು ಇರುವುದಿಲ್ಲ ಕಾರಣ ಅವರು ಅಣ್ಣ ತಮ್ಮರಂತೆ ವರ್ತಿಸುತ್ತಾರೆ. ಇವರ ವೈವಾಹಿಕ ಸಂಬಂಧಗಳು ಶಿರಿವಾರದವರ ಮತ್ತು ಧರಣಿಯವರ ಜೋಡಿ ವೈವಾಹಿಕ ಸಂಬಂಧವನ್ನು ಹೊಂದಿದ್ದಾರೆ. ಇದನ್ನು ಹೊರತು ಪಡಿಸಿಯೂ ಸಹ ಸಜ್ಜನ ಗಾಣಿಗರ ಜೊತೆಯಲ್ಲಿ ವೈವಾಹಿಕ ಸಂಬಂಧವನ್ನು ಬೆಳೆಸಿದವರಾಗಿದ್ದಾರೆ.

ಜೋಡು ಬಳೆಯವರನ್ನು ಮತ್ತೊಂದು ಅರ್ಥದಲ್ಲಿ ಜ್ಯೋತಿ ಗಾಣಿಗರೆಂದು ಕರೆಯುವುಂದುಟು. ಇವರ ಕಾಯಕ ಇನ್ನೂ ಹಳೆಯ ಗಾಣಗಳಿಂದ ಎಣ್ಣೆಯನ್ನು ತೆಗೆಯುವ ಕಾಯಕವನ್ನು ಮೈಗೂಡಿಸಿಕೊಂಡು ಬಂದವರಾಗಿದ್ದಾರೆ. ಇವರು ಹೆಚ್ಚಾಗಿ ನಗರ ವಾಸಿಗಳಾಗಿದ್ದು, ನಗರದಲ್ಲಿ ಎಣ್ಣೆ ಹಾಗೂ ಅಂಗಡಿ ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇವರು ಸಹ ತನ್ನ ಮೂಲ ವೃತ್ತಿಯನ್ನು ಇನ್ನೂ ಈ ದಿನದವರೆಗೂ ಉಳಿಸಿ ಬೆಳೆಸಿಕೊಂಡು ಬಂದವರಾಗಿದ್ದಾರೆ. ಇವರಲ್ಲಿ ಖರೆ ಗಾಣಿಗರಲ್ಲಿರುವಂತೆ ವಿಧವಾ ಮರು ವಿವಾಹಕ್ಕೆ ಅವಕಾಶವನ್ನು ನೀಡಲಾಗಿದೆ. ಸಜ್ಜನ ಗಾಣಿಗರು ತಮ್ಮನ್ನು ಹೆಚ್ಚಾಗಿ ವ್ಯವಸಾಯದಲ್ಲಿ ತೊಡಗಿಸಿಕೊಂಡಿದ್ದಾರೆ. ಉಳಿದಂತೆ ಬದಲಾವಣೆಗಳು ಸಾಕಷ್ಟು ಇವರಲ್ಲಿ ಆಗಿದ್ದೂ ತಮ್ಮ ಮೂಲ ವೃತ್ತಿಯು ಈಗ ಕಂಡು ಬರುತ್ತಿಲ್ಲ. ಆದರೆ

ಜೋತಿ ಗಾಣಿಗರಲ್ಲಿ ಈಗಲೂ ಸಹ ತಮ್ಮ ಮನೆಯಲ್ಲಿ ಗಾಣಗಳನ್ನು ಹೊಂದಿದ್ದೂ ಎಣ್ಣೆ ತೆಗೆಯುವ ಕಾಯಕದಲ್ಲಿ ಹೆಚ್ಚಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಇನ್ನೂ ಸಂಪ್ರದಾಯಗಳು ಇವರಲ್ಲಿ ಉಳಿದುಕೊಂಡಿವೆ. ಸಜ್ಜನ ಗಾಣಿಗರಲ್ಲಿ ಇದು ಪರಿಪೂರ್ಣ ಬದಲಾವಣೆಯಾಗಿದೆ.

**ಆಹಾರ ಪದ್ದತಿ**

ಯಾವುದೇ ಒಂದು ಬುಡಕಟ್ಟು ಮೂಲದ ಸಮುದಾಯವನ್ನು ಗಮನಿಸಿದಾಗಲೂ, ಅದರದೇ ಆದ ವಿಶಿಷ್ಟ ಆಹಾರ ಪದ್ದತಿಯನ್ನು ಒಳಗೊಂಡಿರುವುದನ್ನು ಕಾಣಬಹುದು. ಅದು ಆ ಸಮುದಾಯ ಬದುಕುವ ಪರಿಸರ, ಪ್ರದೇಶ, ವಾತಾವರಣಗಳಿಗೆ ತಕ್ಕಂತೆ ರೂಪುಗೊಂಡಿರುತ್ತದೆ.

ಸಜ್ಜನ ಗಾಣಿಗ ಸಮುದಾಯವು ಸಸ್ಯಾಹಾರ ಪದ್ದತಿಯನ್ನು ಅಳವಡಿಸಿಕೊಂಡಿದೆ. ಇವರು ಮಾಂಸ ತಿನ್ನುವವರಲ್ಲ ಕೇವಲ ತರಕಾರಿಯನ್ನು ತಮ್ಮ ಆಹಾರದಲ್ಲಿ ವಿಶೇಷವಾಗಿ ಬಳಸುತ್ತಾರೆ. ರಾಗಿ, ಜೋಳ, ಗೋಧಿ, ಅಕ್ಕಿ, ಜೋಳ ಧಾನ್ಯಗಳು ಮುಂತಾದವುಗಳನ್ನು ಆಹಾರದಲ್ಲಿ ದವಸಗಳನ್ನು ಮತ್ತು ತರಕಾರಿಯನ್ನು ಉಪಯೋಗಿಸಿ ಅಡಿಗೆ ತಯಾರಿಸುತ್ತಾರೆ. ಇದು ಇವರಲ್ಲಿ ಕಂಡು ಬರುವ ವಿಶಿಷ್ಟ ಪದ್ದತಿಯಾಗಿದೆ.

**ಉಡುಗೆ ತೊಡುಗೆ**

ಸಜ್ಜನ ಗಾಣಿಗರಲ್ಲಿ ಮಹಿಳೆಯರು, ಪುರುಷರೆಲ್ಲರೂ ಇತರ ಜನಾಂಗದಂತೆಯೇ ಬಟ್ಟೆಗಳನ್ನು ಹಾಕಿಕೊಳ್ಳುತ್ತಾರೆ. ಇವರಲ್ಲಿ ಅತಿ ಹೆಚ್ಚಿನದಾಗಿ ಕೃಷಿ ಆಧಾರಿತ ಜನರಿರುವುದರಿಂದ ಕೃಷಿ ಮಾಡುವಾಗ ಹಳೆಯ ಬಟ್ಟೆಗಳನ್ನು ತೊಟ್ಟು ಕೃಷಿ ಕೆಲಸ ಮಾಡುತ್ತಾರೆ. ಹಬ್ಬ ಹರಿದಿನಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ, ಮುಂತಾದ ವಿಶೇಷ ವಿವಾಹ ಸಂದರ್ಭದಲ್ಲಿ ಹೊಸ ಬಟ್ಟೆಗಳನ್ನುಟ್ಟು ಸಂತೋಷ ಪಡುತ್ತಾರೆ. ಗೃಹ ಪ್ರವೇಶದಂದು ಬಂದ ಕುಲ ಬಾಂದವರು ಮನೆ ಕಟ್ಟಿಸಿದ ಗಂಡ ಹೆಂಡತಿಗೆ ಹೊಸ ಬಟ್ಟೆಯನ್ನು ಕೊಟ್ಟು ಗೌರವಿಸುವ ಪದ್ದತಿ ಇದೆ.

ಮದುವೆಯ ಸಂದರ್ಭದಲ್ಲಿ ಶರ್ಟ್ ಮತ್ತು ಪಂಚೆ, ಪ್ಯಾಂಟ್, ಶರ್ಟ್, ಸಫಾರಿ ಜೊತೆಗೆ ವಿಶೇಷವಾಗಿ ಕೋಟ್‌ನ್ನು ಬಳಸುತ್ತಾರೆ. ಹೆಂಗಸರು. ರೇಶ್ಮೆಸೀರೆ, ಸೆರಗಿನ ಸೀರೆ, ಇಳಕಲ್ ಸೀರೆ, ಪಟ್ಟಿ ಸೆರಗಿನ ಸೀರೆ, ಸಾದ ಸೀರೆಗಳನ್ನು ಬಳಸುತ್ತಾರೆ. ಇತ್ತೀಚಿನ ಮಹಿಳೆಯರು, ಚೂಡಿದಾರ, ಪ್ಯಾಂಟ್, ಶರ್ಟ್ ಧರಿಸುವ ಆಧುನಿಕ ವಾಡಿಕೆಯು ಇದೆ. ಇದು ವಿದ್ಯಾವಂತರಲ್ಲಿ ಮಾತ್ರ ಹೆಚ್ಚಿದೆ.

ಗಂಡಸರಿಗೆ ಮದುವೆ ಸಂದರ್ಭದಲ್ಲಿ ವಿಶೇಷವಾಗಿ ಪೇಠಾವನ್ನು ಸುತ್ತುತ್ತಾರೆ. ಹೀಗೆ ಸಜ್ಜನ ಗಾಣಿಗರಲ್ಲಿ ಕಾಲಕ್ಕೆ ತಕ್ಕಂತೆ ಉಡುಗೆ ತೊಡುಗೆಗಳನ್ನು ಧರಿಸುತ್ತಾರೆ.

**ನ್ಯಾಯ ಪದ್ದತಿ**

ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನಗಳಲ್ಲಿ ನ್ಯಾಯ ಪಂಚಾಯತಿ ಮುಖ್ಯವಾದದ್ದು. ಪ್ರಾಚೀನ ಸಾಮಾಜಿಕ ಜೀವನದಲ್ಲಿ ನ್ಯಾಯ ಪಂಚಾಯತಿ ತೀರ್ಮಾನ ಸಮುದಾಯವನ್ನೇ ಅವಲಂಬಿಸಿದ್ದವು.

ಏಕೆಂದರೆ ಅವುಗಳು ಗಾತ್ರದಲ್ಲಿ ಚಿಕ್ಕದು, ಜನಸಂಖ್ಯೆ ಕಡಿಮೆ, ಜೀವಿಸಿದ ಸಂಬಂಧಗಳನ್ನು ಹೊಂದಿದ್ದರು. ಸರಳ ಜಾತಿಗಳನ್ನು ಬುಡಕಟ್ಟು ಸಮುದಾಯಗಳನ್ನು ಗಮನಿಸಿದ್ದಾಗ ತನ್ನದೇ ಆದ ನ್ಯಾಯ ಪದ್ದತಿ ಕ್ರಮವನ್ನು ಅನುಸರಿಸುವುದು ಕಂಡು ಬರುತ್ತದೆ. ಎಲ್ಲಾ ಜಾತಿ ಸಮುದಾಯಗಳು ಬುಡುಕಟ್ಟುಗಳ ನ್ಯಾಯ ಪದ್ದತಿಯ ಮೂಲ ಉದ್ದೇಶ ಒಂದೇ ಆಗಿದ್ದರೂ ಸಮುದಾಯಗಳಲ್ಲಿನ ಪದ್ದತಿಯಲ್ಲಿರುವ ರಚನಾ ಕ್ರಮಗಳು ಮಾತ್ರ ಭಿನ್ನತೆಯಿಂದ ಕೂಡಿರುವುದನ್ನು ಕಾಣ ಬಹುದಾಗಿದೆ. ನ್ಯಾಯದ ಧ್ಯೇಯೋದ್ದೇಶಗಳನ್ನು ಸಾಧಿಸಲು ಮತ್ತು ಜನ ಜೀವನದಲ್ಲಿ ಸುವ್ಯವಸ್ಥೆಯನ್ನುಂಟು ಮಾಡಲು ನ್ಯಾಯ ಪದ್ದತಿ ರಚಿಸಿಕೊಳ್ಳಲಾಗುವುದು. ಅಂತೆಯೇ ಗಾಣಿಗ ಸಮುದಾಯದಲ್ಲಿಯೂ ನ್ಯಾಯ ಪದ್ದತಿ ಯೋಜಿತ ರೀತಿಯಲ್ಲಿ ರೂಪುಗೊಂಡು ಚಾಲನೆಯಲ್ಲಿರುವ ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನವಾಗಿದೆ.

ಒಂದು ಜನ ಸಮುದಾಯದ ನಂಬಿಕೆ. ಆಚರಣೆ, ಆದರ್ಶ, ಮೌಲ್ಯಗಳು, ನ್ಯಾಯ ನಿರ್ಣಯಗಳು, ಪದ್ದತಿಗಳನ್ನು ರೂಪಿಸುತ್ತದೆ. (ಆರ್. ಬಿ. ಕುಮಾರ್ ೨೦೦೦, ೪೯) ಈ ನ್ಯಾಯ ಪದ್ದತಿ ಕ್ರಮವು ಬುಡಕಟ್ಟುಗಳಲ್ಲಿ ತುಂಬಾ ಗೌರವ ಮತ್ತು ನಿಷ್ಠೆಯಿಂದ ನಡೆಯಲ್ಪಡುತ್ತದೆ. ಇದು ಸರ್ಕಾರ ರಚಿಸಿದ ನ್ಯಾಯಲಯಗಳಿಗಿಂತ ಹೆಚ್ಚಿನ ಮಹತ್ವವನ್ನು ಈ ಸಮುದಾಯಗಳು ಹೊಂದಿರುತ್ತವೆ. ಇತರ ಸಮುದಾಯಗಳಂತೆ ಗಾಣಿಗ ಸಮುದಾಯದಲ್ಲೂ ನ್ಯಾಯ ಪದ್ದತಿಯ ವ್ಯವಸ್ಥೆ ತನ್ನದೇ ಆದ ಮಹತ್ವದ ಸ್ಥಾನವನ್ನು ಹೊಂದಿವೆ.

ಪ್ರಾಣಕ್ಕಿಂತ ಮಾನವೇ ಹೆಚ್ಚು ಎಂಬ ಸಿದ್ದಾಂತಕ್ಕೆ ಅಂಟಿಕೊಂಡ ನ್ಯಾಯ ಪದ್ದತಿ ಮಹತ್ವದ ಸ್ಥಾನ ಪಡೆದುಕೊಂಡಿದೆ. ಸಜ್ಜನ ಗಾಣಿಗ ಸಮುದಾಯದಲ್ಲಿ ನ್ಯಾಯ ಮಾಡುವವರ ಹಿರಿಯರ ಗುಂಪನ್ನು ದೈವ ಎಂದು ಕರೆಯಲಾಗುತ್ತದೆ. ಅಪಾದಿತ ವ್ಯಕ್ತಿ ಮಾಡಿದ ಅಪರಾಧಕ್ಕನುಗುಣವಾಗಿ ತೀರ್ಪು ನಿರ್ಧಾರಿತವಾಗುತ್ತದೆ. ಮನೆಯಲ್ಲಿ ನಡೆಯುವ ಚಿಕ್ಕಾ - ಪುಟ್ಟಾ ಫಿರ್ಯಾದಿಗಳಿಂದ ಹಿಡಿದು ಆಸ್ತಿ ವಿವಾದ, ಜಗಳಗಳು, ಮನಸ್ತಾಪಗಳನ್ನು ಹೀಗೆ ಹಲವು ಸಮಸ್ಯೆಗಳನ್ನು ನ್ಯಾಯ ನಿರ್ಣಯಗಳ ಮುಖಾಂತರ ಪಂಚಾಯಿತಿಯನ್ನು ಸೇರಿಸಿ ಬಂದಿರುವ ವ್ಯಾಜ್ಯಗಳನ್ನು ಪರಿಹರಿಸುತ್ತಾರೆ. ಹಿರಿಯರು ಸಾಧ್ಯವಾದಷ್ಟು ಎರಡು ಕಡೆಯ ಕಕ್ಷಿದಾರರಿಗೆ ಒಪ್ಪಂದ ಮಾಡಿಸುವ ಪ್ರಯತ್ನ ಮಾಡುತ್ತಾರೆ. ನ್ಯಾಯ ಸಮ್ಮತವಾಗಿ ವಿವಾದವನ್ನು ಬಗೆ ಹರಿಸಲಾಗುತ್ತದೆ. ಇದಕ್ಕೂ ನ್ಯಾಯ ಬಗೆ ಹರಿಯದಿದ್ದರೆ ಪೋಲೀಸ್‌ಠಾಣೆ ಮತ್ತು ನ್ಯಾಯಲಯಕ್ಕೆ ಮೊರೆ ಹೋಗಿ ತಮ್ಮ ನ್ಯಾಯ ಬಗೆ ಹರಿಸಿಕೊಳ್ಳುತ್ತಾರೆ. ಆಯಾ ಊರುಗಳಲ್ಲಿ ಸಮುದಾಯದ ಹಿರಿಯರು ಸಾಮಾನ್ಯವಾಗಿ ವ್ಯಾಜ್ಯಗಳನ್ನು ಬಗೆಹರಿಸುತ್ತಾರೆ. ಕೆಲವೊಮ್ಮೆ ತಮ್ಮ ಪಕ್ಕದೂರಿನಲ್ಲಿರುವ ಹಿರಿಯರನ್ನೂ ಸಹ ಕರೆಯುವುದುಂಟು. ಈ ಸಮುದಾಯದಲ್ಲಿ ಗಂಡು ಬೇರೆ ಜಾತಿ ಹುಡುಗಿ ಮದುವೆಯಾದರೆ ಮನೆಯಲ್ಲಿ ಸೇರಿಸಿಕೊಳ್ಳುವುದು ಕಂಡುಬರುತ್ತೆ, ಇಂತಹ ಸಮಯದಲ್ಲಿ ಸಮುದಾಯದ ಹಿರಿಯರೇ ಕುಳಿತು ನ್ಯಾಯ ಮಾಡುತ್ತಾರೆ. ಆದರೆ ಹೆಣ್ಣು ಬೇರೆ ಜಾತಿ ಹುಡುಗನೊಂದಿಗೆ ಓಡಿ ಹೋದರೆ ಅವರನ್ನು ತಮ್ಮ ಜಾತಿಯಲ್ಲಿ ಸೇರಿಸಿಕೊಳ್ಳುವುದಿಲ್ಲ. ಈ ಸಮುದಾಯದವರು ಬೇರೆ ಜಾತಿಗೆ ಸೇರಿದರೆ ಅವರನ್ನು ತಮ್ಮ ಜಾತಿಯಲ್ಲಿ ಸೇರಿಸಿಕೊಳ್ಳುವುದಿಲ್ಲ. ಆದರೆ ಆ ಕುಟುಂಬದ ಇತರ ಸದಸ್ಯರು ಬೇಕಾದರೆ ಈ ಸಮುದಾಯದಲ್ಲಿ ಸೇರಲು

ಇಷ್ಟಪಟ್ಟರೆ ಅವರನ್ನು ಒಂದಿಷ್ಟು ದಂಡದ ರೂಪದಲ್ಲಿ ನೀಡುವಂತೆ ತಿಳಿಸಿ ಅವರಿಗೆ ಸಮಾಜದಲ್ಲಿ ಸೇರಿಸಿಕೊಳ್ಳುತ್ತಾರೆ. ಈ ತೀರ್ಪು ದಂಡ, ಶಿಕ್ಷೆ, ಬಹಿಷ್ಕಾರ, ಎಂಬ ಮೂರು ರೀತಿಯಲ್ಲಿ ಕೂಡಿರುತ್ತದೆ. ವಿಚಾರ ಮಾಡಿ ವ್ಯಕ್ತಿಯ ಸಮಸ್ಯೆಗಳನ್ನು ಪರೀಕ್ಷಿಸಿ ತೀರ್ಪು ಕೊಡುತ್ತಾರೆ. ಚಿಕ್ಕ ಪುಟ್ಟಾ ವ್ಯಾಜ್ಯಗಳ ತೀರ್ಪುಗಳಲ್ಲಿ ಕೇವಲ ಎಲೆ ಅಡಿಕೆ ಮತ್ತು ದಂಡ ಕಟ್ಟಿಸಿಕೊಂಡು ಮುಗಿಸುತ್ತಾರೆ. ಸಮುದಾಯದ ಹೆಣ್ಣು ಅಥವಾ ವಿಧವೆ, ಇತರೆ ಜಾತಿಯ ಪುರುಷನೊಂದಿಗೆ ಲೈಂಗಿಕ ಸಂಪರ್ಕವಿಟ್ಟುಕೊಂಡಿದ್ದರೆ ಅಥವಾ ಓಡಿ ಹೋಗಿದ್ದರೆ, ಅಂಥವಳನ್ನು ಕುಲಗೆಟ್ಟ ಹೆಣ್ಣು ಎಂದು ತೀರ್ಪುಕೊಟ್ಟು, ಸಮುದಾಯದಿಂದ ಹೊರ ಹಾಕಲಾಗುತ್ತದೆ. ನಾಗರೀಕತೆಯ ಪ್ರಭಾವದಿಂದಾಗಿ, ಇತ್ತೀಚಿನ ದಿನಗಳಲ್ಲಿ ವ್ಯಾಜ್ಯಗಳು ದೈವ ಪಂಚಾಯಿತಿಯಲ್ಲಿ ಬಾರದೆ ಪೋಲಿಸ್ ಠಾಣೆ, ಕೋರ್ಟು, ಕಚೇರಿಗಳ ಮೆಟ್ಟಿಲುಗಳನ್ನು ಏರುತ್ತವೆ.

ಜಾತಿ ಪಂಚಾಯತಿಯು ಜಾತಿಗೆ ಸಂಬಂಧಿಸಿದ ವಿವಾದಗಳನ್ನು ಪರಿಶೀಲಿಸಿ ತೀರ್ಪು ನೀಡುವ ನ್ಯಾಯಾಲಯದ ಕಾರ್ಯ ನಿರ್ವಹಿಸುತ್ತಿತ್ತು. ಜಾತಿಯ ಸದಸ್ಯರ ನಡವಳಿಕೆಯ ಮೇಲೆ ನಿಯಂತ್ರಣವನ್ನಿಟ್ಟುಕೊಂಡು ಜಾತಿ ನಿರ್ಬಂಧನೆಗಳನ್ನು ಮೀರಿದವರಿಗೆ ಶಿಕ್ಷೆಯನ್ನು ವಿಧಿಸುತ್ತಿತ್ತು.

ಊಟೋಪಚಾರಗಳಿಗೆ ಸಂಬಂಧಿಸಿದ, ಜಾತಿ ನಿಯಮಗಳನ್ನು ಉಲ್ಲಂಘಿಸುವುದು, ಜಾತಿಯ ವೈವಾಹಿಕ ಕಾಯ್ದೆ ಮುರಿಯುವುದು, ಬೇರೊಬ್ಬ ಜಾತಿಯ ಹೆಂಗಸಿನೊಂದಿಗೆ ಅಕ್ರಮ ಲೈಂಗಿಕ ಸಂಬಂಧ ಬೆಳೆಸುವುದು, ಅವಿವಾಹಿತರ ಸಂಭೋಗ, ವಿವಾಹ ವಚನಭಂಗ, ಹೆಂಡತಿಯ ಮೇಲೆ ಹಿಂಸಿಸುವುದು ಗೋವಧೆ. ಬ್ರಾಹ್ಮಣ ಹತ್ಯೆ, ಬ್ರಾಹ್ಮಣರನ್ನು ಅಪಮಾನಗೊಳಿಸುವುದು, ಮದುವೆ ಮುಂಜಿಗಳಿಗೆ ಸಂಬಂಧಿಸಿದ ಪರಂಪರಾಗತ ಪದ್ಧತಿಗಳನ್ನು ಆಚರಿಸದಿರುವುದು. ಮೊದಲಾದ ಅಪಚಾರಗಳನ್ನು ಜಾತಿ ಪಂಚಾಯತಿ ವಿಚಾರಣೆ ನಡೆಸಿ ಶಿಕ್ಷೆ ವಿಧಿಸುತ್ತಿತ್ತು. ಸ್ತ್ರೀಯರ ಮೇಲಿನ ಅತ್ಯಾಚಾರ, ವಿವಾಹಿತ ಸ್ತ್ರೀಯೊಂದಿಗೆ ವೈಭಿಚಾರ ನಡೆಸುವುದು, ಪತ್ನಿಯ ಸಂಪೋಷಣೆ ಮಾಡಲು ನಿರಾಕರಿಸುವುದು, ಸಾಲ ಹಿಂತಿರುಗಿಸದೇ ಇರುವುದು, ಉದ್ಯೋಗ ವ್ಯವಹಾರ ಉಲ್ಲಂಘಿಸುವುದು, ಇತರರ ಮೇಲೆ ದೈಹಿಕ ಆಕ್ರಮಣ ಒಮ್ಮೆಲೆ ವಾಸ್ತವಗಳ ಬೆಲೆ ಏರಿಸುವುದು ಅಥವಾ ಇಳಿಸುವುದು ಮುಂತಾದ ಪ್ರಕರಣಗಳಲ್ಲಿ ಜಾತಿ ಪಂಚಾಯತಿ ಇತ್ಯರ್ಥ ಪಡಿಸುವಷ್ಟು ಶಕ್ತಿಯುತವಾಗಿತ್ತು. ಜಾತಿ ಪಂಚಾಯತಿಯು ತಪ್ಪು ಮಾಡಿದವರಿಗೆ ಶಿಕ್ಷೆ, ದಂಡ ಜಾತಿ ಬಹಿಷ್ಕಾರ, ದೈಹಿಕ ದಂಡನೆ ನೀಡುತ್ತಿತ್ತು.

**ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ**

ಬುಡಕಟ್ಟು ವ್ಯವಸ್ಥೆಯಲ್ಲಿ ಸಮುದಾಯದ ಶುದ್ಧತೆಗೆ ಹೆಚ್ಚು ಮಹತ್ವ ಕೊಡುತ್ತಾರೆ. ಶುದ್ಧತೆಯನ್ನು ಕಾಯ್ದುಕೊಳ್ಳಲು ಹಲವು ಕಟ್ಟುಪಾಡುಗಳನ್ನು ಹಾಕಿಕೊಂಡಿರುವುದನ್ನು ಕಾಣಬಹುದು. ಸಜ್ಜನ ಗಾಣಿಗ ಸಮುದಾಯವು ಇದಕ್ಕೆ ಹೊರತಾಗಿಲ್ಲ, ಈ ಸಮುದಾಯದಲ್ಲಿ ಜಾತಿ ಬಹಿಷ್ಕಾರಕ್ಕೆ ಕಾರಣಗಳು ಈ ಕೆಳಗಿನಂತಿವೆ.

* ಈ ಸಮುದಾಯದ ಹೆಣ್ಣಾಗಲಿ ಪುರುಷರಾಗಲಿ ಅನ್ಯ ಜಾತಿಯ ಸ್ತ್ರೀ ಪುರುಷರೊಡನೆ ಅನೈತಿಕ ಸಂಬಂಧವನ್ನಿಟ್ಟುಕೊಂಡಲ್ಲಿ ಅಂತಹವರನ್ನು ಜಾತಿಯಿಂದ ಹೊರಹಾಕುವುದು, ಜಾತಿಯಿಂದ ಬಹಿಷ್ಕರಿಸುವುದು.

* ಸಮುದಾಯದ ಹಿರಿಯರನ್ನು ಗೌರವಿಸುವುದು.

* ಸಮುದಾಯದಲ್ಲಿ ನಡೆಯುವ ಶುಭ ಮತ್ತು ಅಶುಭ ಕಾರ್ಯಗಳಲ್ಲಿ ಗೈರು ಹಾಜರಾದರೆ.

ಸಜ್ಜನ ಗಾಣಿಗ ಸಮುದಾಯದ ವ್ಯಕ್ತಿ ಅನ್ಯ ಧರ್ಮವನ್ನು ಸ್ವೀಕರಿಸಿದ್ದರೆ, ಅವನನ್ನು ಅವನ ಸಮುದಾಯದಿಂದ ಬಹಿಷ್ಕರಿಸುತ್ತಾರೆ. ಬಹಿಷ್ಕೃತ ವ್ಯಕ್ತಿಯೊಂದಿಗೆ ಯಾವ ರೀತಿ ಸಂಬಂಧವೂ ಇರಕೂಡದು. ಒಂದು ಪಕ್ಷ ಬಹಿಷ್ಕೃತ ವ್ಯಕ್ತಿಯೊಂದಿಗೆ ಸಂಬಂಧ ಹೊಂದಿದವರನ್ನು ಸಮುದಾಯವು ಬಹಿಷ್ಕರಿಸುತ್ತದೆ. ಒಂದು ವೇಳೆ ತಾನು ಮಾಡಿದ ತಪ್ಪು ಅರಿವಾಗಿ ಪುನಃ ತನ್ನ ಸಮುದಾಯಕ್ಕೆ ಸೇರುತ್ತೇನೆ, ಅನ್ಯ ಧರ್ಮ ತ್ಯಜಿಸುತ್ತೇನೆಂದು ಮುಂದೆ ಬಂದರೆ ದೈವದವರು ಅವನಿಗೆ ನಿರ್ಣಯವನ್ನು ಕೊಡುತ್ತಾರೆ.

**ನಂಬಿಕೆ ವಿಧಿ ನಿಷೇಧಗಳು**

ಬದುಕಿನಲ್ಲಿ ವ್ಯಕ್ತಿ ಯಾವತ್ತು ಪೂರ್ಣ ಸ್ವಾತಂತ್ರ್ಯದ ವ್ಯಕ್ತಿ ಅಲ್ಲ, ಅದು ಸಾಧ್ಯವೂ ಇಲ್ಲವೆನ್ನಬಹುದು, ಆತನು ಹಲವು ನಂಬಿಕೆಗಳ ಸಂಕೋಲೆಯಲ್ಲಿ ಬಂಧಿತನಾಗಿರುವನು. ಸ್ವಾತಂತ್ರವಾದ ಆಲೋಚನೆಗಳಾಗಲೀ, ಸ್ವಾತಂತ್ರವಾದ ಆಚರಣೆಯಾಗಲಿ ಯಾವುದೂ ಸಾಧ್ಯವಿಲ್ಲದಂತಾಗಿದೆ. ಪ್ರತಿಕ್ಷಣದಲ್ಲಿಯೂ ಅವನನ್ನು ನಿಯಂತ್ರಿಸುವ ಶಕ್ತಿಗಳು ಅಧಿಕವಾಗಿಯೇ ಇವೆ. ವ್ಯಕ್ತಿಗೆ ಅಂತಹುಗಳ ಬಗ್ಗೆ ಪೂರ್ಣ ಶ್ರದ್ಧೆಯಾಗಲಿ, ನಂಬಿಕೆಯಾಗಲಿ ಇರಲಿ ಬಿಡಲಿ ಪೂರ್ಣ ಭಯವಂತೂ ಇದ್ದೇ ಇದೆ. ಹಾಗಾಗಿ ಅಂತಹವುಗಳನ್ನು ಸ್ವಲ್ಪವಾದರೂ ನಂಬುತ್ತಾ ಬಂದಿದ್ದಾನೆ. ಅದಕ್ಕಾಗಿ ನಂಬಿಕೆಗಳು ಜೀವಂತವಾಗಿ ವಿವಿಧ ಸ್ತರಗಳಲ್ಲಿ, ವಿವಿಧ ವರ್ಗಗಳಲ್ಲಿ, ವಿವಿಧ ರೀತಿಯಲ್ಲಿ ಉಳಿದುಬಂದಿವೆ.

ಈ ನಂಬಿಕೆಗಳು ಇಂದು ನಿನ್ನೆಯವಲ್ಲ ಮಾನವನ ಬದುಕಿನ ಆರಂಭದಿಂದಲೂ ಬಂದಂತವುಗಳಾಗಿವೆ. ಅವನು ಜೀವನ ಸಂತೆ ಪ್ರಾರಂಭಿಸಿದಂದಿನಿಂದಲೂ ಅದರ ಸುತ್ತಮುತ್ತಲಿನ ಚಟುವಟಿಕೆಗಳು ಅವನಲ್ಲಿ ಉಂಟುಮಾಡಿದ ಭಯ, ಆತಂಕ, ಶ್ರದ್ಧೆ, ಲಾಭ, ನಷ್ಟ ಮುಂತಾದವು ಅವನಲ್ಲಿ ಇಂತಹ ಹಲವಾರು ನಂಬಿಕೆಗಳನ್ನು ಉಂಟುಮಾಡಿರಬಹುದು. ಅದನ್ನು ನಿವಾರಿಸಿಕೊಳ್ಳುವುದಕ್ಕೆ ನಿಯಂತ್ರಿಸುವುದಕ್ಕೆ ಅಥವಾ ಅದರಿಂದ ಹೆಚ್ಚಿನ ಲಾಭ ಪಡೆಯುವುದಕ್ಕೆ ಮಾನವ ಕಂಡುಕೊಂಡ ಕೆಲವೊಂದು ವಿಧಿ ವಿಧಾನಗಳೇ ಈ ನಂಬಿಕೆಗಳು.

ಪ್ರಕೃತಿಯಲ್ಲಿ ಕಂಡ ಕೆಲವೊಂದು ಆಶ್ಚರ್ಯಗಳು, ಅದ್ಭುತಗಳು ಅವನಲ್ಲಿ ಉಂಟುಮಾಡಿದ ವಿಶಿಷ್ಟವಾದ ಅನುಭವಗಳೂ ಕೆಲವೊಂದು ನಂಬಿಕೆಗಳ ಉಗಮಕ್ಕೆ ಕಾರಣವೆನ್ನಬಹುದಾಗಿದೆ. ಇವೆಲ್ಲವೂ ಅವನ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿವೆಯೆಂದರೆ ಈ ನಂಬಿಕೆಗಳಿಂದಲೇ ಬದುಕು, ಅವುಗಳ ಹೊರತು ಬದುಕು ಅಸಾಧ್ಯ, ಎನ್ನುವಷ್ಟರ ಮಟ್ಟಿಗೆ ನಿಯಂತ್ರಿಸಿವೆ, ಪ್ರಭಾವ ಬೀರಿವೆ.

ನಂಬಿಕೆಗಳು ಸೃಷ್ಟಿಯ ಆರಂಭದಿಂದಲೂ ಒಂದು ರೀತಿ ಮಾನವನನ್ನು ನಿರ್ಬಂಧಿಸುತ್ತಾ ಬಂದಿವೆ. ನಂಬಿಕೆಗಳನ್ನು ಪ್ರಮುಖವಾಗಿ ಮೂರು ವಿಧಗಳಲ್ಲಿ ವರ್ಗೀಕರಿಸಬಹುದು. ಅವುಗಳಲ್ಲಿ (೧) ಧಾರ್ಮಿಕ ನಂಬಿಕೆಗಳು (೨) ಸಾಂಸ್ಕೃತಿಕ ನಂಬಿಕೆಗಳು, ಹಾಗೂ (೩) ವೈಯುಕ್ತಿಕ ನಂಬಿಕೆಗಳು.

ಬುಡಕಟ್ಟು ಸಮುದಾಯಗಳು ಹೆಚ್ಚಾಗಿ ದೈವಗಳು ನುಡಿಯುವ ಭವಿಷ್ಯ ವಾಚಕಗಳ ನಿರ್ಣಯ ಮತ್ತು ನಿರ್ದೇಶನದಂತೆ ನಡೆಯುವುದನ್ನು ಕಾಣ ಬಹುದಾಗಿದೆ. ಹಾಗೆಯೇ ಸಜ್ಜನ ಗಾಣಿಗ ಸಮುದಾಯಗಳು ಬುಡಕಟ್ಟು ಸಮುದಾಯಗಳಲ್ಲದಿದ್ದರೂ ಬಡುಕಟ್ಟು ಸಮುದಾಯಗಳು ದೈವಗಳು ನುಡಿಯುವ ಭವಿಷ್ಯ ವಾಚಕದ ಬಗ್ಗೆ ನಂಬಿಕೆ ಉಳ್ಳವರಾಗಿದ್ದಾರೆ. ಹಾಗೂ ಭವಿಷ್ಯ ವಾಚಕಗಳನ್ನು ನಂಬಿ ತಮ್ಮ ಕೆಲಸ ಕಾರ್ಯ ರೂಪಿಸಿಕೊಳ್ಳುವುದುಂಟು. ಇವರು ಬ್ರಾಹ್ಮಣ ಪುರೋಹಿತರು ಹೇಳುವ ಪಂಚಾಂಗ ಭವಿಷ್ಯವನ್ನು ನಂಬುತ್ತಾರೆ, ಅವರು ಹೇಳುವ ಪ್ರಕಾರ ಪೂಜೆ, ಪುನಷ್ಕಾರಗಳನ್ನು ಮಾಡುತ್ತಾರೆ. ಇವರಿಗೆ ಭವಿಷ್ಯದಲ್ಲಿ ನಂಬಿಕೆಯಿದೆ. ಹಾಗಾಗಿ ಹೇಳಿಕೆಗಳನ್ನು ಕೇಳುವುದು. ಹಸ್ತ ನೋಡಿ ಭವಿಷ್ಯ ಹೇಳುವವರನ್ನು ಇವರು ನಂಬುತ್ತಾರೆ, ಹಾಗೆ ನಡೆಯುತ್ತಾರೆ. ಹಾಗೆಯೇ ಶಕುನಗಳನ್ನು ಸಹ ನಂಬುತ್ತಾರೆ.ಜೋಡಿ ಸೀನು ಶುಭಕರವಾದದ್ದು, ಒಂಟಿ ಸೀನು ಅವಲಕ್ಷಣ, ಹೊಸ್ತಲಿನ ಮೇಲೆ ನಿಂತು ಸೀನಬಾರದು. ಆಕಸ್ಮಾತ್ ಸೀನಿದರೆ ಹೊಸ್ತಲಿನ ಮೇಲೆ ನೀರು ಚಿಮಿಕಿಸುತ್ತಾರೆ, ತುಂಬಿದ ಬಿಂದಿಗೆ ಎದುರಿಗೆ ಬಂದರೆ ಹೋದ ಕೆಲಸಗಳು ಆಗುತ್ತೆ, ಹಲ್ಲಿ ಲೊಚಗುಟ್ಟಿದರೆ ಸತ್ಯವಾಗುತ್ತೆ ಹೀಗೆ ಹಲವು ಶಕುನಗಳನ್ನು ಇವರು ನಂಬುತ್ತಾರೆ.

ಮೈಲಾರಲಿಂಗನ ಜಾತ್ರೆಯಲ್ಲಿ ಹೇಳುವ ಕಾರಣಿಕವನ್ನು ಇವರು ನಂಬುತ್ತಾರೆ. ಪುರುಷ ದೈವಗಳ ಜೊತೆಗೆ ಸ್ತ್ರೀ ದೈವಗಳಾದ ಹುಲಿಗೆಮ್ಮ, ರೇಣುಕಾ ಯಲ್ಲಮ್ಮ, ಗಾಳೆಮ್ಮ ಈ ದೇವತೆಗಳ ಜೋಗತಿಯರು ಹೇಳುವ ಭವಿಷ್ಯ, ಹೇಳಿಕೆಗಳನ್ನು ತುಂಬಾ ನಂಬುತ್ತಾರೆ. ಹಾಗೆಯೇ ನಡೆಯುತ್ತಾರೆ. ಮೈಲಾರಲಿಂಗನ ಜಾತ್ರೆಯಲ್ಲಿ ಹೇಳುವ ಕಾರಣಿಕ ಹಾಗೂ ತಿಪ್ಪೇಸ್ವಾಮಿ ಜಾತ್ರೆಯಲ್ಲಿ ಹೇಳುವ ಕಾರಣಿಕವನ್ನು ದೇವರು ಹೇಳಿದ ನುಡಿ ಮತ್ತುಗಳು ಹಾಗೆಯೇ ಆಗುತ್ತದೆ ಎಂದು ನಂಬುತ್ತಾರೆ. ಇವರು ತಮ್ಮ ವೈಯುಕ್ತಿಕ ಇಲ್ಲದೆ ಸಾಮೂಹಿಕ ಸಮಸ್ಯೆಗಳಿಗೆ ದೇವರು ಮತ್ತು ದೇವತೆಯಲ್ಲಿ ಹೂವಿನ ಪ್ರಸಾದ ಕೇಳುತ್ತಾರೆ. ದೇವರು ಹಾಗೂ ದೇವತೆಗಳು ಎಡಭಾಗದ ಹೂವನ್ನು ಕೊಟ್ಟರೆ ಕೆಲಸಗಳು, ಆಗುವುದಿಲ್ಲ. ದೇವರು ದೇವತೆಗಳು ಬಲಭಾಗದ ಹೂವನ್ನು ಪ್ರಸಾದವಾಗಿ ಕೊಟ್ಟರೆ ಭವಿಷ್ಯದ ಕೆಲಸಗಳು ಶುಭಕರವಾಗಿ ಸಾಗುತ್ತವೆ ಎಂದು ಇವರು ನಂಬುತ್ತಾರೆ. ದೇವರು ಮತ್ತು ದೇವತೆಗಳು ತಾವು ಕೇಳಿದ ಹೂವಿನ ಪ್ರಸಾದ ಎಡಭಾಗದಿಂದ ಬಂದಿದ್ದಲ್ಲಿ ತಾವು ಮಾಡಬೇಕೆಂದಿರುವ ಕಾರ್ಯಗಳ ಯೋಚನೆ, ಯೋಜನೆಗಳನ್ನು ಅಲ್ಲಿಗೆ ಕೈ ಬಿಡಲಾಗುವುದು, ಬಲಭಾಗದ ಹೂವಿನ ಪ್ರಸಾದ ಕೊಟ್ಟಲ್ಲಿ ಆ ಕಾರ್ಯವನ್ನು ಯೋಜನೆಗಳನ್ನು ಪಾಲಿಸುತ್ತಾರೆ.

ಗಾಣಿಗ ಸಮುದಾಯವು ಹೆಚ್ಚಾಗಿ ದೈವಗಳು ನುಡಿಯುವ ಹಲವು ಭವಿಷ್ಯ ಎಚ್ಚರಗಳನ್ನು ನಂಬಿ ತಮ್ಮ ಕೆಲಸ ಕಾರ್ಯಗಳನ್ನು ನಿರ್ಣಯಿಸುತ್ತಾರೆ. ಇವರು ಬಹುದೇವತಾರಾಧಕರಾಗಿದ್ದು ದೇವರ ಹೇಳಿಕೆ ಹಾಗೇ ಪಂಚಾಂಗದ ಭವಿಷ್ಯವನ್ನು ಬಲವಾಗಿ ನಂಬಿದವರಾಗಿದ್ದಾರೆ. ಹಾಗೆಯೇ ಅದು ತೋರಿಸಿದ ಪರಿಹಾರದ ರೀತಿಯಲ್ಲಿ ಪೂಜೆ ಪುನಸ್ಕಾರ ಸಲ್ಲಿಸುತ್ತಾರೆ. ದೇವರ ಹೇಳೇಕೆಗಳಾದ ಮೈಲಾರಲಿಂಗನ ಕಾರಣಿಕೋತ್ಸವದಲ್ಲಿ ನುಡಿಯುವ ಕಾರಣಿಕ ಹಾಗೂ ಹುಲಿಗೆಮ್ಮ ರೇಣುಕಾ ಯಲ್ಲಮ್ಮ ಜೋಗತಿಯರ ಮೈಯಲ್ಲಿ ಬರುವ ಜೋಗತಿಯರ ಹೇಳಿಕೆಗಳು, ಕುಲದೇವತೆಗಳಲ್ಲಿ ಮತ್ತು ಆಂಜನೇಯ ಮತ್ತು ಮಾವಿನಳ್ಳಿ ಬಸವೇಶ್ವರ

ದೈವಗಳಲ್ಲಿ ಹೂವು ಕೇಳುವುದು, ಹಾಗೆಯೇ ಬ್ರಾಹ್ಮಣರಿಂದ ಮತ್ತು ಧರ್ಮಗುರುಗಳಿಂದ, ಐಯ್ಯಗಳಿಂದ ವರ್ತಮಾನದಲ್ಲಿ ನಡೆಯುವ ಕಷ್ಟ ಕಾರ್ಪಣ್ಯಗಳಿಗೆ ಪರಿಹಾರಗಳನ್ನು ಪಡೆಯುತ್ತಾರೆ. ಅಂತೆಯೇ ಇವರು ಶಕುನಗಳನ್ನು ಸಹ ನಂಬಿಕೆಯಿಂದಲೇ ಪರಿಗಣಿಸುತ್ತಾರೆ. ಉದಾ: ಒಂಟಿ ಸೀನು ಹಾಕಿದಾಗ ಅವಲಕ್ಷಣದ ಸಂಕೇತ, ಜೋಡಿ ಸೀನು ಹಾಕಿದರೆ ಶುಭಶಕುನ ಎಂಬಂತೆ ನಂಬುತ್ತಾರೆ. ಹಲ್ಲಿ ವಟಗುಟ್ಟುವಿಕೆ, ಕಾಗೆ ಕೂಗು, ನಾಯಿ ಬೊಗಳುವಿಕೆಯ ಕುರಿತು ಹಲವು ಬಗೆಯ ಶಕುನಗಳಲ್ಲಿ ನಂಬಿಕೆಯನ್ನಿಡುವರು. ಸಜ್ಜನ ಗಾಣಿಗರಲ್ಲಿ ಇರುವ ಕೆಲವು ನಂಬಿಕೆಗಳು ಹೀಗಿವೆ;

ಬಿಸಿ ನೀರಿನಿಂದ ಸ್ನಾನ ಮಾಡುವುದು ಗರ್ಭಿಣಿ ಮಹಿಳೆಗೆ ಆರೋಗ್ಯಕ್ಕೆ ಉತ್ತಮ.

ಹುಟ್ಟಿದ ಮಗುವಿಗೆ ಎಣ್ಣೆ ಸ್ನಾನ ಮಾಡಿಸಬೇಕು.

ಶವದ ಬಳಿ ತುಳಸಿಗಿಡ ನೆಟ್ಟರೆ ದೈವ ಸಂಭೂತನಾಗುತ್ತಾನೆ.

ಮೃತ ವ್ಯಕ್ತಿಯ ಉಡುದಾರ ತೆಗೆಯಬೇಕು.

ನರಿ ಮುಖ ನೋಡಿದರೆ ಅಂದಿನ ವ್ಯಾಪಾರವು ಚೆನ್ನಾಗಿ ಆಗುತ್ತದೆ.

ಅಮವಾಸ್ಯೆಯ ದಿವಸದಂತು ಅಂಗಡಿ ಪೂಜೆ, ರೈತರು ಗಂಗೆಯ ಪೂಜೆ ಮಾಡುತ್ತಾರೆ.

ದೇವಸ್ಥಾನಗಳಿಗೆ ಪಾದರಕ್ಷೆಗಳನ್ನು ಹಾಕಿಕೊಂಡು ಹೋಗಬಾರದು.

ದೇವರನ್ನು ನೆನಪಿಸಿಕೊಂಡರೆ ದುಷ್ಟ ಶಕ್ತಿಗಳು ನಮ್ಮ ಹತ್ತಿರ ಸುಳಿಯುವುದಿಲ್ಲ.

ಕಟ್ಟಿಗೆ ಹೊರೆ ಎದುರಾದರೆ ಶುಭಕಾರ್ಯಗಳಿಗೆ ಹೋಗುವಂತಿಲ್ಲ.

ಋತುಮತಿಯಾದ ಹುಡುಗಿ ಹೆಚ್ಚಾಗಿ ಓಡಾಡುವಂತಿಲ್ಲ, ಮನೆ ಕೆಲಸಗಳನ್ನು ಮಾಡುವಂತಿಲ್ಲ.

ಬಾಣಂತಿಯು ಹಳ್ಳ ಹರಿಯುವ ಮತ್ತು ನೀರು ಹರಿಯುವ ಸ್ಥಳಕ್ಕೆ ಹೋಗುವಂತಿಲ್ಲ.

ಶವ ಸಂಸ್ಕಾರಕ್ಕೆ ಹೋದವರು ನೇರವಾಗಿ ಮನೆಗಳಿಗೆ ಪ್ರವೇಶಿಸುವಂತಿಲ್ಲ.

ಸತ್ತಿರುವ ಮೃತ ದೇಹವನ್ನು ಮೂರು ನಾಲ್ಕು ದಿವಸಗಳವರೆಗೂ ಇಟ್ಟುಕೊಳ್ಳುವಂತಿಲ್ಲ.

ತಾಯಂದಿರು ಬಂಜೆ ಹೆಣ್ಣಿನ ಎದುರಿಗೆ ತನ್ನ ಮಗುವಿಗೆ ಹಾಲು ಕುಡಿಸಬಾರದಂತೆ.

ಮೂರು ಹೆಣ್ಣಿನ ಮೇಲೆ ಒಂದು ಗಂಡಾದರೆ ಅದು ಶುಭಕರ.

ಹೊರಗಡೆಯಾದ ಹೆಂಗಸರು ಹೂ ಬಳ್ಳಿಗಳನ್ನು, ಫಲ ಬಿಡುವ ಮರ ಗಿಡಗಳನ್ನು ಮುಟ್ಟಬಾರದು.

ಮನೆಯಲ್ಲಿ ಕಪ್ಪು ಇರುವೆ ತತ್ತಿ ಕಟ್ಟಿಕೊಂಡು ಸಾಲಾಗಿಹೋದರೆ ಅಮೃತ ಗಳಿಗೆ ಎನ್ನುವರು.

ಕಾಶಿಯಲ್ಲಿ ಸತ್ತರೆ ನೇರ ಸ್ವರ್ಗಕ್ಕೆ ಹೋಗುತ್ತಾರೆ.

ಅಮವಾಸ್ಯೆ ದಿನ ಹುಟ್ಟಿದ ಮಕ್ಕಳು ಕಳ್ಳರಾಗುತ್ತಾರೆ.

ಬಾಣಂತಿಯು ಜನನ ಸಂದರ್ಭದಲ್ಲಿ ಗಂಡನ ಮನೆಯಲ್ಲಿ ಇರುವಂತಿಲ್ಲ.

ಮಳೆ ಗುಡುಗು ಬಂದರೆ ಚೊಚ್ಚಲ ಮಕ್ಕಳು ಹೊರಗಡೆ ಹೋಗುವಂತಿಲ್ಲ.

ಬೇವಿನ ಕಟ್ಟಿಗೆ ಉರಿಸಿದರೆ ಕಷ್ಟಗಳು ಬರುತ್ತವೆ.

ಮದುಮಗನ ಕೈಯಲ್ಲಿ ನಿಂಬೆ ಹಣ್ಣು ಇರಬೇಕು.

ಪ್ರತಿ ನಿತ್ಯ ಸೂರ್ಯನ ಪೂಜೆಯನ್ನು ಮಾಡಬೇಕು.

ಭೂಮಿ ಪೂಜೆ ಮಾಡದೆ ಬಿತ್ತಬಾರದು.

ಒಕ್ಕಲು ಪೂಜೆ ಮತ್ತು ರಾಶಿಯ ಪೂಜೆ ಮಾಡಬೇಕು.

ಮನೆಯ ಮೇಲೆ ಗೂಬೆ ಕೂಗಬಾರದು ಒಳ್ಳೆಯದಲ್ಲ.

ದೇವರಲ್ಲಿ ಹೂ ಕೇಳಿದಾಗ ಬಲಗಡೆಯಿಂದ ಕೊಟ್ಟರೆ ಯಶಸ್ಸಿ. ಎಡಗಡೆ ಭಾಗದಿಂದ ನೀಡಿದರೆ ಅಶುಭ

ಮನೆಯ ಸೊಸೆಯು ಶುಕ್ರವಾರ ತವರಿಗೆ ಹೋಗಬಾರದು, ಮಂಗಳವಾರ ಮಗಳು ತವರಿನಿಂದ ಗಂಡನ ಮನೆಗೆ ಹೋಗಬಾರದು.

ರಾತ್ರಿ ಹೊತ್ತು ಕಸ ಹೊಡೆಯಬಾರದು, ಮನೆಯಿಂದ ಕಸವನ್ನು ರಾತ್ರಿಯಲ್ಲಿ ಹೊರಹಾಕುವಂತಿಲ್ಲ.

ಮಾತನಾಡುವಾಗ ಹಲ್ಲಿ ಲೋಚಗುಟ್ಟಿದರೆ ಮಾತನಾಡುವ ಮಾತು ಸತ್ಯವಾಗುತ್ತದೆ.

ಬೆಕ್ಕುಗಳು ಜಗಳವಾಡಿದರೆ, ಮನೆಯವರು ಜಗಳವಾಡುತ್ತಾರೆ.

ಒಳ್ಳೆಯ ಕಾರ್ಯಕ್ಕೆ ಹೋಗುವಾಗ ''ಬಳೆ ಮಲ್ಲಾರ'', ತುಂಬಿದ ಬಿಂದಿಗೆ ಮತ್ತು ಕೊಡ, 'ಹಾಲು ಮಾರುವವ', ಇವರೆಲ್ಲಾ ಎದುರಿಗೆ ಬಂದರೆ ಇವು ಒಳ್ಳೆಯ ಶಕುನಗಳು.

ಹಿಮ್ಮಡಿ ತೊಳೆಯದೆ ಒಳಗೆ ಬರಬಾರದು.

ಸತ್ತವರಿಗೆ ತಿಥಿ ಮಾಡದೆ ಹೋದರೆ ದೆವ್ವಗಳಾಗಿ ಕಾಡುತ್ತಾರೆ.

ಬಾಗಿಲ ಹೊಸ್ತಲಿನ ಮೇಲೆ ನಿಂತು ಸೀನ ಬಾರದು.

ಹಾಲು ಹಾಕಿದರೆ ಒಳ್ಳೆಯದು.

ಮನೆ ಬಿಡುವಾಗ ಯಾರಾದರೂ ಎಲ್ಲಿಗೆ ಎಂದು ಕೇಳಿ ಬಿಟ್ಟರೆ ಹೋದ ಕೆಲಸಕ್ಕೆ ಕೇಡು.

ಮಕ್ಕಳಿಗೆ ದೃಷ್ಟಿಯಾಗಬಾರದೆಂದು ಇಳಿತೆಗೆಯುವುದು.

ಒಂಟಿ ಬ್ರಾಹ್ಮಣ ಮತ್ತು ವಿಧವೆಯನ್ನು ನೋಡಿದರೆ ಅಶುಭ.

ರಾವು ಕಾಲದಲ್ಲಿ ಯಾವ ಕೆಲಸ ಮಾಡಬಾರದು.

ಮದುವೆಯಲ್ಲಿ ಬಾಸಿಂಗ ಮುರಿದರೆ ಅಪಶಕುನ.

ಬೆಳಗ್ಗೆ ಏಳುವಾಗ ಬಲಮಗ್ಗುಲಿನಲ್ಲಿ ಏಳಬೇಕು.

ಬೆಕ್ಕು ಎಡದಿಂದ ಬಲಕ್ಕೆ ದಾಟಿದರೆ ಹೆಂಗಸರಿಗೆ ಒಳ್ಳೆಯದು.

ಬೆಕ್ಕು ಎದುರಿನಲ್ಲಿ ದಾಟಿ ಹೋದರೆ ಸ್ವಲ್ಪ ಹೊತ್ತು ನಿಂತು ಹೋಗಬೇಕು. ಇದು ಅಪಶಕುನದ ಸಂಕೇತವನ್ನು ಸೂಚಿಸುತ್ತದೆ.

ಮಂಗಳವಾರ ಮತ್ತು ಅಮವಾಸ್ಯೆ ದಿನಗಳಲ್ಲಿ ಹೊಸ ಶುಭಕೆಲಸಗಳನ್ನು ಮಾಡಬಾರದು.

ಒಂಟಿ ಸೀನು ಸೀನಿದರೆ ಕೆಡುಕು.

ಶುಭ ಕಾರ್ಯಕ್ರಮಗಳಲ್ಲಿ ಮುತ್ತೈದೆಯರು ಮುಂದಾಗಿ ಕಾರ್ಯ ನಿರ್ವಹಿಸಬೇಕು.

ಹೆಣ್ಣು ಮಗು ಋತುಮತಿಯಾದರೆ ಪ್ರತ್ಯೇಕ ಕೋಣೆಯಲ್ಲಿರಿಸಬೇಕು.

ಐದು ಜನ ಮುತ್ತೈದೆಯರು ಮದುವೆ ಕಾರ್ಯಕ್ರಮದಲ್ಲಿ ಸುರಗಿ ನೀರು ಹಾಕಬೇಕು.

ದೇವರ ಮುಂದೆ ಹಚ್ಚಿದ ದೀಪವು ನಂದಬಾರದು, ಇದು ಅಶುಭ.

ವಿಭೂತಿ ಗಟ್ಟಿ ಒಡೆಯಬಾರದು, ಇದು ಅಶುಭ.

ಮದುಮಗ ಮದುವೆಗೆ ಪೂರ್ವದಲ್ಲಿಕುಲದೈವಕ್ಕೆ ನಮಸ್ಕಾರ ಮಾಡಬೇಕು.

ಋತುಮತಿ ಹಾಗೂ ಬಾಣಂತಿಯು ಮಲಗುವ ತಲೆಯ ಹಿಂಬದಿಯಲ್ಲಿ ಕುಡುಗೋಲು ಚಪ್ಪಲಿ, ಕಸಬರಿಗೆ ಇಟ್ಟರೆ, ದುಷ್ಟ ಶಕ್ತಿಗಳು ಅವರ ಹತ್ತಿರ ಸುಳಿಯುವುದಿಲ್ಲ.

**ಮಾಟ ಮಾಡಿಸುವುದು**

ಗಾಣಿಗರಲ್ಲಿ ಮಾಟ ಮಾಡಿಸುವುದು ರೂಢಿಯಲ್ಲಿದೆ. ಈ ಜನರು ಒಬ್ಬರಿಗೊಬ್ಬರು ಮಾತ್ಸರ್ಯದಿಂದ ಒಬ್ಬರ ಬದುಕುವಿಕೆಯನ್ನು ಕಂಡು ಇನ್ನೊಬ್ಬರು ಅಸೂಹೆ ಮಾಡುತ್ತಾರೆ. ಒಂದು ಸಂಸಾರದಲ್ಲಿ ವಾಸ ಮಾಡುವ ಅಣ್ಣ ತಮ್ಮಂದಿರ ಹೆಂಡತಿಯರ (ವಾರಗಿತ್ತಿಯರು) ಒಬ್ಬರಿಗೊಬ್ಬರು ಮಾತ್ಸರ್ಯ ಬೆಳೆಸಿಕೊಂಡು ಮಾಟ ಮಾಡಿಸುತ್ತಾರೆ.

'ಮಾಟ' ಎಂದರೆ 'ಮಾಯ' ಎಂದರ್ಥವಾಗುತ್ತದೆ, ಇನ್ನೂ ಮುಂದಕ್ಕೆ ಹೋದರೆ ಮಂತ್ರ ಎಂದು ಹೇಳಬಹುದು. ಈಗಲೂ ಹಳ್ಳಿಗಳಲ್ಲಿ ಹೆಂಗಸರು ತಮ್ಮ ಬೈದಾಟದಲ್ಲಿ ಮಂತ್ರವಾದಿ ಎಂದು ಬೈಯುತ್ತಾರೆ.

ಒಟ್ಟು ಮಂತ್ರವಾದಿಯನ್ನು ಬಿಗಿಯಾಗಿ ಹಿಡಿಯುತ್ತಾರೆ. ಈತ ಮಾಟ ಮಾಡಲು ಬೇಕಾಗುವ ವಸ್ತುಗಳನ್ನು ಒದಗಿಸುತ್ತಾರೆ. ಈ ಮಂತ್ರವಾದಿಯು ಯಾರಿಗೆ ಮಾಟ ಮಾಡಬೇಕು ಎಂದು ಮೊದಲು ತಿಳಿಯುತ್ತಾರೆ. ತಿಳಿದ ಮೇಲೆ ಆತನು ಓಡಾಡುವ ಸ್ಥಳ ಇತ್ಯಾದಿಯನ್ನು ಮಂತ್ರವಾದಿಯು ಮೊದಲು ಗ್ರಹಿಸುತ್ತಾನೆ. ಆತನು ನಡೆದುಕೊಂಡು ಮುಂದಕ್ಕೆ ಹೋದ ಮೇಲೆ ಆತನ ಹೆಜ್ಜೆಯಲ್ಲಿರುವ ಮಣ್ಣನ್ನು ತೆಗೆದುಕೊಂಡು ಒಂದು ಬಟ್ಟೆಯಲ್ಲಿ ಕಟ್ಟಿಕೊಳ್ಳುತ್ತಾನೆ, ನಂತರ ಒಂದು ಅಮವಾಸ್ಯೆಯ ದಿನ ಸ್ಮಶಾನದಲ್ಲಿ ಒಂದು ಕರಿಯ ಹಂದಿಯನ್ನು ತಾನು ಒಲಿಸಿಕೊಂಡಿರುವ ದೇವತೆಗೆ ಬಲಿಕೊಡುತ್ತಾನೆ. ಆ ಹಂದಿಯ ತಲೆಯನ್ನು ಆತನು ಓಡಾಡುವ ಜಾಗದಲ್ಲಿ ಹೂಳುತ್ತಾನೆ. ಈ ಹಂದಿಯ ತಲೆ ಬುರುಡೆಯು ಕೊಳೆಯುವ ಹಾಗೆ ಅತನ ಆರೋಗ್ಯ

ಸ್ಥಿತಿಯು ಹದಗೆಡುತ್ತದೆ. ಕೊನೆಗೆ ಮರಣವನ್ನು ಹೊಂದ ಬಹುದಾಗಿದೆ. ಈ ರೀತಿಯಲ್ಲಿ ಇವರಲ್ಲಿ ಮಾಟ ಮಂತ್ರವನ್ನು ಮಾಡಿಸುವ ಪದ್ಧತಿ ಇದೆ.

**ವೈದ್ಯ ವಿಧಾನ**

ಸಜ್ಜನ ಗಾಣಿಗ ಸಮುದಾಯದಲ್ಲಿ ವೈದ್ಯ ವಿಧಾನದ ಬಗ್ಗೆ ಹೇಳುವಾಗ ಯಾವ ರೋಗಕ್ಕೆ ಯಾವ ಮದ್ದು, ಅದನ್ನು ಬಳಸುವ ಬಗೆ ಹೇಗೆ ಎಂಬುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಲಾಗಿದೆ, ಉದಾಹರಣೆಗೆ ಕೆಲವು ಔಷದೋಪಚಾರದ ವಿಧಾನಗಳನ್ನು ಇಲ್ಲಿ ಚರ್ಚಿಸಲಾಗಿದೆ, ನಿರ್ಧಿಷ್ಟ ರೋಗಗಳಿಗೆ ನಿರ್ಧಿಷ್ಟ ಮದ್ದುಗಳನ್ನು ಕಂಡುಕೊಳ್ಳಲಾಗಿದೆ.

**ಕಣ್ಣು ಬೇನೆ**: ಕಣ್ಣು ನೋವು ಬಂದಾಗ ತಾಯಿಯ ಮೊಲೆಯ ಹಾಲು ಕಣ್ಣಿನೊಳಗೆ ಬಿಡಲಾಗುತ್ತದೆ. ಕಣ್ಣಿನಲ್ಲಿ ಕಸಬಿದ್ದು ನೋಯುತ್ತಿದ್ದರೆ ಕಸ ಬಿದ್ದ ಕಣ್ಣನ್ನು ನೀರು ತುಂಬಿದ ತಟ್ಟೆಯಲ್ಲಿ ಕಣ್ಣನ್ನು ಮಿಟುಕಿಸಲು ಹೇಳುವರು ಇದರಿಂದ ಕಣ್ಣಲ್ಲಿ ಬಿದ್ದ ಕಸವು ಹೊರಬರುತ್ತದೆ.

**ತಲೆನೋವು**: ತಲೆನೋವು ಬಂದರೆ ಬೆಳ್ಳುಳ್ಳಿ ಅರೆದು ಹಣೆಯ ಬಲಗಡೆ ಭಾಗ ಹಾಗೂ ಎಡಗಡೆಯ ಭಾಗಕ್ಕೂ ಹಚ್ಚಿಕೊಳ್ಳಬೇಕು. ಈ ರೀತಿಯಾಗಿ ದಿನದಲ್ಲಿ ಮೂರು ಬಾರಿ ಹಚ್ಚಿಕೊಂಡರೆ ತಲೆನೋವು ವಾಸಿಯಾಗುತ್ತದೆ.

**ಬಟ್ಟಿ**: ಭಾರವಾದ ವಸ್ತುಗಳನ್ನು ಎತ್ತುವುದರಿಂದ, ಕಠಿಣವಾದ ಕೆಲಸಗಳನ್ನು ಮಾಡುವುದರಿಂದ ಬಟ್ಟಿಯು ಬೀಳುತ್ತದೆ. ಇದರಿಂದ ಹೊಕ್ಕಳದ ಹತ್ತಿರ ನೋವು ಪ್ರಾರಂಭವಾಗುತ್ತದೆ. ನೋವನ್ನು ಹೋಗಿಸಲು ಹರಳೆಣ್ಣೆಯಿಂದ ಹೊಕ್ಕಳವನ್ನು ನೀವಿಸಿಕೊಳ್ಳುತ್ತಾರೆ. ಜೊತೆಗೆ ಹರಳೆಣ್ಣೆಯಿಂದ ಕಾಲನ್ನು ನೀವಿಸಿಕೊಳ್ಳುತ್ತಾರೆ ಇದರಿಂದ ಬಟ್ಟಿಯು ವಾಸಿಯಾಗುತ್ತದೆ.

**ಮೂರ್ಚೆ ಹಾಗೂ ಜ್ವರ**: ರೋಗಿಯು ವಿಪರಿತವಾಗಿ ಜ್ವರ ಬಂದು ಬಳಲುತ್ತಿದ್ದರೆ ಅಥವಾ ಪ್ರಜ್ಞಾಹೀನನಾಗಿ ಮೂರ್ಚೆಹೋದಾಗ ಹಸಿರು ಬಳೆಯನ್ನು ದೀಪದಿಂದ ಕಾಯಿಸಿ ರೋಗಿಯ ಮುಖ್ಯನರಗಳನ್ನು ಗುರುತಿಸಿ ಅಂದರೆ ತಲೆಯ ಹಿಂಬದಿಯ ಕುತ್ತಿಗೆಯ ಭಾಗ, ತಲೆಯ ನೆತ್ತಿಯ ಭಾಗ, ಎದೆಯ ಭಾಗ, ಕಾಲಿನ ಹೆಬ್ಬೆರಳು ಭಾಗದಲ್ಲಿರುವ ಪ್ರಮುಖ ನರಗಳನ್ನು ಗುರುತಿಸಿ ಆ ಭಾಗದಲ್ಲಿ ಸುಡುತ್ತಾರೆ. ಇದನ್ನು ಚುಟುಕಿ ಹಾಕುವುದು ಎನ್ನುತ್ತಾರೆ. ಇದರಿಂದ ರೋಗಿಯು ಪ್ರಜ್ಞಾಹೀನ ಸ್ಥಿತಿಯಿಂದ ಹಾಗೂ ಜ್ವರದ ಅಮಲಿನಿಂದ ಜಡ್ಡನ್ನು ಕಳೆದುಕೊಳ್ಳುತ್ತಾನೆಂದು ಹೇಳುತ್ತಾರೆ. ಜ್ವರ ಬಂದ ವ್ಯಕ್ತಿಯು ಸುಟ್ಟ ಸಂದರ್ಭದಲ್ಲಿ ಪೂರ್ಣ ಬೆವರು ಬಂದು ಜ್ವರವು ಇಳಿಮುಖವಾಗುತ್ತದೆ. ಕಡೆಗೆ ತುಂಬಿದ ನೀರನ್ನು ಇಳೆದೆಗೆದು ಹೊರಗೆ ರಸ್ತೆಗೆ ಚಲ್ಲುತ್ತಾರೆ.

**ಹಲ್ಲುನೋವು**: ಬೇವಿನ ಕಡ್ಡಿಯಿಂದ ಹಲ್ಲುಜ್ಜಿದರೆ ಹಲ್ಲುನೋವು ಬರುವುದಿಲ್ಲವೆಂದು ತಿಳಿಸಿದ್ದಾರೆ. ಇವರಿಗೆ ಹಲ್ಲುನೋವು ಬಂದಾಗ ಲವಂಗವನ್ನು ಚೆನ್ನಾಗಿ ಪುಡಿಮಾಡಿ ಹಲ್ಲುನೋಯುವ ಸ್ಥಳದಲ್ಲಿ ಇಟ್ಟುಕೊಳ್ಳುತ್ತಾರೆ. ಈ ಕ್ರಿಯೆ ದಿನದಲ್ಲಿ ಮೂರು ಸಾರಿ ಮಾಡಿದರೆ ಹಲ್ಲುನೋವು ಇರುವುದಿಲ್ಲವೆಂದು

ಹೇಳುತ್ತಾರೆ. ಹಲ್ಲುನೋವು ಬಂದಾಗ ಎಕ್ಕೆಯ ಹಾಲಿನಲ್ಲಿ ಹಲ್ಲುಜ್ಜಿದರೆ ಹಲ್ಲುನೋವು ಹೋಗುತ್ತದೆ ಎಂದು ಹೇಳುತ್ತಾರೆ.

**ಕುರ/ಹದಗಡಲೆ**: ಕುರವೆದ್ದ ಜಾಗಕ್ಕೆ ಅರಳೆಯನ್ನು ಅರಿಶಿಣ ಪುಡಿಯಲ್ಲಿ ನೆನೆಸಿ ಕುರದ ಮೇಲೆ ಹಾಕುವುದರಿಂದ, ಬಿಸಿಯಾದ ರಾಗಿ ಮುದ್ದೆಗೆ ಬೆಣ್ಣೆಯನ್ನು ಸವರಿ ಕುರಕ್ಕೆಹಾಕುದರಿಂದ, ಮುತ್ತುಗದ ಎಲೆಯನ್ನು ಎಣ್ಣೆ ಹಚ್ಚಿ ದೀಪದಿಂದ ಸುಟ್ಟು ಕುರಕ್ಕೆ ಹಾಕಿದಲ್ಲಿ ಕುರವು ಪಾಕಕ್ಕೆ ಬಂದು ಒಡೆದುಹೋಗುತ್ತದೆ ಎಂದು ತಿಳಿಸಿದ್ದಾರೆ.

**ಹೊಟ್ಟೆನೋವು**: ಹೊಟ್ಟೆನೋವು ಇದ್ದರೆ ನಿಂಬೆಹಣ್ಣಿನ ರಸ, ಸೋಡಾಪುಡಿಯನ್ನು ನೀರಿನಲ್ಲಿ ಕಲಕಿ ಕುಡಿಯುವುದರಿಂದ ಹೊಟ್ಟೆನೋವು ವಾಸಿಯಾಗುತ್ತದೆ ಎಂದು ಹೇಳಿದ್ದಾರೆ.

**ಕಿವಿ ಸೋರುವುದು**: ಮಕ್ಕಳಿಗೆ ಕಿವಿ ಸೋರುತ್ತಿದ್ದರೆ ಬಿಸಿನೀರನ್ನು ಸೋರುತ್ತಿದ್ದ ಕಿವಿಗೆ ಮುಖ್ಯಸ್ಥನು ಬಾಯಿಯಲ್ಲಿ ಹಾಕಿಕೊಂಡು ಸೋರುವ ಕಿವಿಗೆ ಉಗುಳುವರು, ಸ್ವಲ್ಪ ಸಮಯದ ನಂತರ ಬೆಳ್ಳುಳ್ಳಿಯನ್ನು ಕೊಬ್ಬರಿ ಎಣ್ಣೆಯಲ್ಲಿ ಕಾಯಿಸಿ ಕಿವಿಗೆ ಹಾಕುತ್ತಾರೆ.

**ಕೆಮ್ಮು**: ಹುರಿಕಡ್ಲೆ, ಬೆಳ್ಳುಳ್ಳಿ ಉಪ್ಪು ಮೂರನ್ನು ಸೇರಿಸಿ ತಿನ್ನುವುದರಿಂದ ಕೆಮ್ಮು ವಾಸಿಯಾಗುತ್ತದೆ ಹಾಗೂ ತುಳಸಿಯ ಎಲೆಗಳನ್ನು ತಿನ್ನುವುದರಿಂದ ಕೆಮ್ಮು ವಾಸಿಯಾಗುತ್ತದೆ ಎಂದು ತಿಳಿಸಿದ್ದಾರೆ.

**ಮುಖದ ಮೊಡವೆಗಳು**: ಕಡ್ಲೆಹಿಟ್ಟು ಅರಿಷಿಣವನ್ನು ಸೇರಿಸಿ ಮುಖಕ್ಕೆ ಲೇಪಿಸಿಕೊಳ್ಳುವುದರಿಂದ, ಶ್ರೀಗಂಧವನ್ನು ತೇದು ಮುಖಕ್ಕೆ ಹಚ್ಚಿಕೊಳ್ಳುವುದರಿಂದ ಮುಖದ ಮೊಡವೆಗಳು ಹೋಗಿ ಸೌಂದರ್ಯ ಬರುತ್ತದೆ ಎಂದು ಹೇಳಿದ್ದಾರೆ.

**ನೋವು ನಿವಾರಣೆ** : ನೋವಿದ್ದ ಜಾಗಕ್ಕೆ ಅರಿಶಿಣದ ಬೇರುಗಳನ್ನು ತೇದು ಅದನ್ನು ಕುದಿಸಿ ನೋವಿರುವ ಜಾಗಕ್ಕೆ ಹಚ್ಚುವುದರಿಂದ ನೋವು ವಾಸಿಯಾಗುತ್ತದೆ.

**ಗಾಯ** : ಗಾಯವಾದ ಜಾಗಕ್ಕೆ ತಂಗಟೆ ಎಲೆಗಳನ್ನು ಕುಟ್ಟಿ ಅದರಿಂದ ರಸತೆಗೆದು ಅದನ್ನು ಗಾಯಕ್ಕೆ ಹಾಕಿದಲ್ಲಿ ಗಾಯವು ವಾಸಿಯಾಗುತ್ತದೆ ಎಂದು ಹೇಳಿದ್ದಾರೆ. ಮತ್ತು ಗಾಯಕ್ಕೆ ಸೀಮೆ ಎಣ್ಣೆ ಹಾಕಿಕೊಳ್ಳುವುದರಿಂದ ಗಾಯವು ವಾಸಿಯಾಗುತ್ತದೆ ಎನ್ನುತ್ತಾರೆ.

**ಅತಿಸಾರ ಬೇಧಿಯಾದರೆ** : ಮೊಸರನ್ನ ಮಂಡಕ್ಕಿ ಸೇರಿಸಿ ತಿನ್ನುತ್ತಾರೆ. ಮೊಸರು, ಮೆಂತೆಕಾಳು ಸೇರಿಸಿ ಕುಡಿಯುತ್ತಾರೆ.

**ನೆಗಡಿಗೆ** : ಸೊಂಟಿ ಕಾಫಿಯನ್ನು ಮಾಡಿ ಕುಡಿಯುತ್ತಾರೆ.

**ಬಾಣಂತಿಯರಿಗೆ ವಿಶೇಷವಾಗಿ ವೈದ್ಯೋಪಚಾರ ಪದ್ಧತಿ ಅನುಸರಿಸುವ ವಿಧಾನಗಳು.**

* ಬಾಣಂತಿಯರಿಗೆ ಬೇವಿನ ಸೊಪ್ಪನ್ನು ನೀರಿನಲ್ಲಿ ಹಾಕಿ ಕುದಿಸಿ ಆ ನೀರನ್ನು ಸ್ನಾನಮಾಡಿಸುವುದರಿಂದ ಅಂಟು ರೋಗಗಳು ಬರುವುದಿಲ್ಲವೆಂದು ಹೇಳುತ್ತಾರೆ.

* ಅರಿಷಿಣ ಮೊಡಿ, ಇದ್ದಿ, ಒಳ್ಳೆಣ್ಣೆ, ಉಪ್ಪು, ಬೆಳ್ಳುಳ್ಳಿಯನ್ನು ಮಿಶ್ರಮಾಡಿ ಒಂದು ಹೊಸ ಮಡಿಕೆಯಲ್ಲಿ ಹಾಕಿ ಬೆಂಕಿಯ ಮೇಲೆ ಬಿಸಿಮಾಡಿ ಪ್ರತಿದಿನ ಬಾಣಂತಿಗೆ ಮೈತುಂಬಾ ಲೇಪಿಸಿ ಬಿಸಿ ನೀರಿನಿಂದ ಸ್ನಾನವನ್ನು ಮಾಡಿಸುತ್ತಾರೆ. ಇದರಿಂದ ಯಾವುದೇ ರೀತಿ ಬಾಣಂತಿಗೆ ಸೊಂಕು ಉಂಟಾಗುವುದಿಲ್ಲವೆಂದು ಹೇಳುತ್ತಾರೆ.
* **ಬಾಣಂತಿ ಖಾರ:** ಕೊಬ್ಬರಿ, ಅಂಟು, ಬೆಲ್ಲ, ಉತ್ತುತ್ತಿ, ತುಪ್ಪ, ಇಪ್ಲಿ, ಜಾಜಿಕಾಯಿ, ಜಾಪತ್ರೆ ಇವೆಲ್ಲವುಗಳನ್ನು ತುಪ್ಪದಲ್ಲಿ ಹುರಿದು ಬಾಣಂತಿ ಖಾರ ತಯಾರಿಸುತ್ತಾರೆ. ಹೆರಿಗೆಯಾದ ಸ್ತ್ರೀಗೆ ಇದನ್ನು ನೀಡುತ್ತಾರೆ. ಇದು ಸ್ತ್ರೀಗೆ ಶಕ್ತಿಯನ್ನು ತಂದು ಕೊಡುತ್ತದೆಂದು ಹೇಳುತ್ತಾರೆ.
* ತಾಯಿ ಎದೆಹಾಲು ಹೆಚ್ಚಾಗಲು ಬಿಸಿ ಅನ್ನದಲ್ಲಿ ತುಪ್ಪ ಹಾಗೂ ಬೆಳ್ಳುಳ್ಳಿ ಸಾರನ್ನು ಊಟ ಮಾಡುವುದರಿಂದ ಹಾಗೂ ಮೆಂತೆಸೊಪ್ಪು ಉಪಯೋಗಿಸುವುದರಿಂದ ಎದೆ ಹಾಲು ಹೆಚ್ಚುತ್ತದೆಯೆಂದು ಹೇಳುತ್ತಾರೆ.
* ತಾಯಿಯ ಪ್ರಾರಂಭ ಹಾಲನ್ನು ಮಗುವಿಗೆ ಕುಡಿಸಬೇಕು ಇದು ರೋಗನಿರೋಧಕ ಶಕ್ತಿಯನ್ನು ಹೊಂದಿರುತ್ತದೆ.
* ಬಾಣಂತಿಯನ್ನು ಬೆಚ್ಚನೆಯ ವಾತವರಣದಲ್ಲಿರಿಸಬೇಕೆಂದು ಮತ್ತು ಸ್ನಾನದ ನಂತರ ಬೆಂಕಿಯನ್ನು ಕಾಯಿಸಲು ಕೆಂಡವನ್ನು ತಟ್ಟೆಯಲ್ಲಿ ಹಾಕಿಕೊಡುತ್ತಾರೆ. ಇದರಿಂದ ಬಾಣಂತಿಯು ಆರೋಗ್ಯವಾಗಿರುತ್ತಾಳೆ ಎಂದು ತಿಳಿಸಿರುತ್ತಾರೆ.
* ಮಗುವಿಗೆ ಎಣ್ಣೆಯನ್ನು ಹಚ್ಚಿ ದಿನವು ಸ್ನಾನಮಾಡಿಸಬೇಕು.
* ಬಾಣಂತಿಗೆ ಅತಿ ಸರಳವಾಗಿ ಜೀರ್ಣವಾಗುವ ಆಹಾರವನ್ನು ಕೊಡಬೇಕು. ಅದು ಪೌಷ್ಠಿಕರವಾಗಿರಬೇಕು ಎಂದು ಹೇಳುತ್ತಾರೆ.
* ಬಾಣಂತಿಯರಿಗೆ ಮಗುವಿಗೆ ಕಾಲಕ್ಕನುಗುಣವಾಗಿ ಲಸಿಕೆಗಳನ್ನು ಹಾಕಿಸಬೇಕು.

**ಸಜ್ಜನ ಗಾಣಿಗರು ಬಳಸುವ ಗೃಹೋಪಯೋಗಿ ಔಷಧಿ**

| ಔಷಧಿ ಹೆಸರು | ರೋಗದ ಹೆಸರು |
|---|---|
| ೧. ಹುರಿಕಡ್ಲೆ ಉಪ್ಪು ತುಳಸಿದಳಗಳು | ಕೆಮ್ಮು |
| ೨. ನಿಂಬೆ ಹಣ್ಣಿನ ರಸ, ಸೋಡಾಪುಡಿ ನೀರಿನ ಸಂಮಿಶ್ರಣ | ಹೊಟ್ಟೆ ಉಬ್ಬರ, ಹೊಟ್ಟೆನೋವು |
| ೩. ಬೆಳ್ಳುಳ್ಳಿ | ತಲೆನೋವು |
| ೪. ನಿಂಬೆ ಹಣ್ಣಿನ ರಸ ಮೊಸರು ಮಂಡಕ್ಕಿ ಮೊಸರು, ಮೆಂತ್ಯೆಕಾಳು ಸೇರಿಸಿ ಕುಡಿಸುತ್ತಾರೆ. | ಮಂದ ಬೇಧಿ |

೫. ಬೆಳ್ಳುಳ್ಳಿ ಎಣ್ಣೆಲ್ಲಿ ಕಾಯಿಸಿ ಆರಿಸಿದ್ದನ್ನು ಕಿವಿ ಸೋರುವುದು.

೬. ಕೊಬ್ಬರಿ ಎಣ್ಣೆ ಹೊಟ್ಟೆನೋವು

೭. ಲವಂಗ ಹಲ್ಲುನೋವು

೮. ತಾಯಿ ಮೊಲೆ ಹಾಲು ಕಣ್ಣುನೋವು

೯. ಕಡ್ಲೆಹಿಟ್ಟು, ಅರಿಶಿಣ ಮುಖದ ಮೊಡವೆಗಳು

೧೦. ಬೆಣ್ಣೆ, ಬಿಸಿ ರಾಗಿಮುದ್ದೆ ಅರಿಷಿನ ಬತ್ತಿ ಕುರ

ಮನುಷ್ಯ ತನಗೆ ಅರಿವಿದ್ದೊ ಅರಿವಿಲ್ಲದೆಯೇ ಹಲವಾರು ಔಷಧಿಗಳನ್ನು ಕಂಡುಕೊಂಡಿದ್ದಾನೆ. ಆಹಾರದಷ್ಟೇ ಆರೋಗ್ಯವು ಬಹುಮುಖ್ಯ ಎಂಬುದನ್ನು ಇದು ಸೂಚಿಸುತ್ತದೆ. ಇವರು ಉಪಯೋಗಿಸುವ ಔಷಧಿಗಳಾಗಲಿ ರೋಗವನ್ನು ನಿಯಂತ್ರಿಸಲು ನಡೆಸುವ ತಾಂತ್ರಿಕ ಸ್ವರೂಪಗಳಾಗಿರಲಿ ವೈಜ್ಞಾನಿಕತೆಯಿಂದ ಕೂಡಿದೆ ಎಂದು ತಿಳಿಸುವುದು ಕಷ್ಟವಾದರೂ ಇದು ನಿರುಪಯುಕ್ತ ಔಷಧಿಗಳೆಂದು ವಾದಿಸುವುದು ಕಷ್ಟ. ತಲೆಮಾರುಗಳಿಂದ ಇದರೊಳಗೆ ಬಳಕೆಗೊಳ್ಳುತ್ತಿರುವ ನಾಡ ಔಷಧಿಗಳು ರೋಗಗಳನ್ನು ನಿಯಂತ್ರಿಸುವ ಶಕ್ತಿಯನ್ನು ಹೊಂದಿದವುಗಳಾಗಿರುವುದರಿಂದ ಇದರೊಳಗೆ ಇನ್ನು ಜೀವಂತವಾಗಿ ಉಳಿದು ಬಂದಿರಬೇಕು. ಇವರು ಉಪಯೋಗಿಸುವ ಗೃಹೋಪಯೋಗಿ ಬಳಕೆಯ ಔಷಧಿಗಳನ್ನು ವೈಜ್ಞಾನಿಕ ಶೋಧನೆಗೆ ಓರೆಹಚ್ಚಿ ನೋಡಿ ಸಾರ್ವಜನಿಕರ ಉಪಯೋಗಕ್ಕೆ ದೊರಕುವಂತೆ ಮಾಡಿದಲ್ಲಿ ಎಷ್ಟೋ ಹೊಸ ರೋಗಗಳಿಗೆ ಹೊಸ ಹೊಸ ಔಷಧಿಗಳು ದೊರೆಯಬಹುದೇನೋ, ಸಜ್ಜನ ಗಾಣಿಗರಲ್ಲಿ ಬಳಕೆಯಲ್ಲಿರುವ ಔಷಧಿಗಳು ಅವೈಜ್ಞಾನಿಕವಾಗಿದ್ದರು ಅವುಗಳನ್ನು ತಿರಸ್ಕರಿಸುವುದು ಸಮಂಜಸವಲ್ಲ.

**ಸಜ್ಜನ ಗಾಣಿಗರಲ್ಲಿ ರಂಗೋಲಿ ಅಥವಾ ಶ್ರದ್ಧೆ**

''ಬದುಕು ಒಂದು ಸುಂದರ ರಂಗೋಲಿ ಅದರ ಚಿಕ್ಕ ಕ್ರಮ ತಪ್ಪಿದರೂ ಅಂದಗೆಡುತ್ತದೆ'' ರಂಗೋಲಿಗೆ ಮನ ಸೋಲದವರ್‍ಯಾರಾದರೂ ಇದ್ದರೆಯಾದರೆ ಖಂಡಿತ ಅವರು ಮನುಷ್ಯರಲ್ಲ ಎಂದು ಹೇಳಬಹುದು. ರಂಗೋಲಿ ಹೇಗಾದರೂ ಇರಲಿ ಆದರೆ ಅದೊಂದು ಚಿತ್ತಾರ, ರಂಗೋಲಿ ಹಾಕಿದವಳು ತನ್ನ ಹೃದಯದ ಭಾವನೆಯನ್ನು ಚುಕ್ಕೆಗೆರೆ, ಬಣ್ಣಗಳ ಮುಖಾಂತರ ಅಂಗಳದಲ್ಲಿ ಹರಡಿರುತ್ತಾಳೆ. ರಂಗೋಲಿಯೊಂದರ ಹಿಂದಿರುವ ಭಾವ ಭಾವನೆಗಳನ್ನು ಅರ್ಥ ಮಾಡಿಕೊಳ್ಳದೇ ಹೋದರೂ ತೊಂದರೆಯಿಲ್ಲ, ರಂಗೋಲಿಯೊಳಗಿನ ಸೌಂದರ್ಯವನ್ನು ಸವಿದರೆ ಸಾಕು.

ರಂಗೋಲಿಯೊಂದು ಸುಮ್ಮನೆ ಸೃಷ್ಠಿಯಾಗುವದಿಲ್ಲ. ಮುಂಜಾನೆಯ ರವಿಕಿರಣ ಅಂಗಳಕ್ಕೆ ಚೆಲ್ಲುವ ಮೊದಲೇ ಅಲ್ಲೊಂದು ಸುಂದರ ಚಿತ್ತಾರ ವರ್ಣಗಳ ಪುಷ್ಪ ಸಂಕುಲದಂತಹ ರಂಗೋಲಿಯೊಂದು ತರಣೆಯೊಬ್ಬಳ ಅಗಾಧ ಶ್ರದ್ಧೆಯ ಪ್ರತೀಕವಾಗಿ ಅರಳಿಕೊಂಡಿರುತ್ತದೆ. ಅವಳ ನಯವಾದ ಬೆರಳ ತುದಿಯಿಂದ ಅತಿ ನಾಜೂಕಾಗಿ ಉದುರುವ ಶ್ವೇತ ಪುಡಿಯ ಚುಕ್ಕೆ ಗೆರೆ ಚಿತ್ತಾರಗಳ ಸೃಷ್ಠಿಯನ್ನು ಕಾಣುವುದೇ ಒಂದು

ಸೊಗಸು. ಬೆಳಿಗ್ಗೆ ಅಂಗಳಕ್ಕೆ ನೀರು ಚಿಮುಕಿಸಿ, ಕಸಗುಡಿಸಿ, ಹಿಟ್ಟು ಬಣ್ಣಗಳನ್ನು ಹಿಡಿದು ಚುಕ್ಕೆ ಇಡುವುದರಲ್ಲಿ ತಲ್ಲೀನಳಾದಳೆಂದರೆ ಆ ಏಕಾಗ್ರತೆಯನ್ನು ಭಂಗಗೊಳಿಸಲು ಬ್ರಹ್ಮನಿಗೂ ಸಾಧ್ಯವಾಗದು. ಹಾಗೆ ಕುಳಿತಿರುವ ಹುಡುಗಿಯ ಕೈಯಿಂದ ಸುಂದರ ರಂಗೋಲಿ ಮನೆಯಂಗಳದಲ್ಲಿ ಮಾಡುತ್ತಾಹೋದಂತೆ ಆಕೆಯ ಮನದ ಅಂಗಳದಲ್ಲಿ ಮೂಡುವ ರಂಗೋಲಿ ಅದೆಂತಹುದೋ? ಅಲ್ಲಿ ಯಾವ ಹುಡುಗನ ಮೈ ಹೆಜ್ಜೆ, ಮುದ್ದು ನಗು ಸಣ್ಣ ಕೇಕೆಗಳಿರುತ್ತವೋ? ಕೆಲವರು ರಾತ್ರಿಯೇ ನೆಲತೊಳೆದು ದೀಪವನ್ನಿಟ್ಟುಕೊಂಡು ರಂಗೋಲಿ ಬರೆದು ಬಿಡುತ್ತಾರೆ. ಬೆಳಗಿನ ಪೇಪರಿನ ಹುಡುಗ ಹಾಲಿನ ಗೌಳಿಗಳು ಅರೆರೆ ಎಂದು ಚಕಿತರಾಗಿ ಅದನ್ನು ಸುತ್ತಿಕೊಂಡು ಬಂದು ಕದ ತಟ್ಟುತ್ತಾರೆ. ನಾನು ಮೆಚ್ಚುವ ಹುಡುಗಿ ಹಾಕುವ ರಂಗೋಲಿಯಲ್ಲೇ ನಾನಾ ಅರ್ಥಗಳನ್ನು ಹುಡುಕುವ ಹುಡುಗ ದಿನವೂ ಆಕೆಯ ಮನೆಯೆದುರು ಮುಂಜಾನೆಯ ಇಬ್ಬನಿ ಆರುವ ಮುನ್ನವೆ ಮೆಲ್ಲಗೆ ನಡೆದಾಡುತ್ತಾನೆ. ಸೂರ್ಯ ರಶ್ಮಿಗೆ ಮಿರಮಿರ ಮಿರುಗುವ ರಂಗೋಲಿ ಅವನಿಗೆ ಸ್ವಾಗತ ಕೋರಿದರೆ. ಆ ಚಿತ್ತಾರದಲ್ಲಿ ತನ್ನ ಪ್ರೇಮಿಯ ಸಂದೇಶವನ್ನು ಹುಡುಕುತ್ತಾನೆ. ಅರೆ ತೆರೆದ ಬಾಗಿಲು ಮೇಲೆ ನಗುವ ಮುಗಿಲು ರಂಗೋಲಿಯೊಳಗಿನ ನವಿಲು ಅವನನ್ನು ಗೊಂದಲಕ್ಕೀಡು ಮಾಡಿಬಿಡುತ್ತವೆ.

ಪಟ್ಟಣ ಪ್ರದೇಶದಲ್ಲಿ ರಂಗೋಲಿ ಮೂಡುವುದು ತುಸು ಕಷ್ಟ ಇಲ್ಲಿಯ ಯುವತಿಯರಿಗೆ ತಮ್ಮ ಉಡುಗೆ ತೊಡುಗೆಗಳ ಅಳತೆ ಎಷ್ಟೆಷ್ಟು ಇಂಚಿನದೆಂದು ನೆನಪಿರುತ್ತದೆಯೇ ಹೊರತು ರಂಗೋಲಿಗೆ ಎಷ್ಟೆಷ್ಟು ಚುಕ್ಕೆಗಳ ಕೊಡಬೇಕೆಂದು ನೆನಪಿರಲಾರದು. ಆದರೂ ಹಲವು ಲಲನೆಯರು ಮನೆಬಾಗಿಲಿಗೇ ಹೊಂದಿಕೊಂಡಿರುವ ಡಾಂಬರು ರಸ್ತೆಯನ್ನು ತೊಳೆದು ರಂಗೋಲಿ ಹಾಕಿ ರಸ್ತೆಯಲ್ಲಿ ನಡೆವ ಯಾರೋ ಅಪರಿಚಿತರ ಮನಕ್ಕೆ ಮುದ ನೀಡುತ್ತಾರೆ. ಚಿಕ್ಕ ಬಾಲೆಯೊಬ್ಬಳು ತನ್ನ ಎಳೆಯ ಕೈಯಿಂದ ಎಳೆವ ದಪ್ಪಗೆರೆ ಅಂಕುಡೊಂಕಾಗಿ ಮೂಡಿದರೂ ಅದೆಷ್ಟು ಸುಂದರ? ಮಾಡಿದ ಚಿತ್ರಕ್ಕೆ ಸಿಕ್ಕ ಪಟ್ಟೆ. ಬಣ್ಣ ತುಂಬಿ ರಾಡಿ ಮಾಡಿದಾಗಲೋ ಆಕೆಗೆ ಖುಷಿಯೋ ಖುಷಿ ಆಗಿನಿಂದ ಪ್ರಾರಂಭವಾದ ರಂಗೋಲಿ ಸಂಭ್ರಮ ಯೌವ್ವನ ತಾರುಣ್ಯಗಳ ಬಗೆ ಬಗೆಯ ಬಣ್ಣ ಬದುಕನ್ನು ಕಂಡು ವಯಸ್ಕ ಮಹಿಳೆಯಾಗುವವರೆಗೂ ಇರುತ್ತದೆ. ಅದರ ನಂತರ ಮುದುಕೆಯಾದವರು ಯಾಕೋ ರಂಗೋಲಿ ಇಡಲಾರರು. ಬಹುಶಃ ಮನದಲ್ಲಿ ಎಲ್ಲಿಯವರೆಗೆ ವರ್ಣರಂಜಿತ ಕನಸುಗಳಿರುತ್ತವೋ ಅಲ್ಲಿಯವರೆಗೂ ವರ್ಣಮಯ ರಂಗೋಲಿ ಮೂಡುತ್ತಲೇ ಇರಬೇಕು.

ರಂಗೋಲಿ ಹೆಂಗಸರಿಗೊಂದೇ ಮೀಸಲಿಲ್ಲ ಹುಡುಗರೂ ಗಂಡಸರೂ ಪ್ರವೀಣರಾಗಿರುವವರೂ ತೀರ ವಿರಳ, ಕೆಲವು ದಿನಪತ್ರಿಕೆಗಳಲ್ಲಿ ರಂಗೋಲಿ ಸ್ಪರ್ಧೆಗಳಿರುತ್ತವೆ. ಮಹಿಳಾ ಪತ್ರಿಕೆಗಳಲ್ಲಂತೂ ಪ್ರತಿ ಸಂಚಿಕೆಯಲ್ಲಿ ರಂಗೋಲಿ ಇದ್ದೆ ಇರುತ್ತದೆ. ಪ್ರತಿ ರಂಗೋಲಿಯನ್ನು ಕಂಡವರು ಅದನ್ನು ಮೂಡಿಸಿದಾಕೆಯ ಬೆರಳ ತುದಿ ಅಥವಾ ಶ್ರದ್ಧೆ ನಮ್ಮನ್ನು ಕಾಡುತ್ತದೆ.

ಮನೆಯಲ್ಲಿ ಮಹಿಳೆಯರು ಅನಕ್ಷರಸ್ಥರಾಗಿದ್ದರೂ ಸಹ ರಂಗೋಲಿ ಬಿಡಿಸುವ ಕಲೆಯನ್ನು ಸಜ್ಜನ ಗಾಣಿಗರ ಮಹಿಳೆಯರು ಹೊಂದಿದ್ದಾರೆ. ಜೊತೆಗೆ ತಮ್ಮ ಭಾವನೆಗಳನ್ನು ರಂಗೋಲಿಯ ಮೂಲಕ ತೋರ್ಪಡಿಸಿಕೊಳ್ಳುತ್ತಾರೆ.

**ಸಜ್ಜನ ಗಾಣಿಗರಲ್ಲಿ ಆಟಗಳು**

**ವಯೋಮಾನಕ್ಕೆ ತಕ್ಕಂತೆ ಆಟಗಳು**

ಆಟಗಳಲ್ಲಿ ಆಯಾ ವ್ಯಕ್ತಿಗಳ ವಯೋಮಾನ, ಮಾನಸಿಕ ಅಭಿರುಚಿಗೆ ತಕ್ಕಂತೆ ಬೇರೆ ಬೇರೆ ಆಟಗಳಿಗೆ ಮಣ್ಣಾಟ, ಅಡಗಾಟ ಸುತ್ತಾಟ, ಬೆರಳೆಣಿಕೆಯ ಆಟಗಳಾದರೆ, ಸ್ವಲ್ಪ ದೊಡ್ಡವರಿಗೆ ಗುರಿಯಾಟ, ಚಿನ್ನಾಟದ ಎಳೆದಾಟ ಮುಂತಾದ ಶಕ್ತಿ ಪ್ರದರ್ಶನದ ಆಟಗಳು, ನಿರ್ಬಲರಾದವರಿಗೆ ಹುಲಿಕಪ್ಲೆ, ಆನೆನಾಯಿ ಪಗ್ಗ, ತಾಬ್ಲ ಮುಂತಾದ ಜಾಣ್ಮೆಯ ಆಟಗಳಿವೆ. ಈ ಜಾಣ್ಮೆಯ ಆಟಗಳ ಸಹೋದರ ಆಟಗಳಾದ ಚದುರಂಗ, ನೆತ್ತ, ಪಗಡೆ ಮುಂತಾದ ಆಟಗಳು ಅರಮನೆಯ ಮಂಚವನ್ನೇರಿ ರಾಜರಾಣಿಯರ ವಿಲಾಸ ಕ್ರೀಡೆಯಾಗಿ ಒಮ್ಮೊಮ್ಮೆ ರಾಜಮನೆತನಗಳನ್ನು ಏಳಿಸಿ, ಬೀಳಿಸಿ ಮಣ್ಣುಮುಕ್ಕಿಸಿವೆ.

**ಆಟಗಳ ಪ್ರಯೋಜನ**

ಫ್ರೆಂಚ್ ತತ್ವಜ್ಞಾನಿ ರೂಸೋ ಶಾರೀರಿಕ ಚಟುವಟಿಕೆಗಳಿಗೆ ನಿರ್ಬಂಧವಿರಕೂಡದೆಂದು ಹೇಳಿ ಮಕ್ಕಳು ವೈವಿದ್ಯಪೂರ್ಣವಾದ ಆಟಗಳಲ್ಲಿ ಮೈಮರೆಯಬೇಕೆಂದು ಹೇಳಿದ್ದಾನೆ. ಮಕ್ಕಳು ತಮ್ಮ ಎಳೆಯ ವಯಸ್ಸಿನಲ್ಲಿ ಏನೇ ಕೆಲಸಮಾಡದೆ, ಆಟಗಳಲ್ಲಿ ಕಾಲಕಳೆಯುತ್ತಾರೆಂದು ಪಾಲಕರು ವ್ಯಥೆಪಡುವ ಕಾರಣವಿಲ್ಲ. ಆಟದಲ್ಲಿ ಮಕ್ಕಳು ಪಡೆಯುವ ಸಂತೋಷ ಅತ್ಯಮೂಲ್ಯವಾದುದು. ಎಳೆವಯಸ್ಸಿನ ಮಕ್ಕಳು ಮೈದಣಿಯುವಂತೆ ಆಡಬೇಕು, ಆನಂದ ಪಡಬೇಕು, ಆಟಗಳು ಬೆಳೆಯುವ ಮಕ್ಕಳಿಗೆ ಮನರಂಜನೆಯನ್ನೊದಗಿಸುವ ಜೊತೆಯಲ್ಲಿ ಅವರ ಶಾರೀರಿಕ, ಬೌದ್ಧಿಕ, ಆಂತರಿಕ ವಿಕಸನಗಳಿಗೆ ನೆರವು ನೀಡುವವು. ಪ್ರಪಂಚದ ವಿಮುಕ್ತಿ ನೀಡಿ ಆನಂದ ಬ್ರಹ್ಮನಲ್ಲಿ ತಾದಾತ್ಮ ಪಡೆಯುವಂತೆ ಮಾಡಿ, ಅತಾರ್ಕಿಕ ಸುಖವನ್ನು ನೀಡುವವು. ಹಾಳು ಹರಟೆ ಹೊಡೆಯುವ ಪ್ರವೃತ್ತಿಯನ್ನು ದೂರಮಾಡಿ, ಮನಸ್ಸು ಕಾರ್ಯೋನ್ಮುಖವಾಗುವಂತೆ ಆಟಗಳು ಉತ್ತೇಜನ ನೀಡುವವು. 'ಆಲಸೀ ಮನಸ್ಸು ಸೈತಾನನ ಕರ್ಮಶಾಲೆ' ಎಂಬ ಗಾದೆಯಿದೆ. ಆಟಗಳಲ್ಲಿ ಅನೇಕ ಬಗೆಯ ಜನರ ಜೊತೆ ಬೆರೆಯುವ ಅವಕಾಶವಿರುವುದರಿಂದ ಆಟಗಾರರಲ್ಲಿ ಪರಸ್ಪರ ಸ್ನೇಹ ಸೌಹಾರ್ದಗಳು ಕುದುರುವವು. ಮನಸ್ಸು ಕೂಪಮಾಂಡೂಕ ವೃತ್ತವನ್ನು ದಾಟಿ ವಿಸ್ತೃತವಾಗುವುದು ಸ್ನೇಹಪರವಾಗುವದು, ಉದಾತ್ತವಾಗುವದು. ಶಾರೀರಿಕ ಬೆಳವಣಿಗೆ ಮತ್ತು ಮಾನಸಿಕ ಬೆಳವಣಿಗೆ ಒಂದೇ ನಾಣ್ಯದ ಎರಡು ಮುಖಗಳೆಂದು ಒಲಂಪಿಕ ಕ್ರೀಡೆಗಳ ಪುನರುತ್ಥಾನಕ್ಕೆ ಕಾರಣನಾದ ರೂಬರ್ತಿಯ ಅಭಿಪ್ರಾಯ. ಆಟಗಳಿಂದ ದೊರೆತ ವ್ಯಾಯಾಮದಿಂದ ಶರೀರ ಬಲಿಷ್ಠವಾಗುವುದು. ಜೊತೆಗೆ ಮನೋವಿಕಾಸವಾಗುವುದು. ಆಟಗಳಿಂದ ಶಿಸ್ತು, ಸಂಯಮ, ಸ್ವಾರ್ಥತ್ಯಾಗ, ಸಮಯಾವಧಾನ, ಸೋಲು ಗೆಲುವುಗಳನ್ನು ಸಮಾನವಾಗಿ ಕಾಣುವ ಮನೋಭಾವನೆಗಳು ವರ್ಧಿಸುವವು. ಹೇಡಿತನ ಕಾಲ್ಕೀಳುತ್ತದೆ. ಸ್ಪರ್ಧಾತ್ಮಾಕ ಮನೋಭಾವ ಬೆಳೆಯುತ್ತದೆ. ಸಾಂಘಿಕ ಮನೋಭಾವ ಪಲ್ಲವಿಸುತ್ತದೆ. ಒಬ್ಬನ ನಾಯಕತ್ವವನ್ನು ಒಪ್ಪಿ ನಿಷ್ಟೆ ತೋರುವುದು ನಾಯಕನಾಗಿ ಇತರರನ್ನು ಸಮಾನ ಭಾವದಿಂದ ಕಾಣುವುದು ಮುಂತಾದ ಸದ್ಗುಣಗಳು ಬೆಳೆಯುವುವು. ಆಟಗಳು ಜನರನ್ನು

ದುಶ್ಚಟಗಳಿಂದ ದೂರವಿರಿಸುತ್ತವೆ, ಎಂದು ಹೇಳಿದ ಡಾ. ಜಾನ್ಸನ್ನನ ಉಕ್ತಿಯನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಹೋರಾಟದ ಗುಣವೇ ಆರೋಗ್ಯದ ಲಕ್ಷಣವೆಂಬುದು ರೋಮನ್ನರ ಮಂತ್ರ. ಅನೇಕ ಆಚಾರಗಳು ಸಮರ ಸನ್ನದ್ಧತೆಗೆ, ಬೇಟೆಯ ಚಾಪಲ್ಯವನ್ನು ವರ್ಧಿಲಸಕ್ಕೆ ಪೂರಕವಾಗಿವೆ.

ವಾಟರ್ಲೂ ಕದನವನ್ನು ಈಟನ್ನಿನ ಮೈದಾನದಲ್ಲಿ ಗೆದ್ದರು ಎಂಬ ಆಂಗ್ಲ ಪಡೆನುಡಿಯೊಂದಿದೆ. ಅಶಕ್ಯವನ್ನು ನಂಬದ ಅಜೇಯನಾದ ನೆಪೋಲಿಯನ್ನನನ್ನು ಸೋಲಿಸಿದ ವೆಲಿಂಗ್ಟನ್ ಚಿಕ್ಕವನಿರುವಾಗ ಈಟನ್ನಿನ ಆಟದ ಬೈಲಿನಲ್ಲಿ ಆಡಿದ್ದಾನಂತೆ ಅವನ ಕ್ರೀಡಾಪಟುತ್ವವೇ ನೆಪೋಲಿಯನ್ನನ ಪರಾಭವಕ್ಕೆ ಕಾರಣವಾಗಿತ್ತೆಂದು ಆಂಗ್ಲರ ತಿಳುವಳಿಕೆ. ಅದು ಆಟಗಳಿಗೆ ಅವರಿತ್ತ ಅಮೂಲ್ಯ ಬೆಲೆಯ ನಿದರ್ಶನ. ಒಳ್ಳೆಯ ಕ್ರೀಡಾಪಟು ಜೀವನದ ಎಂತಹ ವಿಷಮ ಪರಿಸ್ಥಿತಿಯಲ್ಲಿಯೂ ದ್ಯುತಿಗೆಡುವುದಿಲ್ಲ. ದಿಟ್ಟತನದಿಂದ ಕೊನೆಯವರೆಗೂ ಹೋರಾಡುವ ಮನೋಭಾವನೆಯನ್ನು ಉಳಿಸಿಕೊಳ್ಳುತ್ತಾನೆ. ಸೋಲು ಅನಿವಾರ್ಯವೆನ್ನಿಸಿದರೂ ಹಿಂದೆ ಸರಿಯುವುದಿಲ್ಲ. ಆಟದಲ್ಲಿ ಸೋಲು ಗೆಲುವು ಮುಖ್ಯವಲ್ಲ ಕೊನೆಯವರೆಗೂ ಸೆಣಸುವುದು ಮುಖ್ಯ. ಈ ಕ್ರೀಡಾಮನೋಭಾವನೆಗಳು ವೆಲಿಂಗ್ಟನ್‌ನಲ್ಲಿ ರಕ್ತಗತವಾದುದರಿಂದಲೇ ಎಂತಹ ವಿಷಮ ಪರಿಸ್ಥಿತಿಯಲ್ಲಿಯೂ ಹೋರಾಡಿ ಗೆಲುವನ್ನು ಪಡೆದನು. ರಾಷ್ಟ್ರ ಉತ್ತಮವೆನ್ನಿಸಬೇಕಾದರೆ ಸತ್ಯಾಜೋಗುಳಬೇಕಾದರೆ, ಪರಸ್ಪರ ಸ್ನೇಹ, ಸೌಹಾರ್ದ ಮನೋಭಾವನೆಗಳ, ಸ್ಪರ್ಧಾತ್ಮಕ ಮನೋಭಾವನೆಗಳು, ಕ್ರೀಡಾಪಟುಗಳಲ್ಲಿ ಬೆಳವಣಿಗೆಯಾಗುವುವು.

**ಆಟಗಳ ವರ್ಗೀಕರಣ**

ಸಂಗ್ರಹಿಸಿದ ಆಟಗಳನ್ನು ವರ್ಗೀಕರಿಸುವುದು ತಂಬಾ ತೊಡಕಿನ ಕೆಲಸ. ಯಾವ ಬಗೆಯಲ್ಲಿ ವರ್ಗೀಕರಿಸಿದರೂ ವರ್ಗೀಕರಣವು ಪರಿಪೂರ್ಣವಾಗುತ್ತದೆಯೆಂದು ಧೈರ್ಯವಾಗಿ ಹೇಳಲಾಗದು. ಆಟಗಳನ್ನು ಹೊರಾಂಗಣ ಒಳಾಂಗಣ ಆಟಗಳೆಂದು ವರ್ಗೀಕರಿಸುವುದುಂಟು. ಹೀಗೆ ವಿಶಾಲ ತಳಹದಿಯ ಮೇಲೆ ಆಟಗಳನ್ನು ಎರಡೇ ಬಗೆಯಲ್ಲಿ ವಿಭಜನೆಗೆ ಅಳವಡಿಸಿಕೊಂಡು ಅಭ್ಯಸಿಸುವುದು ಹೆಚ್ಚಿನ ಪ್ರಯೋಜನವನ್ನು ನೀಡಲಾರದು. ಕೆಲವು ಆಟಗಳು ಎರಡೂ ಪಂಗಡಕ್ಕೆ ಸೇರಿದಂಥವು.

ಆಟಗಳನ್ನು ಗಂಡು ಮಕ್ಕಳು ಹೆಣ್ಣುಮಕ್ಕಳ ಆಟವೆಂದು ವಿಭಾಗ ಮಾಡುವುದಿದೆ. ಆಟಗಳನ್ನು ಚಿಕ್ಕವರಿರುವಾಗ ಗಂಡು ಹೆಣ್ಣೆಂಬ ಬೇದವಿಲ್ಲದೆ ಎಲ್ಲರೂ ಆಡುತ್ತಾರೆ. ಉದಾಹರಣೆ ಗಜ್ಜುಗ ಇಲ್ಲವೆ ಪರಳಾಟಗಳನ್ನು ಹೆಣ್ಣು ಮಕ್ಕಳ ಆಟವೆಂದು ಕೆಲವು ಪ್ರದೇಶಗಳಲ್ಲಿ ತಿಳಿದಿದ್ದರೆ, ಇನ್ನೊಂದು ಪ್ರದೇಶದಲ್ಲೂ ಅದನ್ನು ಗಂಡು ಹೆಣ್ಣು ಇಬ್ಬರೂ ಆಡುತ್ತಾರೆ. ಚಿತ್ರದುರ್ಗ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ, ಗೋಲಿ, ಬುಗುರಿ, ಚಿನ್ನಿದಂಡದಾಟ ಇವೆಲ್ಲವೂ ಗಂಡು ಮಕ್ಕಳ ಆಟವೆಂದು ಕರೆಯುವರು. ಆಟಗಳ ಗುಣಲಕ್ಷಣಗಳನ್ನನುಲಕ್ಷಿಸಿ ಈ ಕೆಳಗಿನಂತೆ ವಿಭಜಿಸಿದ್ದೇನೆ.

೧. ಹರಳಾಟ.

೨. ಬೆರಳಾಟ.

೩. ತುಳಿದಾಟ.

೪. ಸುತ್ತಾಟ.

೫. ಹುಡುಕಾಟ.

೬. ಕುಂಟಾಟ.

೭. ಎಳೆದಾಟ.

೮. ಗುರಿಯಾಟ.

೯. ಬೆನ್ನಟ್ಟುವ ಆಟ.

೧೦. ಅನುಕರಣೆಯ ಆಟ.

**ಚಿತ್ರದುರ್ಗ ಜಿಲ್ಲೆಯ ಸಜ್ಜನ ಗಾಣಿಗರಲ್ಲಿ ಕಂಡು ಬರುವ ಆಟಗಳು.**

**೧. ಚೆನ್ನೆ ಆಟ:** ಪತ್ತದ ಮನೆ ಆಟವೆಂದು ಇವರಲ್ಲಿ ಕರೆಯಲಾಗುತ್ತದೆ. ಮರದಿಂದ ಮಾಡಿದ ಚೆನ್ನೆಮಣೆ ಇದ್ದರೆ ಈ ಆಟಕ್ಕೆ ಚೆನ್ನ. ನೆಲದ ಮೇಲೆ ಮಸಿ ಇಲ್ಲವೆ ಸುಣ್ಣದ ಕಡ್ಡಿಯಿಂದಲೂ ಚೌಕು ಮನೆ ತಯಾರಿಸಿ ಕೊಳ್ಳಬಹುದು.

ದನ ಕಾಯುವ ಮಕ್ಕಳು ಬಂಡೆಗಳಲ್ಲಿನ ಮೇಲೆ ಕುಳಿತೋಡಿ ಆಡಲು ಉಪಯೋಗಿಸುತ್ತಿದ್ದರು. ಚೆನ್ನೆಕಾಳು ಅಥವಾ ಚಿಕ್ಕ ಚಿಕ್ಕ ಕಲ್ಲುಗಳು ಅಥವಾ ಹುಣಿಸೆ ಪಿಕ್ಕಾ ಆಟಕ್ಕೆ ಸಾಕು. ಚೆನ್ನೆಮಣೆಯಲ್ಲಿ ಹದಿನಾಲ್ಕು ಕುಳಿಗಳಿರುತ್ತವೆ.

ಪ್ರತಿಯೊಂದು ಕುಳಿಗೆ ನಾಲ್ಕರಂತೆ ೫೬ ಕಾಳುಗಳು ಬೇಕು. ಈ ಆಟಕ್ಕೆ ಇಬ್ಬರು ಆಟಗಾರರಿರುವುದೇ ಹೆಚ್ಚು. ಹೆಚ್ಚು ಜನರಿದ್ದಾಗ ಒಂದು ಪಕ್ಷದವರೆಲ್ಲ ಆಡಿದ ಮೇಲೆ ಇನ್ನೊಂದು ಪಕ್ಷದವರು ಆಡುತ್ತಾರೆ. ಎಡದಿಂದ ಹರಳೆತ್ತಿ ಬಲಕ್ಕಿಡುತ್ತಾ ಹೋಗಬೇಕು. ಒಂದು ಬದಿ ಏಳು ಮನೆಗಳು ಒಂದು ಪಕ್ಷಕ್ಕೆ ಇನ್ನೊಂದು ಬಗೆಯ ಏಳು ಮನೆಗಳು ಮತ್ತೊಂದು ಪಕ್ಷಕ್ಕೆ ಸೇರುತ್ತವೆ. ಆಟಗಾರನು ಆಟ ಪ್ರಾರಂಭಿಸುವಾಗ ತನ್ನ ಮನೆಯ ಹರಳೆತ್ತಿ ಪ್ರಾರಂಭಿಸಬೇಕು. ಆಡುವ ವಿಧಾನ ಬೇದದಿಂದ ಈ ಆಟಕ್ಕೆ ಬೇರೆ ಬೇರೆ ಹೆಸರುಗಳಿವೆ.

**೨. ಜಿಬ್ಬಿ ಆಟ:** ಈ ಆಟಕ್ಕೆ ಚವೆಯಾಟ, ಕವಡೆಯಾಟ, ಚೌಕಾಬಾರ ಇತ್ಯಾದಿ ಹೆಸರುಗಳಿವೆ. ಈ ಆಟಕ್ಕೆ ಆಟಗಾರರು ನಾಲ್ಕು ಜನ ಮನೆಗಳು ೨೫ ಅಥವಾ ೪೯, ನಾಲ್ಕು ಅಥವಾ ಆರು ಕವಡೆಬೇಕು ಕವಡೆ ಬದಲಿಗೆ ಹುಣಸೇ ಬೀಜ ಉಪಯೋಗಿಸುವುದುಂಟು. ಆಟಗಾರರೂ ಒಂದೊಂದು ಬಗೆಯ ನಾಲ್ಕು ಅಥವಾ ಎಂಟು ವಸ್ತುಗಳನ್ನು ಕಾಯಿಗಳೆಂದು ಬಳಸಬೇಕು. ಕಡಲೇಕಾಳು ಬಳೆಚೂರು, ಕಲ್ಲು ಹರಳು, ಕಡ್ಡಿ, (ಬಳಪ) ಬಳಸುವುದುಂಟು, ಒಬ್ಬರ ಕಾಯಿ ಇನ್ನೊಬ್ಬರಂತೆ ಇರಬಾರದು.

ನಾಲ್ಕು ಆಟಗಾರರಿಗೆ ನಾಲ್ಕು ಮನೆಗಳು ಇದಕ್ಕೆ ಕಟ್ಟೆಯೆನ್ನುವರು, ೬೫ ಮನೆಯ ಆಟದಲ್ಲಿ ಮತ್ತೆ ನಾಲ್ಕು ಸಂರಕ್ಷಿತ ಮನೆಗಳಿರುವುದಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಕಟ್ಟೆಯಿಂದ ಆಟ ಪ್ರಾರಂಭಿಸುತ್ತಾರೆ. ನಡುವಿನ ಮನೆಗೆ ಹಣ್ಣಿನ ಮನೆಯೆಂತಲೂ ಗಂಗೆ ಪೆಟ್ಟಿಗೆಯೆಂತಲೂ ಹೇಳುವರು. ಆಟದ ಕಟ್ಟೆ ಹಾಗೂ ಸುರಕ್ಷಿತ ಕಟ್ಟೆಗಳಲ್ಲಿ ಎಲ್ಲರ ಕಾಯಿಗಳು ಸುರಕ್ಷಿತ. ಅಲ್ಲಿ ಯಾರು ಕಾಯಿ ಕೊಲ್ಲಲಾರರು. ಆರು ಅಥವಾ ನಾಲ್ಕು ಕವಡೆಗಳಿಂದ ಆಟವಾಡುತ್ತಾರೆ. ಆಟಗಾರರಲ್ಲಿ ತಮ್ಮ ಕಾಯಿಗಳನ್ನೆಲ್ಲಾ ಮೊದಲು ಹಣ್ಣು ಮಾಡುತ್ತಾರೆ, ಅವರು ಆಟದಲ್ಲಿ ಗೆದ್ದಂತೆ. ಸಜ್ಜನ ಗಾಣಿಗರಲ್ಲಿ ಗಂಡು ಮತ್ತು ಹೆಣ್ಣು ಎಂಬ ಲಿಂಗ ಬೇಧವಿಲ್ಲದೆ, ಈ ಚೌಕಾಭಾರ ಆಟವನ್ನು ಆಡುತ್ತಾರೆ.

ಗುರಿಯಾಧಾರಿತ ಆಟಗಳೆಂದರೆ, ೧. ಗೋಲಿಯ ಆಟ ೨. ಬಗರೀ ಆಟ. ೩. ಚಿನ್ನಿದಂಡಾಟ ಸಜ್ಜನ ಗಾಣಿಗರಲ್ಲಿ ಕಂಡುಬರುವಂತಹವುಗಳಾಗಿವೆ.

ಹಿಂದಿನಂತೆ ಜನಪದ ಆಟಗಳಲ್ಲಿ ಸಾಕಷ್ಟು ಪರಿವರ್ತನೆಯಾಗಿದೆ. ಇಂದು ಸಜ್ಜನ ಗಾಣಿಗರಲ್ಲಿಯೂ ಹೆಚ್ಚಾಗಿ ಕ್ರಿಕೇಟಿಗೆ ಒತ್ತನ್ನು ನೀಡುತ್ತಿದ್ದಾರೆ. ಮೊದಲಿನ ಆಟಗಳು ಇಂದು ತಮ್ಮ ಅರ್ಥವನ್ನು ಕಳೆದುಕೊಳ್ಳ ಹತ್ತಿವೆ. ಅಂದರೆ, ಗೋಲಿಯಾಟ, ಬಗರೀ ಆಟ, ಚಿನ್ನಿ ದಂಡ ಮುಂತಾದವುಗಳಿಗೆ ಇಂದು ಒತ್ತನ್ನು ಕೊಡುತ್ತಿಲ್ಲಾ ಇವು ಕೆಲವು ಹಳ್ಳಿಗಳಲ್ಲಿ ಕಂಡು ಬರುತ್ತಿಲ್ಲ. ಇವರ ಗಮನದಲ್ಲಿ ಟಿ.ವಿ. ಕಂಪ್ಯೂಟರ್, ಕ್ರಿಕೇಟ್ ಇವುಗಳಲ್ಲಿ ಬದಲಾದ ಕಾಲಕ್ಕನುಗುಣವಾಗಿ ತಮ್ಮ ಮನೋಭಾವನೆಯಲ್ಲಿಯೂ ಬದಲಾಗುತ್ತಿದ್ದಾರೆ. ಅಂದರೆ ಕ್ರಿಕೇಟನ್ನು ಮಕ್ಕಳು, ಯುವಕರು ಮತ್ತು ಮುಪ್ಪಿನವರು

ಗಂಡು ಹೆಣ್ಣು ಎಂಬ ಲಿಂಗ ಬೇಧವಿಲ್ಲದೆ ಎಲ್ಲರೂ ಕ್ರಿಕೇಟನ್ನು ನೋಡುತ್ತಾರೆ. ಇಂದು ಆಧುನಿಕ ದಿನಮಾನಗಳಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ವಯಸ್ಕರು ಕೂಡ ಈ ಆಟವನ್ನು ನೋಡುತ್ತಾರೆ. ಈ ಕ್ರಿಕೇಟ್ ಆಟವು ಭಾರತೀಯರಿಗೆ ಪಾಶ್ಚಿಮಾತ್ಯರಿಂದ ಕಲಿತ ಆಟವಾಗಿದೆ.

ಸಜ್ಜನ ಗಾಣಿಗರಲ್ಲಿ ಸಾಂಪ್ರದಾಯಕ ಆಟಗಳೆಲ್ಲವೂ ಕ್ರಮೇಣವಾಗಿ ತಮ್ಮ ಅರ್ಥವನ್ನು ಕಳೆದುಕೊಳ್ಳತೊಡಗಿವೆ. ಆ ಜಾಗದಲ್ಲಿ ಹೊಸ ಹೊಸ ಆಟಗಳು ತಮ್ಮ ಅರ್ಥವನ್ನು ಉಳಿಸಿಕೊಳ್ಳಹತ್ತಿವೆ.

**ಆಟಗಳಲ್ಲಿ ಆಗಿರುವ ಪರಿವರ್ತನೆಗಳು**

ಹಿಂದೆ ಎಲ್ಲಾ ಬುಡಕಟ್ಟು ಹಾಗೂ ಇತರೆ ಸಮುದಾಯಗಳಲ್ಲಿ ಕಂಡು ಬರುವಂತೆ ಸಜ್ಜನ ಗಾಣಿಗರಲ್ಲಿಯೂ ಆಟಗಳಿರುವುದನ್ನು ಕಾಣುತ್ತೇವೆ. ಅಂದರೆ ಹಿಂದಿನ ದಿವಸಗಳಲ್ಲಿ ಪತ್ತದ ಮಣೆಯ ಆಟ, ಚೌಕಾಭಾರ ಇವುಗಳನ್ನು ಒಳಾಂಗಣ ಆಟಗಳೆಂದು ತಿಳಿದು ಆಚರಿಸಲಾಗುತಿತ್ತು. ಇವರಲ್ಲಿ ಗೋಲಿಯಾಟ, ಲಗೋರಿ, ಬುಗುರಿಯಾಟ, ಚಿನ್ನಿದಾಂಡು, ಕುಂಟಾಬಿಲ್ಲೆ, ಕಣ್ಣಾ ಮುಚ್ಚಾಲೆ ಯಾಟ, ಮುಂತಾದ ಹೊರಾಂಗಣ ಆಟಗಳನ್ನು ಆಡುತ್ತಿದ್ದರು.

ಆದರೆ ಹಿಂದಿನಷ್ಟು ಇಂದು ಈ ಆಟಗಳಿಗೆ ಮಹತ್ವ ಕಳೆದು ಹೋಗುತ್ತಿದೆ. ಇಂದು ಹೆಚ್ಚಾಗಿ, ಆಟಗಳಲ್ಲಿ ಜಾನಪದ ಆಟಗಳಿಗೆ ಮಹತ್ವ ಕೊಡುವುದು ಕಡಿಮೆಯಾಗಿದೆ.

ಇಂದು ಆಟದಲ್ಲಿ ಮೇಲಿನ ಎಲ್ಲಾ ಆಟಗಳ ಮಹತ್ವವನ್ನು ಕ್ರಿಕೇಟ್ ಪಡೆದುಕೊಳ್ಳುತ್ತಿದೆ. ಇಂದು ಮಾಧ್ಯಮಗಳಲ್ಲಿಯೂ ಬಹಳಷ್ಟು ಬದಲಾಗಿರುವುದರಿಂದ ಇಂದು ಟಿ.ವಿ., ಆಕಾಶವಾಣಿ, ಮತ್ತು ಮೊಬೈಲ್‌ಗಳಿಂದ ಕ್ರಿಕೇಟ್‌ನ್ನು ನೋಡುತ್ತಾರೆ. ಈ ಆಟದಿಂದ ಅಂತರ್ ರಾಷ್ಟ್ರೀಯ ಕ್ರಿಕೇಟ್ ತಂಡದವರ ಪರಿಚಯವಾದಂತಾಗಿದೆ. ಜೊತೆಗೆ ನಮ್ಮ ಭಾರತೀಯ ಕ್ರಿಕೇಟ್ ತಂಡದ ಬಗ್ಗೆ ಅಭಿಮಾನ ಬೆಳೆಸಿಕೊಳ್ಳುತ್ತಿದ್ದಾರೆ.

ಇಂದು ಯುವ ಜನತೆಯ ಮೇಲೆ ಕ್ರಿಕೇಟ್ ಆಟವು ಆಧುನಿಕ ಪ್ರಭಾವವನ್ನು ಬೀರಿದೆ. ಮಕ್ಕಳಿಗೆ ಸಿಗುತ್ತಿರುವ ವೇಳೆಯ ಪ್ರಮಾಣವು ಕಡಿಮೆಯಾಗುತ್ತಿದೆ. ಈ ಆಟವು ಆಧುನಿಕ ದಿನಗಳಲ್ಲಿ ಮನರಂಜನಾತ್ಮಕ ಆಟಗಳಲ್ಲಿ ಒಂದಾಗಿದೆ.

ಇಂದು ಸಮುದಾಯದ ಪ್ರತಿ ಮಗುವಿನ ಕೈಯಲ್ಲಿ ಬ್ಯಾಟ್ ಮತ್ತು ಬಾಲ್, ಹಾಗೂ ಕ್ರಿಕೇಟ್ ಆಟವನ್ನು ತಾವು ತಮ್ಮ ಸ್ನೇಹಿತರೊಡಗೂಡಿ ಆಟವಾಡುತ್ತಾರೆ. ಒಟ್ಟಿನಲ್ಲಿ ಸಜ್ಜನ ಗಾಣಿಗರಲ್ಲಿ ಸಾಂಪ್ರದಾಯಕ ಆಟಗಳಲ್ಲಿ ಬದಲಾಗಿದ್ದೂ, ಇಂದು ಕ್ರಿಕೇಟ್‌ಗೆ ಹೆಚ್ಚಿನ ಮಹತ್ವ ನೀಡುತ್ತಿದ್ದಾರೆ.

**ಸಾಂಘಿಕ ಜೀವನ**

ಮಾನವ ಮೂಲತಹಃ ಸಂಘಜೀವಿ ಸಮಾಜ ಜೀವಿ. ಇವನು ಅನೇಕ ಸಂಘ ಸಂಸ್ಥೆಗಳನ್ನು ರಚಿಸಿಕೊಂಡು ಅದರ ಸದಸ್ಯರಾಗುವುದರ ಮೂಲಕ ಸಂಘ ಹೊಂದಿರಬಹುದಾದ ಗುರಿ-ಉದ್ದೇಶಗಳನ್ನು ಸಫಲಗೊಳಿಸುವ ಪ್ರಯತ್ನದಲ್ಲಿ ಸಂಘದ ಎಲ್ಲಾ ಸದಸ್ಯರು ಪ್ರಯತ್ನ ನಡೆಸುವರು.

ಸಂಘಟನೆಯಿಂದ ಮಾನವನು ತನ್ನ ಮೂಲಭೂತ ಬೇಡಿಕೆಗಳನ್ನು ಈಡೇರಿಸಿಕೊಳ್ಳುವನು. ಸಂಘಟನೆಯು ಸಭೆ, ಸಮ್ಮೇಳನಗಳನ್ನು ನಡೆಸುವುದರಿಂದ ಗಾಣಿಗ ಸಮಾಜದವರನ್ನೆಲ್ಲಾ ಒಳ ಭೇದಗಳನ್ನು ಮರೆತು ಒಂದಾಗುವಂತೆ ಪ್ರೇರೇಪಿಸುತ್ತದೆ.

ಸಂಘಟನೆಯಿಂದ ಒಂದು ಸಮುದಾಯದ ಆರ್ಥಿಕ, ಶೈಕ್ಷಣಿಕ, ರಾಜಕೀಯ ಅಥವಾ ಸಾಂಸ್ಕೃತಿಕ ಬದುಕನ್ನು ಉತ್ತಮ ಪಡಿಸಬಹುದಾಗಿದೆ. ಅಥವಾ ಈ ಸಮುದಾಯದ ಜೀವನ ಮಟ್ಟವನ್ನು ಸುಧಾರಿಸಬಹುದಾಗಿದೆ.

ಸಂಘಟನೆಯು ಸಮುದಾಯದ ಜನರ ಮಧ್ಯದಲ್ಲಿ ಒಗ್ಗಟ್ಟನ್ನು ಮೂಡಿಸುವುದಷ್ಟೇ ಅಲ್ಲದೆ ತಮ್ಮ ಸಮಾಜದ ಶಕ್ತಿ ಪ್ರದರ್ಶನವನ್ನು ರಾಜಕೀಯವಾಗಿ ತೋರಿಸಲು ಹಾಗೂ ತಮ್ಮ ತಮ್ಮಲ್ಲಿಯೇ ಸ್ನೇಹ ಸೌಹಾರ್ದತೆಗಳನ್ನು ಮೂಡಿಸಿಕೊಳ್ಳಲು ಆತ್ಮಸ್ಥೈರ್ಯ ಅಥವಾ ವ್ಯಕ್ತಿತ್ವವನ್ನು ಕ್ರಮಬದ್ಧವಾಗಿ ರೂಪಿಸಿಕೊಳ್ಳಲು ಇಂದು ಸಂಘಟನೆಗಳು ಅನಿವಾರ್ಯವಾಗಿವೆ. ಸಂಘಟನೆಯಿಂದ ಸಮುದಾಯದ ಪ್ರತಿಭೆಗಳನ್ನು ಗುರುತಿಸಿ ಅವರನ್ನು ಸನ್ಮಾನದೊಂದಿಗೆ ಗೌರವಿಸುವುದರಿಂದ ಸಮುದಾಯದ ಪ್ರತಿಭೆಗಳನ್ನು ಸಮಾಜಕ್ಕೆ ಪರಿಚಯಿಸುವ ಕೆಲಸವನ್ನು ಸಂಘಟನೆಗಳು ಮಾಡುತ್ತವೆ.

ಸಂಘಟನೆಯಿಂದ ಒಂದು ಸಮುದಾಯದ ಸರ್ವಾಂಗೀಣ ಪ್ರಗತಿ ಸಾಧ್ಯ. ಇದರಿಂದ ಸಮುದಾಯದ ಜನರಲ್ಲಿ ಮುಕ್ತ ವಾತಾವರಣ, ವಿಶಾಲ ಮನೋಭಾವ, ತಾವು ಬದುಕಿ ಇತರರನ್ನು ಸಮಾಜದಲ್ಲಿ ಬಾಳಲು ಅನುವು ಮಾಡಿಕೊಡುವುದು.

ಹಿಂದಿನ ದಿನಮಾನದಿಂದಲೂ ಗಾಣಿಗರಲ್ಲಿ ಸಂಘಟನೆಯ ಕೊರತೆ ಎದ್ದು ಕಾಣುತ್ತದೆ. ಇದರಿಂದ ಗಾಣಿಗರಲ್ಲಿಯೇ ಹಲವಾರು ಪಂಗಡಗಳು ಉಪ ಪಂಗಡಗಳ ಸೃಷ್ಠಿಯಾಗಿದೆ. ಇವರಲ್ಲಿ ಒಗ್ಗಟ್ಟಿನ ಕೊರತೆ ಇದೆ. ಇಡೀ ಗಾಣಿಗ ಸಮುದಾಯವನ್ನು ಬಿಡಿಯಾಗಿ ನೋಡದೆ ಹಿಡಿಯಾಗಿ ನೋಡುವ ಪ್ರಯತ್ನಗಳು ಆಗಬೇಕಾಗಿದೆ. ಇದು ಸಂಘಟನೆಯಿಂದ ಮಾತ್ರ ಸಾಧ್ಯವಾಗುತ್ತದೆ.

**ಗಾಣಿಗ ಸಮಾಜದ ಸಂಘಟನೆಗೆ ಪೂರಕ ವಿಚಾರಗಳು**

ಇಂದಿನ ದಿನಗಳಲ್ಲಿ ಪ್ರತಿಯೊಂದು ಜಾತಿ ತಮ್ಮ ಸಮಾಜದ ಸಂಘಟನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾ ತಮ್ಮದೇ ಆದ ರೂಪರೇಷೆಗಳನ್ನು ನಿರ್ಮಿಸುತ್ತಿವೆ. ಈ ನಿಟ್ಟಿನಲ್ಲಿ ಚಿಂತನೆ ಮಾಡಿದಾಗ ಗಾಣಿಗ ಸಮಾಜದ ಸಂಘಟನೆಯು ತನ್ನದೇ ಆದ ಸೂತ್ರಗಳೊಂದಿಗೆ ದಕ್ಷರೀತಿಯಿಂದ ನಡೆಯಬೇಕಾಗಿದ್ದು ಎಲ್ಲರೂ ಚಿಂತನೆ ಮಾಡಲೇಬೇಕಾದ ವಿಚಾರವಾಗಿದೆ. ಗಾಣಿಗ ಸಮಾಜ ಗಾಣ ಸುತ್ತಿದ ಹಾಗೆ ಚಿತ್ರದುರ್ಗ ಜಿಲ್ಲೆಯಾದ್ಯಂತ ತನ್ನ ಸಹಸ್ರಾರು ಬಾಂಧವರನ್ನು ಹೊಂದಿದೆ. ವಿವಿಧ ಪ್ರದೇಶಗಳಲ್ಲಿ ನೆಲೆಸಿರುವ ಈ ಸಮಾಜದ ಜನರ ಮುಖ್ಯ ಉದ್ಯೋಗವು ಒಕ್ಕಲುತನವಾಗಿರುತ್ತದೆ. ಸಾಕಷ್ಟು ಜಮೀನುಗಳನ್ನು ಹೊಂದಿರುವ ಈ ಸಮುದಾಯ ಹೊಲ ಗದ್ದೆಗಳಲ್ಲಿ ಕೆಲಸಮಾಡುವುದರಿಂದ ಅಕ್ಷರಸ್ಥರ ಪ್ರಮಾಣ ಸ್ವಲ್ಪಮಟ್ಟಿಗೆ ಕಡಿಮೆಯೇ ಇದೆ ವಿವಿಧತೆಯಲ್ಲಿ ಏಕತೆ ಅನ್ನುವ ಹಾಗೆ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವ ಈ ಜನರಲ್ಲಿ ಐಕ್ಯತೆ ಮೂಡಿಸುವುದು ಅಥವಾ ಸಂಘಟನೆಯ ಬೀಜ ಬಿತ್ತುವುದು ಸ್ವಲ್ಪ ತೊಂದರೆಯಾದರೂ ಅದು ಅತಿ ಅವಶ್ಯವಾಗಿದೆ. ಪ್ರತಿಯೊಬ್ಬ ಮನುಷ್ಯನು ತನ್ನ ಹಾಗೂ ಕುಟುಂಬದವರ ಬಗೆಗೆ ಎಷ್ಟೊಂದು ಪ್ರೀತಿ ಅಥವಾ ಕಾಳಜಿ ವಹಿಸುವನೋ ಅದೇ ರೀತಿಯಾಗಿ ತನ್ನ ಸಮಾಜದ ಒಳಿತಿಗಾಗಿ ಅಷ್ಟೇ ಪ್ರಮಾಣದ ಪ್ರೀತಿ ಅಥವಾ ಕಾಳಜಿಯನ್ನು ವಹಿಸಬೇಕಾಗಿರುವುದು ಅಗತ್ಯ ''ಒಗ್ಗಟ್ಟೆ ಬಲ'' ಅನ್ನುವ ಹಾಗೆ ಸಮಾಜದ ಸಂಘಟನೆಯಿಂದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಹೀಗೆ ಇನ್ನು ಹಲವಾರು ರಂಗಗಳಿಂದ ಸಮಾಜಕ್ಕೆ ಸಿಗಬೇಕಾದಂತಹ ಸೌಲಭ್ಯಗಳ ಸರಿಯಾದ ಸದುಪಯೋಗಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಸಮಾಜದ ಜನಾಂಗವನ್ನು ಒಂದು ಗೂಡಿಸುವ ಕಾರ್ಯ ಕೆಳಹಂತದಿಂದ ಅಂದರೆ ಗ್ರಾಮಮಟ್ಟದಿಂದಲೇ ಪ್ರಾರಂಭವಾಗಬೇಕು. ಗ್ರಾಮೀಣ ಪ್ರದೇಶಗಳಲ್ಲಿ ನೆಲಸಿರುವಂತಹ ಬಾಂಧವರನ್ನು ಗುರುತಿಸಿ ಪ್ರತಿಯೊಂದು ಗ್ರಾಮಗಳಲ್ಲಿ ಸಭೆಗಳನ್ನು ಕರೆದು ಪದಾಧಿಕಾರಿಗಳನ್ನು ಆಯ್ಕೆಮಾಡಬೇಕು. ನಂತರ ಜನಾಂಗದ ಆರ್ಥಿಕ ಸ್ಥಿತಿಗತಿಗಳ ಬಗೆಗೆ ಅಥವಾ ಅವರಿಗೆ ಸಿಗಬೇಕಾದಂತಹ ಸೌಲಭ್ಯಗಳ ಬಗೆಗಾಗಲಿ ಪರಸ್ಪರ ವಿಚಾರ ವಿನಿಮಯಗಳನ್ನು ಮಾಡಿಕೊಳ್ಳಬೇಕು. ಕಾಲಕಾಲಕ್ಕೆ ಜಿಲ್ಲಾ ಅಧ್ಯಕ್ಷರ ಮಾರ್ಗದರ್ಶನದಿಂದ ಹಲವಾರು ಪ್ರಗತಿಯ ರೂಪುರೇಷಗಳನ್ನು ಸಿದ್ಧಪಡಿಸಬೇಕು. ಯಾವುದೇ ಒಂದು ಕೆಲಸ ಕಾರ್ಯದಲ್ಲಿ ಅಂದರೆ ಅದು ಸಾಮಾಜಿಕವಾಗಿರಬಹುದು, ಇಲ್ಲವೆ

ರಾಜಕೀಯವಾಗಿರಬಹುದು. ಇಲ್ಲವೆ ನಾವೆಲ್ಲರೂ ಒಂದೇ ಎಂಬ ಭಾವನೆಯಿಂದ ಒಟ್ಟಾಗಿ ದುಡಿದಾಗ ನಮ್ಮ ಸಮಾಜಕ್ಕೆ ಸಿಗಬೇಕಾದಂತಹ ಸ್ಥಾನಮಾನಗಳನ್ನು ಸುಲಭವಾಗಿ ತನ್ನ ಸ್ವಾಧೀನಕ್ಕೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಪಟ್ಟಣಗಳಲ್ಲಿ ವಾಸಿಸತಕ್ಕಂತ ಗಾಣಿಗ ಸಮಾಜದ ರಾಜಕೀಯ ಧುರೀಣರಾಗಲಿ ಅಧಿಕಾರಿಗಳಾಗಲಿ ಗ್ರಾಮೀಣ ಪ್ರದೇಶಗಳಿಂದ ಯಾವುದೇ ಕೆಲಸದ ನಿಮಿತ್ಯವಾಗಿ ಬಂದಂಥ ಸಮಾಜದ ಬಂಧುಗಳಿಗೆ ತಮ್ಮಿಂದ ಸಾಧ್ಯವಾದಷ್ಟು ಸಹಾಯ ಅಥವಾ ಸಹಕಾರವನ್ನು ನೀಡಬೇಕು ಇದು ಸಮಾಜದ ಬಗೆಗೆ ಇರಬೇಕಾದಂಥ ಅಭಿಮಾನವನ್ನು ಹೆಚ್ಚಿಸುತ್ತದೆ. ಬಿಜಾಪುರ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಗಾಣಿಗ ಸಮಾಜದವರು ಶೇಕಡಾ ೩೦ ರಷ್ಟಿದ್ದರೂ ರಾಜಕೀಯವಾಗಿ ಸಾಕಷ್ಟು ಪ್ರಬಲರಾಗಿಲ್ಲ. ಇದಕ್ಕೆ ಮುಖ್ಯ ಕಾರಣ ಸಂಘಟನೆಯ ಅಭಾವ. ಆದಕಾರಣ ಪ್ರತಿಯೊಬ್ಬ ವ್ಯಕ್ತಿಯು ಆತ್ಮಚಿಂತನೆ ಮಾಡಬೇಕು. ರಾಜಕೀಯ ಕ್ಷೇತ್ರಗಳಲ್ಲಿ ಪ್ರತಿಭಾವಂತ ಅಥವಾ ಕಾರ್ಯಪ್ರವೃತ್ತಿಯ ಗಾಣಿಗ ವ್ಯಕ್ತಿಗಳನ್ನು ಆಯ್ಕೆ ಮಾಡಿದ್ದೇ ಆದರೆ ಖಂಡಿತವಾಗಿಯೂ ಆರ್ಥಿಕ ಸಫಲತೆಯನ್ನು ಹೊಂದಲು ಸಾಧ್ಯವಾಗುತ್ತದೆ. ಗಾಣಿಗ ಸಮಾಜದ ಎಷ್ಟೋ ಬಡಕುಟುಂಬಗಳಲ್ಲಿ ಮಹನ್ ಪ್ರತಿಭಾವಂತ ವಿದ್ಯಾರ್ಥಿಗಳಿದ್ದಾರೆ. ಅಂಥವರನ್ನು ಗುರುತಿಸಿ ಶಿಷ್ಯವೇತನ ರೂಪದಲ್ಲಿ ಹಣಕಾಸಿನ ನೆರವನ್ನು ಒದಗಿಸುವಂತಹ ಉತ್ಸಾಹಿದಾನಿಗಳ ಸಂಖ್ಯೆ ಇಂದು ಹೆಚ್ಚಾಗಬೇಕಾಗಿದೆ. ಸಮಾಜ ಅನ್ನುವುದು ಒಂದು ಜೇನುಗೂಡಿನಂತೆ ಹಾಗೆ ಸಮಾನ ಮನಸ್ಸಿನಿಂದ ದುಡಿದಾಗ ಸಿಹಿಯಾದ ಸಮಾಜ ನಿರ್ಮಿಸಲು ಸಾಧ್ಯ. ಸಮಾಜದ ಸಂಘಟನೆಗೆ ಆಶಾಕಿರಣದಂತಿರುವ ಯುವಕರನ್ನು ಸರಿಯಾದ ಮಾರ್ಗದರ್ಶನದೊಂದಿಗೆ ಬಳಕೆ ಮಾಡಿಕೊಂಡು ಸಮಾಜದ ಭದ್ರ ಕೋಟೆಯನ್ನು ನಿರ್ಮಿಸಬೇಕಾಗಿದೆ. ಸಂಘಟನೆಯು ಒಂದು ಹೇಳಿಕೆಯಾಗದೆ ಒಂದು ಆಂದೋಲನವನ್ನಾಗಿ ಕಾರ್ಯರೂಪದಲ್ಲಿ ತರುತ್ತೇವೆ ಎಂದು ಎಲ್ಲರೂ ಪ್ರತಿಜ್ಞೆಯನ್ನು ಸ್ವೀಕರಿಸಬೇಕು ಅಥವಾ ಅಂತಹ ದಿಟ್ಟ ಹೆಜ್ಜೆಗಳನ್ನು ನಾವು ಹಾಕುವುದು ಇಂದು ಅನಿವಾರ್ಯ ಅಥವಾ ಅಗತ್ಯವೂ ಆಗಿದೆ.

**ಗಾಣಿಗ ಸಂಘಟನೆಯ ಸ್ವರೂಪ**

* ರಚನಾತ್ಮಕ, ಕ್ರಿಯಾತ್ಮಕ, ದಿವ್ಯಸಂಸ್ಕಾರವೀಯುವ ಸ್ವಾತಂತ್ರ್ಯ ನೈಜನಾತ್ಮಕ ವ್ಯಕ್ತಿಗಳನ್ನು ನಾಡಿಗೆ ಕೊಡುವ ಆದರ್ಶ ಸಂಸ್ಥೆಯಾಗಬೇಕು.
* ಸಂಘದಲ್ಲಿ ಕ್ರಮಬದ್ಧತೆ, ಸಮಾನಸೃಷ್ಟಿ, ವಿಶಾಲ ತಳಹದಿ ಮೇಲೆ ಸಮುದಾಯದ ಸರ್ವರ ಏಳಿಗೆ ಅಥವಾ ಅಭ್ಯುದಯದ ಗುರಿ ಇಟ್ಟುಕೊಂಡು ಕಾರ್ಯತಂತ್ರ ರೂಪಿಸಿಕೊಂಡು ಮೌಲ್ಯಯುತ ಶಾಶ್ವತ ಸಂಸ್ಥೆಯಾಗಬೇಕು.
* ನಿರಂತರವಾಗಿ, ನಿಯಮಬದ್ಧವಾಗಿ ಹಾಗೂ ನಿಖರವಾಗಿ ನೋಂದಣಿ ಕಾರ್ಯ ನಡೆಯುತ್ತಿರಬೇಕು.
* ನೋಂದಣಿ ಫೀ ಅತ್ಯಲ್ಪವಾಗಿದ್ದು ಸಾಮಾನ್ಯ ಸ್ವರೂಪವಾಗಿರಬೇಕು.
* ಪ್ರಾಮಾಣಿಕ ದಕ್ಷ ತ್ಯಾಗಮನೋಭಾವನೆಯ ಸಂಸ್ಥೆಯ ಕಾರ್ಯ ಎಂದು ದೀಕ್ಷೆ ತೊಡುವ ಸುಸಂಸ್ಕೃತ ಮನಸ್ಸಿನ ಕಾರ್ಯಕಾರಿ ಸಮಿತಿ ರಚಿತವಾಗಿರಬೇಕು.

* ಶಿಕ್ಷಣ ತಜ್ಞರಾದ ತಂತ್ರಜ್ಞರಾದ, ವಕೀಲರುಗಳಾದ ಇಲ್ಲವೆ ಗಣ್ಯ ವ್ಯಕ್ತಿ ಇಲ್ಲವೇ ಜಮೀನುದಾರರಾಗಿದ್ದು. ವಯೋವೃದ್ಧ ಜ್ಞಾನವೃದ್ಧ ವ್ಯಕ್ತಿಗಳನ್ನು ಗೌರವಾಧ್ಯಕ್ಷರಾಗಿ ಗೌರವ ಸದಸ್ಯರಾಗಿ ನೇಮಿಸಲ್ಪಟ್ಟಿರಬೇಕು.
* ಈ ಸಂಸ್ಥೆ ಈ ಸಮುದಾಯದ ಪ್ರತಿ ಮಗುವಿನ ಶೈಕ್ಷಣಿಕ ಪ್ರಗತಿ ಉನ್ನತ ಶಿಕ್ಷಣ ಆರ್ಥಿಕ ಯೋಜನೆ ರೂಪಿಸಿಕೊಳ್ಳಬೇಕು.
* ಪ್ರತಿ ಮಗುವಿಗೆ ಸಂಸ್ಕಾರ ದೊರಕಿಸಲು ಸಂಸ್ಥೆ ಬೇಕು.
* ಸಂಸ್ಥೆ ಕಾರ್ಯತಂತ್ರಗಳ ರೂಪರೇಷೆ ನಿರ್ಮಿಸಿ ಕಾರ್ಯಗತಗೊಳಿಸಿ, ನಿಯಂತ್ರಿಸುವ ಸಂಸ್ಥೆಯ ಕಟ್ಟಡವಿರಬೇಕು.
* ತನ್ನ ಜಾತಿ ಜನಾಂಗದವರು ಪಾಲಿಸುತ್ತಾ ಬಂದಿರುವ ಗಾಣಿಗ ವ್ಯಕ್ತಿ ಕುಂಠಿತಗೊಳ್ಳಲು ಕಾರಣ ಅರಿತು ಆ ವ್ಯಕ್ತಿಯನ್ನು ಪುನರುಜ್ಜೀವನಗೊಳಿಸುವ ಆ ವ್ಯಕ್ತಿ ಕೈಗೊಳ್ಳುವ ಯುವಕರಿಗೆ ಆ ವ್ಯಕ್ತಿಯಲ್ಲಿ ಹೊಸತಂತ್ರಜ್ಞಾನ ಒದಗಿಸುವ ಅವರಿಗೆ ಪ್ರೋತ್ಸಾಹ ಧನವೀಯುವ ಕಾರ್ಯ ಸಂಸ್ಥೆಯಿಂದಾಗಬೇಕು.
* ಸಮಾಜದ ಪ್ರತಿಕುಟುಂಬದ ಸಂತಸ ಅಥವಾ ದುಃಖದ ಪ್ರಸಂಗಗಳಲ್ಲಿ ಭಾಗಿಯಾಗುವಂತಹ ತರಬೇತಿ ಇರಬೇಕು. ಕಡ್ಡಾಯವಾಗಿ ಸಮುದಾಯದ ಎಲ್ಲರೂ ಇದರಲ್ಲಿ ಪಾಲ್ಗೊಳ್ಳಬೇಕು.
* ಸಂಘದ ವತಿಯಿಂದ ವರ್ಷಕ್ಕೆ ಸಾಂಸ್ಕೃತಿಕ ಕಾರ್ಯ ರೂಪಿಸಿಕೊಳ್ಳಬೇಕು. ಸಮುದಾಯದ ಶೈಕ್ಷಣಿಕ, ಸಾಂಸ್ಕೃತಿಕ ಆರ್ಥಿಕ ಬೌದ್ಧಿಕ ಪ್ರಗತಿಗಾಗಿ ಚಿಂತನ ತರಬೇತಿ ಕಾರ್ಯಕ್ರಮ ಯೋಜನೆ ಸಿದ್ಧಪಡಿಸಬೇಕು.
* ವೈವಿಧ್ಯತೆಯಲ್ಲಿ ಏಕತೆ ಸಾಧಿಸುವಂತೆ ನಾವೆಲ್ಲಾ ಭಾರತೀಯರು ಎಂಬ ಸ್ವಾಭಿಮಾನ ಮೂಡಬೇಕು. ಇವನಾರವ 'ಇವನಾರವ ಇವನಾರವ ಎಂದೆನ್ನಿಸದಿರಯ್ಯಾ ಇವ ನಮ್ಮವ, ಇವ ನಮ್ಮವ ಎಂದೆನ್ನಿಸಯ್ಯಾ' ಎಂಬ ಮಂತ್ರ ಮರೆಯಬಾರದು.
* ಯಾವುದೇ ಮೌಢ್ಯ ಅಂಧಕಾರವನ್ನುಂಟು ಮಾಡುವ ಕುರುಡು ಸಂಪ್ರದಾಯವನ್ನು ಅನುಸರಿಸದಂತೆ ಯುವಕರನ್ನು ಸನ್ಮಾರ್ಗದಲ್ಲಿ ಕರೆದೊಯ್ಯುವ ಪ್ರಬಲ ಯೋಜನೆ ಸಂಸ್ಥೆ ಹಮ್ಮಿಕೊಳ್ಳಬೇಕು. ಸತ್ಯಸಂಪ್ರದಾಯಗಳನ್ನು (ಗುರು-ಲಿಂಗ-ಜಂಗಮ) ಪರಂಪರೆಯನ್ನು ಗೌರವಿಸುವ ಸಂಸ್ಕಾರವನ್ನು ಯುವಕರಲ್ಲಿ ಬೆಳೆಸಬೇಕು.
* ಗೌರವಯುತವಾಗಿ ಸ್ವಾವಲಂಬನೆಯಿಂದ ಕಾಯಕ ನಿಷ್ಠರಾಗಿ ಬಾಳಲು ಸಂಸ್ಥೆ ಮಾರ್ಗದರ್ಶಿಯಾಗಬೇಕು.

ಹೀಗೆ ತಾತ್ವಿಕ ತಳಹದಿಯ ಮೇಲೆ ಭದ್ರಬುನಾದಿಯ ಮೇಲೆ ಬಸವಣ್ಣನವರು ಸಾರಿದ ಕಾರ್ಯ ದಾಸೋಹ ತತ್ವಗಳನ್ನು ಪಾಲಿಸುತ್ತಾ ಸಾಮಾಜಿಕ ಸಮಾಜದ ಪ್ರಗತಿ ವಿಶಾಲ ದೃಷ್ಟಿಕೋನವಿರಿಸಿಕೊಂಡು ಈ ಸಂಘ ಕಾರ್ಯ ನಿರ್ವಹಿಸುವಂತಾಗಿ ವ್ಯಕ್ತಿ ಕಲ್ಯಾಣದ ಜೊತೆಗೆ ಸಮಷ್ಠಿ ಕಲ್ಯಾಣ ಸಾಧಿಸುವಂತಾಗಬೇಕು.

**ಗಾಣಿಗರಲ್ಲಿ ಸಂಘಗಳ ಉದ್ಘಾಟನೆ**

ಗಾಣಿಗರಲ್ಲಿ ಈ ಹಿಂದೆ ಯಾವುದೇ ರೀತಿಯ ಸಂಘ ಸಂಸ್ಥೆಗಳಿರಲಿಲ್ಲ. ಆದರೆ ಇಂದು ಬಿಜಾಪುರದಲ್ಲಿ ಗಾಣಿಗ ಸಮ್ಮೇಳನವು ಜರುಗಿ ಗಾಣಸಿರಿ ಸ್ಮರಣಸಂಚಿಕೆಯನ್ನು ಹೊರತರಲಾಗಿದೆ. ಹುಬ್ಬಳ್ಳಿಯಲ್ಲಿಯೂ ಗಾಣಿಗರ ಸಂಘದ ಉದ್ಘಾಟನೆಯಾಗಿ ಇಂದು ಕಾರ್ಯನಿರ್ವಹಿಸುತ್ತಿದೆ. ಇಂದು ೧೯೫೫ರಲ್ಲಿ ಅಖಿಲ ಭಾರತ ಮಟ್ಟದ ಗಾಣಿಗ ಸಂಘ (ರಿ) ಉದ್ಘಾಟನೆ ಆಗಿದೆ. ಅದೇ ರೀತಿ ಜಿಲ್ಲೆಗೊಂದರಂತೆ ಗಾಣಿಗ ಸಂಘಗಳಿರಬೇಕು. ಗಾಣಿಗರೆಲ್ಲರೂ ಒಂದೆಡೆ ಸೇರುವಂತಾಗಬೇಕು ಎಂಬುದು ಗಾಣಿಗರ ಅಭಿಲಾಶೆಯಾಗಿದೆ.

ಈ ಸಮುದಾಯವು ಒಗ್ಗಟ್ಟಾಗಲು ಅಥವಾ ತಮ್ಮ ಬೇಡಿಕೆಗಳನ್ನು ಇಡೇರಿಸಿಕೊಳ್ಳಲು ಸಂಘ ಸ್ಥಾಪನೆಯಲ್ಲಿ ತೊಡಗಿದ್ದಾರೆ. ದಾವಣಗೆರೆ ಜಿಲ್ಲೆ ಅಥವಾ ಚಿತ್ರದುರ್ಗ ಜಿಲ್ಲೆಯ ಗಾಣಿಗ ಜನಾಂಗದವರನ್ನೆಲ್ಲ ಈ ಸಂಘದಲ್ಲಿ ಸೇರಿಸಿಕೊಳ್ಳುವುದರ ಮೂಲಕ ಗಾಣಿಗ ಸಮುದಾಯದ ಪ್ರಗತಿಗೆ ಹೋರಾಟ ನಡೆಸಲಾಗುತ್ತಿದೆ.

ಗಾಣಿಗರಲ್ಲಿ ಸರ್ವಾಂಗೀಣ ಪ್ರಗತಿಗೆ ಇಂದು ಸಂಘಟನೆ ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಹುಬ್ಬಳ್ಳಿಯಲ್ಲಿ 'ಅಖಿಲ ಭಾರತ ಗಾಣಿಗರ ಸಂಘ'ವನ್ನು ೧೯೫೫ರಲ್ಲಿ ಅಸ್ತಿತ್ವಗೊಳಿಸಲಾಗಿದೆ. ಇದರ ಅಡಿಯಲ್ಲಿ ಪ್ರತಿಜಿಲ್ಲೆಯಲ್ಲಿಯೂ ಗಾಣಿಗರ ಸಂಘಟನೆಯನ್ನು ಮಾಡಬೇಕೆಂದು ಬಿಜಾಪುರ ಜಿಲ್ಲೆಯಲ್ಲಿ ಗಾಣಿಗರ ಸಮಾವೇಶವನ್ನು ನಡೆಸಿ 'ಗಾಣಸಿರಿ' ಎಂಬ ಸ್ಮರಣ ಸಂಚಿಕೆಯನ್ನು ಹೊರ ತರಲಾಯಿತು. ಇದರಿಂದ ಗಾಣಿಗರ ಸಂಪೂರ್ಣ ಪರಿಚಯವು ಈ ಸಂಚಿಕೆಯಿಂದ ಪಡೆಯಲು ಸಹಾಯವಾಗಿದೆ.

ಚಿತ್ರದುರ್ಗ ಜಿಲ್ಲೆಯ ಗಾಣಿಗರಲ್ಲಿ ಇನ್ನೂ ಸಂಘಟನೆಯ ಕೊರತೆ ಇದೆ, ಆದರೂ ದಾವಣಗೆರೆ ಜಿಲ್ಲೆಯಲ್ಲಿ ದಿ.೧೧.೦೬.೨೦೦೭ರಲ್ಲಿ ಸಂಘಟನೆಯ ಉದ್ಘಾಟನೆ ಅಥವಾ ಕಾರ್ಯಾಚರಣೆಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಗಾಣಿಗ ಸದಸ್ಯರು ಭಾಗಿಗಳಾಗಿದ್ದಾರೆ. ಇದರಿಂದ ಅವರಲ್ಲಿಯೂ ಸಂಘಟನಾ ಜಾಗೃತಿ ಮೂಡಲು ಇದು ಸಹಕಾರಿಯಾಗಿದೆ.

ಈ ಸಮುದಾಯಕ್ಕೆ ಸರ್ಕಾರವು ಒದಗಿಸಿಕೊಟ್ಟ ಮೀಸಲಾತಿಯಲ್ಲಿ ಬದಲಾವಣೆಯಾಗಿದ್ದು III$^{rd}$ Bಇದ್ದುದನ್ನು II$^{nd}$ Aಗೆ ಪರಿವರ್ತಿಸಿ, ಗಾಣಿಗರಾದವರಿಗೆ ಈ ಸೌಲಭ್ಯವನ್ನು ಪಡೆಯಲು ಇಂದು ಸಂಘಟನೆ ಅನಿವಾರ್ಯವಾಗಿದ್ದು. ಬಹುತೇಕ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಗಾಣಿಗ ಸಂಘ ಅಸ್ತಿತ್ವಕ್ಕೆ ಬರುತ್ತಿದೆ. ಇದು ಗಾಣಿಗರಲ್ಲಿ ಕಂಡುಬರುತ್ತಿರುವ ಪರಿವರ್ತನೆಯ ಸಂಕೇತವಾಗಿದೆ.

ದಾವಣಗೆರೆ ಜಿಲ್ಲಾ ಗಾಣಿಗರ ಸಂಘ(ರಿ)ದ ಉದ್ಘಾಟನೆಯು 'ಸುವರ್ಣ ಕರ್ನಾಟಕದ ಅಂಗವಾಗಿ' ದಿನಾಂಕ: ೧೧.೦೬.೨೦೦೭ ರಂದು ಅಸ್ತಿತ್ವಕ್ಕೆ ಬಂದಿದೆ. ಈ ಸಂಘಟನೆಯ ಉದ್ಘಾಟನೆಯನ್ನು ಬಿ.ಜಿ. ಗದ್ದಿಗೌಡರು ನೆರವೇರಿಸಿದ್ದು 'ಕತ್ತಲಿನಿಂದ ಬೆಳಕಿನ ಕಡೆಗೆ ಸಾಗುವುದೇ' ಸಂಘದ ಉದ್ದೇಶವೆಂದು ನುಡಿದರು.

ರವೀಂದ್ರನಾಥ ದಾವಣಗೆರೆ ಉಸ್ತುವಾರಿ ಸಚಿವರು ಹಾಗೂ ಮಾಯಕೊಂಡದ ಸಚಿವರಾಗಿದ್ದು ಕರ್ನಾಟಕ ರಾಜ್ಯ ನೀರಾವರಿ ಮತ್ತು ಸಕ್ಕರೆ ಸರಬರಾಜು ಸಚಿವರಾಗಿದ್ದವರು. ದಾವಣಗೆರೆ ಜಿಲ್ಲಾ ಗಾಣಿಗರ ಸಂಘದಲ್ಲಿ

ಮಾತನಾಡಿ ಗಾಣಿಗರು ಎಲ್ಲಾ ರೀತಿಯಿಂದ ಅಭಿವೃದ್ಧಿ ಹೊಂದಿದ ಜನರೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಈ ಸಂಘಟನೆಯ ಅಧ್ಯಕ್ಷತೆಯನ್ನು ಶಾಮನೂರು ಶಿವಶಂಕರಪ್ಪನವರು ವಹಿಸಿಕೊಂಡಿದ್ದರು. ಚನ್ನಗಿರಿಯ ಶಾಸಕ ಮಹಿಮಾ ಪಟೇಲರು ಈ ರೀತಿ ಮಾತನಾಡಿದರು ಸಂಘಟನೆ ಸಮುದಾಯಗಳಿಗೆ ಅನಿವಾರ್ಯ. ಚಿಕ್ಕ ಚಿಕ್ಕ ತೊರೆಗಳು ಸೇರಿ ನದಿಗಳಾಗುತ್ತವೆ. ನದಿಗಳೆಲ್ಲವೂ ಸೇರಿ ಸಾಗರವಾಗುತ್ತದೆ. ಅದೆ ರೀತಿ ಒಂದೇ ಬಗೆಯ ಹೂವಿಗಿಂತಲೂ ವಿವಿಧ ಬಗೆಯ ಹೂವುಗಳು ಚಂದ. ಅದೇ ರೀತಿ ಭಾರತೀಯ ಸಂಸ್ಕೃತಿಯಲ್ಲಿ ವಿವಿಧತೆಯಲ್ಲಿ ಏಕತೆಯೇ ಚಂದ ಎಂದು ತಿಳಿಸಿ ಈ ಏಕತೆಗೆ ಸಂಘಟನೆ ಬೇಕೆಂದು ತಿಳಿಸಿದರು. ದಾವಣಗೆರೆ ಲೋಕಸಭಾ ಸದಸ್ಯ ಸಿದ್ದೇಶ ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಈ ಕಾರ್ಯಕ್ರಮದಲ್ಲಿ ಮತ್ತೊಬ್ಬ ಮುಖ್ಯ ಅಥಿತಿ ಅಶ್ವತರೆಡ್ಡಿ ಜಗಳೂರು ಶಾಸಕರು ಇದರಲ್ಲಿ ಭಾಗವಹಿಸಿ ಮಾತನಾಡಿದರು, ಡಾ.ಶೇಖರ್ ಸಜ್ಜನ, ಗೌರವ ಅಧ್ಯಕ್ಷರು ಅಖಿಲ ಭಾರತ ಗಾಣಿಗರ ಸಂಘ(ರಿ), ಮೋಹನ್ ಶೆಟ್ಟಿ, ಕುಮುಟಾ ಶಾಸಕರು, ನಾಗರತ್ನಮ್ಮ ಮಲ್ಲೇಶಪ್ಪ, ಉಪಾಧ್ಯಕ್ಷರು ಜಿಲ್ಲಾ ಪಂಚಾಯತ್, ದಾವಣಗೆರೆ ಇವರೆಲ್ಲರ ಅಭಿಪ್ರಾಯಗಳೆಂದರೆ,

* ಗಾಣಿಗರನ್ನು ಆರ್ಥಿಕ, ರಾಜಕೀಯ, ಶೈಕ್ಷಣಿಕ ಅಥವಾ ಸಾಂಸ್ಕೃತಿಕವಾಗಿ ಪ್ರಗತಿಗೊಳಿಸುವುದು.
* ಹಾವನೂರು ವರದಿ ಆಧಾರದ ಮೇಲೆ ಸರ್ಕಾರ ಕೊಟ್ಟಿರುವ ಮೀಸಲಾತಿಯಡಿಯಲ್ಲಿ II[nd] Aಗೆ ಸೇರಿಸಿದ್ದು ಇದನ್ನು ಸದುಪಯೋಗ ಪಡಿಸಿಕೊಳ್ಳಬೇಕು.
* ಸಂಘಟನೆ ಒಂದು ಶಕ್ತಿ, ಸಂಘಟನೆಯ ಮೌಲ್ಯ ಅಥವಾ ಗುರಿಗಳನ್ನು ಗಾಣಿಗರೆಲ್ಲರೂ ಪಾಲಿಸಬೇಕು.
* ಈ ಸಂಘಟನೆಯಲ್ಲಿ ಹಿರಿಯ ಪ್ರತಿಭೆಗಳು ಹಾಗೂ ಪ್ರತಿಭಾ ವಿದ್ಯಾರ್ಥಿಗಳನ್ನು ಗೌರವಿಸಲಾಯಿತು.
* ಹಿಂದುಳಿದ ಆಯೋಗದ ರಚನೆಯಲ್ಲಿ ಕನಿಷ್ಠ ಪಕ್ಷ ಒಬ್ಬರನ್ನಾದರೂ ಗಾಣಿಗ ಸಮುದಾಯದ ಸದಸ್ಯರಿರಬೇಕು.

ನಿಮ್ಮ ಸಮುದಾಯಕ್ಕೆ ದೊರೆಯಬೇಕಾದ ಲಾಭವನ್ನು ಬೇರೆ ಸಮುದಾಯಗಳು ಪಡೆದುಕೊಂಡಿವೆ. ಅದರೆ ಲಾಭ ಪಡೆದುಕೊಳ್ಳಲು ಗಾಣಗರ ಸಂಘಟನೆ ಜಿಲ್ಲೆಗೆ ಮಾತ್ರ ಸೀಮಿತವಾಗದೆ ಇಡೀ ರಾಜ್ಯಕ್ಕೆ ಸೀಮಿತವಾಗಬೇಕು. ರಾಜ್ಯ ಗಾಣಿಗರ ಸಮಾವೇಶವನ್ನು ನಡೆಸಬೇಕೆಂದು ಈ ಸಂಘಟನೆಯಲ್ಲಿ ನಿರ್ಣಯಿಸಲಾಯಿತು.

• • •

## ಅಧ್ಯಾಯ : ನಾಲ್ಕು

# ಸಜ್ಜನ ಗಾಣಿಗ ಸಮುದಾಯದ ಆಚರಣೆಗಳು

೪.೧ ಜೀವನಾವರ್ತನದ ಆಚರಣೆಗಳು

೪.೨. ವಾರ್ಷಿಕ ವರ್ತನದ ಆಚರಣೆಗಳು

## ಅಧ್ಯಾಯ : ನಾಲ್ಕು

## ಸಜ್ಜನ ಗಾಣಿಗ ಸಮುದಾಯದ ಆಚರಣೆಗಳು

ಮನುಷ್ಯನು ಬದುಕುತ್ತಿರುವ ಈ ವ್ಯವಸ್ಥೆ ಮೇಲ್ನೋಟಕ್ಕೆ ಒಂದೇ ಎಂದು ತೋರುತ್ತದೆ. ಆದರೆ ಅವನ ಬದುಕಿನ ತೀರಾ ಹತ್ತಿರಕ್ಕೆ ಬಂದು ಅವಲೋಕಿಸಿದರೆ ಒಬ್ಬ ವ್ಯಕ್ತಿಯ ಜೀವನ ಕ್ರಮಕ್ಕೂ ಇನ್ನೊಬ್ಬ ವ್ಯಕ್ತಿಯ ಜೀವನ ಕ್ರಮಕ್ಕೂ ತುಂಬಾ ವ್ಯತ್ಯಾಸವಿರುವುದು ಕಂಡು ಬರುತ್ತದೆ. ಸಾಮಾಜಿಕ ವ್ಯವಸ್ಥೆಯ ಅತೀ ಕನಿಷ್ಟತಮ್ಮ ಘಟಕವೆಂದರೆ ವ್ಯಕ್ತಿ, ಒಂದು ಕುಟುಂಬ ನಂತರ ಇಂದು ವೃತ್ತಿ ಮತ್ತು ಒಂದೇ ಮನೋಭಾವ, ಒಂದೇ ರೀತಿಯ ಆಚರಣೆಗೆ ಒಳಗಾದ ವ್ಯಕ್ತಿ ಸಮೂಹಕ್ಕೆ ಗುಂಪು, ಸಮೂಹ, ಸಂಘ, ಸಂಸ್ಥೆ, ಸಮುದಾಯ ಜಾತಿಗಳೆಂದು ಗುರುತಿಸಲಾಗುತ್ತದೆ. ಒಂದೇ ನೆಲದಲ್ಲಿ ಒಂದೇ ಕಡೆ ಬದುಕುವ ಇಂತಹ ಸಮುದಾಯ, ಜಾತಿಗಳನ್ನೆಲ್ಲಾ ಸೇರಿಸಿ ಸಮಾಜ, ಪ್ರದೇಶ, ನಾಡು, ದೇಶ ಹೀಗೆ ವಿಂಗಡಿಸಲಾಗುತ್ತದೆ.

ವ್ಯಕ್ತಿ

ಕುಟುಂಬ (ಸಮೂಹ)

ಸಮುದಾಯ

ಸಮಾಜ

ಆಧುನಿಕ ಜಗತ್ತು ತನ್ನ ಬಾಹು ಚಾಚಿದಂತೆಲ್ಲಾ ಮನುಷ್ಯ ಮನುಷ್ಯರೊಳಗಿನ ಸಂಬಂಧಗಳೆಲ್ಲಾ ಹೆಚ್ಚು ಸಂಕೀರ್ಣವಾಗುತ್ತಾ ನಡೆದಂತೆ ಯಾವುದೇ ಬುಡಕಟ್ಟು ಸಮುದಾಯಗಳು ಬದಲಾವಣೆಯ ಪ್ರಕ್ರಿಯೆಗೆ ಒಳಗಾದಂತೆ ಕಂಡರೂ ತನ್ನರಿವಿಗೆ ಬಾರದಂತೆಯೇ ತನ್ನ ಮೂಲ ಸಂಸ್ಕೃತಿಯನ್ನು ಕಾಯ್ದಿಟ್ಟುಕೊಳ್ಳಲು ನಿರಂತರ ಹೋರಾಡುತ್ತಲೇ ಇರುತ್ತದೆ. ಇದನ್ನು ಆ ಸಮುದಾಯವು ಅನ್ಯಜಾತಿ ಸಂಸ್ಕೃತಿಗಳ ನಿರಂತರ ಹರಿದಿನ, ಜಾತ್ರೆ, ಮುಂತಾದವುಗಳಲ್ಲಿ ಗಮನಿಸಬಹುದಾಗಿದೆ. ಇದಕ್ಕೆ ಸಜ್ಜನ ಗಾಣಿಗರ ಸಮುದಾಯವು ಹೊರತಾಗಿಲ್ಲ. ಈ ಸಮುದಾಯವು ಆಯಾಜಾತಿ ಸಂಸ್ಕೃತಿಗಳ ನಿರಂತರಧಾಳಿಯ ಮಧ್ಯದಲ್ಲಿಯೂ ಕೂಡ

ತನ್ನ ಆಚರಣೆ, ವಿಧಿ ವಿಧಾನಗಳ ಮೂಲಕ ತನ್ನ ಮೂಲ ಸಂಸ್ಕೃತಿಯ ಬೇರನ್ನು ಕಾಯ್ದುಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದು ಪ್ರಸ್ತುತ ಅಧ್ಯಯನದಲ್ಲಿ ಸಜ್ಜನ ಗಾಣಿಗರ ಆಚರಣೆಗಳನ್ನು ನೋಡುವುದರೊಂದಿಗೆ ಅವರ ಆಚರಣೆಗಳನ್ನು ಅವಲೋಕಿಸಬಹುದಾಗಿದೆ. ಆಚರಣೆ ಮಾನವನ ದಿನನಿತ್ಯದ ಬದುಕಿನ ಭಾಗವಾಗಿದೆ ಮತ್ತು ಕ್ರಿಯೆಯ ಮೂಲಕ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಯಾವುದೇ ದೇಶದ, ಜನಾಂಗದ ಸಂಸ್ಕೃತಿಯ ಪೋಷಣೆಗೆ ನಾಗರೀಕತೆಯ ಬೆಳವಣಿಗೆಗೆ ಆಚರಣೆಗಳು ಪ್ರಮುಖವಾಗಿವೆ. ಈ ಆಚರಣೆಗಳು ಆದಿ ಮಾನವನ ಜೊತೆಯಲ್ಲಿ ಬೆಳೆದು ಬಂದಿದ್ದು ದೈವಿಕ ಸ್ವರೂಪದಲ್ಲಿ ಸೃಷ್ಟಿಗೊಂಡಿವೆ. ಆಚರಣೆ ಎಂಬ ಪದಕ್ಕೆ ನಡತೆ. ಶಿಷ್ಟಾಚಾರ, ಆಚರಿಸುವ ಪದ್ಧತಿ, ಪರಂಪರಾಗತವಾಗಿ ಒದಗಿ ಬಂದ ನಿಯಮಿತ ನಿತ್ಯ ಕರ್ಮಗಳು, ಸಂಪ್ರದಾಯ, ಪದ್ದತಿ, ವಾಡಿಕೆ, ಕರ್ಮ, ಹೀಗೆ ಹಲವಾರು ಅರ್ಥಗಳಿವೆ. ಆಚಾರ ಮತಧರ್ಮಕ್ಕೆ ಸಂಬಂದಿಸದ್ದು ಎಲ್ಲಾ ಧರ್ಮಗಳಿಗೂ ಧರ್ಮಾಚರಣೆಗಳಿವೆ.

ಕ್ರೈಸ್ತ ಸಭೆಗಳಲ್ಲಿ ವಿವಿಧ ಆಚರಣೆಗಳಿವೆ ಆಲಯದೊಳಗೆ ಶಿಲುಬೆಗೆ ನಮಸ್ಕಾರ ಮಾಡುವುದು, ಮೇಣದ ಬತ್ತಿ ಹಚ್ಚಿ ಪೂಜೆ ಮಾಡುವುದು. ನಂತರಪ್ರಸಾದವನ್ನು ತೆಗೆದು ಕೊಳ್ಳುವರು, ಹೀಗೆ ಆಚರಣೆಯ ಬಗ್ಗೆ ತಿಳಿಯಲು ಹಲವಾರು ಉದಾಹರಣೆಗಳನ್ನು ಹೇಳಬಹುದು.

ಪ್ರಕೃತಿ ಮಡಿಲಿನಲ್ಲಿ ಬದುಕ ಬೇಕಾಗಿದ್ದ ಮಾನವ ಭಯ ಭಕ್ತಿಗಳಿಂದ ದೈವಿಕ ನಂಬಿಕೆಗಳನ್ನು ಆಚರಣೆಯ ಕ್ರಮದಲ್ಲಿ ಉಳಿಸಿಕೊಂಡಿದ್ದಾನೆ. ಸಮಾಜದ ಎಲ್ಲಾ ಸ್ತರಗಳಲ್ಲೂ ನಂಬಿಕೆ ಆಚರಣೆಗಳು ಅಸ್ಥಿತ್ವದಲ್ಲಿವೆ. ಮಾನವನು ಸಮಾಜಕ್ಕೆ ಕಟ್ಟು ಕಟ್ಟಳೆಗಳಿಗೆ ಬದ್ಧನಾಗಿ ನಡೆದು ಕೊಳ್ಳುವುದರಿಂದ ಇವುಗಳಿಂದ ಹೊರತಾಗಿರಲು ಸಾಧ್ಯವಿಲ್ಲ ನಂಬಿಕೆ, ಆಚರಣೆಗಳು ಬಹುತೇಕವಾಗಿ ಪ್ರಕೃತಿ ಮೂಲದವು. ಆದ್ದರಿಂದ ಇವುಗಳನ್ನು ದೈವೀ ಸಂಬಂಧದ ಸೃಷ್ಠಿ ಎನ್ನಬಹುದು. ಉದಾ: ಸತ್ತವರಿಗೆ ತಿಥಿ ಮಾಡದೆ ಹೋದರೆ ದೆವ್ವಗಳಾಗುತ್ತಾರೆ, ಎಂಬ ನಂಬಿಕೆ ಹಿಂದೂಗಳಲ್ಲಿ ಅಷ್ಟೇ ಅಲ್ಲದೆ ಸಜ್ಜನ ಗಾಣಿಗರಲ್ಲಿಯೂ ಆಚರಣೆಯಲ್ಲಿದೆ.

ಮಾನವನ ಸಾಮಾಜಿಕ ಬದುಕಿನಲ್ಲಿ ಹುಟ್ಟಿನಿಂದ ಸಾವಿನವರೆಗೆ ವಿವಿಧ ಸಂಸ್ಕಾರಗಳು ನಡೆಯುತ್ತವೆ. ನಲಿವಿನ ಮುಖವಾಗಿ ಹಬ್ಬಗಳು ನಡೆಯುತ್ತವೆ. ಆತ್ಮದ ಹಂಬಲಕ್ಕೋ, ಅರಿವಿಗೋ, ನೈತಿಕ ಚಾಲನೆಗೋ, ಧಾರ್ಮಿಕ ಪೂಜಾ ವಿಧಿಗಳು ನಡೆಯುತ್ತವೆ. ಇಲ್ಲಿನ ಸಂಸ್ಕೃತಿಯಂತೆ ದೇವರು ಮತ್ತು ಹಿರಿಯರಿಗೆ ಗೌರವ ಭಕ್ತಿಗಳ ಆಚರಣೆಗಳು ನಡೆಯುತ್ತವೆ. ಸಾಮಾನ್ಯವಾಗಿ ದೈನಂದಿನ ಆಗು ಹೋಗುಗಳಲ್ಲಿ ಮದುವೆ ಮುಂಜಿಗಳಲ್ಲಿ, ಹುಟ್ಟು ಸಾವುಗಳಲ್ಲಿ, ಸ್ತ್ರೀ ಪುರುಷರಲ್ಲಿ ಮಾನಸಿಕ ನೆಮ್ಮದಿ ಹಾಗೂ ಸಂತೋಷವೇ ಇವುಗಳ ಪ್ರಮುಖ ಉದ್ದೇಶವಾಗಿರುತ್ತದೆ.

ಸಜ್ಜನ ಗಾಣಿಗರು ತುಪ್ಪದವರು, ಬೀಮ ಸಮುದ್ರದ ಕೆರೆಯ ದಡದಲ್ಲಿರುವ ಮಾವಿನ ಹಳ್ಳಿ ಬಸವೇಶ್ವರಗಳನ್ನು ಮನೆ ದೇವರಾಗಿ ಪೂಜಿಸುತ್ತಾರೆ. ನಾಯಕನ ಹಟ್ಟಿ ತಿಪ್ಪೇರುದ್ರ ಸ್ವಾಮಿಯನ್ನು ಅಲ್ಲಿಯ ಸುತ್ತ ಮುತ್ತಲಿರುವ ಸಜ್ಜನ ಗಾಣಿಗ ಸಮುದಾಯಗಳು ಮನೆ ದೇವರೆಂದು ಪೂಜಿಸುತ್ತಾರೆ. ಜೊತೆಗೆ ಕೊಟ್ಟಿದವರು ಸೂರ ಶೆಟ್ಟಿಯವರು, ವೀರಭದ್ರ ಸ್ವಾಮಿಯನ್ನು ಪೂಜಿಸುತ್ತಾರೆ. ದ್ವಮಚ್ಚೇರು,

ಹುಲಿಯಪ್ಪಾದ್ಯಾಮಚ್ಕೋರು ಇವರು ಹುಲಿಗೇಶಮ್ಮನನ್ನು ಮನೆ ದೇವರೆಂದು ಪೂಜಿಸುತ್ತಾರೆ ಕೋಣನೋರು, ಸಂಕಾನೋರು, ವೀರಭದ್ರಸ್ವಾಮಿಯನ್ನು ಪೂಜಿಸುವರು. ಸಂಕರ ಶೆಟ್ಟಿಯರು ಬಾರೇರು ಇವರು ವರವಿನ ಮಲ್ಲೇಶ್ವರನನ್ನು ಮನೆ ದೇವರೆಂದು ಪೂಜಿಸುತ್ತಾರೆ. ಗುಮ್ಮನೋರು ತಿಪ್ಪೇಸ್ವಾಮಿಯನ್ನು ಮನೆದೇವರೆಂದು ಪೂಜಿಸುತ್ತಾರೆ.

ಇಷ್ಟೇ ಅಲ್ಲದೆ, ಸಜ್ಜನ ಗಾಣಿಗರು ಬಹುದೇವತಾರಾದಕರು. ಜೊತೆಗೆ ಹಲವಾರು ಹೆಣ್ಣುದೇವರುಗಳಿಗೂ ನಡೆದುಕೊಳ್ಳುತ್ತಾರೆ. ಗೌರ ಸಮುದ್ರದ ಮಾರಮ್ಮ ದೇವಿ ಪೂಜಿಸುವರು. ಚೌಡಮ್ಮ ದೇವಿಯನ್ನು ಊರ ದೇವತೆಯೆಂದು ಪೂಜಿಸುತ್ತಾರೆ. ಪ್ರತಿ ಊರುಗಳಲ್ಲಿ ಚೌಡಮ್ಮನ ಜಾತ್ರೆಯನ್ನು ವಾರಗಳ ಕಾಲ ನೆರವೇರಿಸುತ್ತಾರೆ. ಬನ್ನಿ ಮಹಾಂಕಾಳಿಯನ್ನು ಪೂಜಿಸುತ್ತಾರೆ. ಬೇರೆ ಬೇರೆ ಭಾಗಗಳಲ್ಲಿಬೇರೆ ಬೇರೆಯಾಗಿ ಸ್ತ್ರೀ ಪುರುಷ ದೇವರನ್ನು ಪೂಜಿಸುವರು.

**೪.೧. ಜೀವನಾರ್ತನಾ ಆಚರಣೆಗಳು**

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರ ಹಂತಗಳಿರುತ್ತವೆ. ಇಂತಹ ಸಂದರ್ಭಗಳಲ್ಲಿ ನಡೆಯುವ ಆಚರಣೆಗಳನ್ನು ಸ್ಥಿತ್ಯಂತರದ ವಿಧಗಳೆಂದು ಕರೆಯುತ್ತೇವೆ. ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ಭಾರತೀಯರನ್ನು ಗಮನಿಸಿ ಹೇಳುವುದಾದರೆ ಹೆಂಗಸರಲ್ಲಿ ಈ ಸ್ಥಿತ್ಯಂತರದ ವಿಧಿಗಳು ಹೆಚ್ಚು. ಹುಟ್ಟಿನ ಆಚರಣೆ ನಾಮಕರಣ, ಮೈ ನೆರೆಯುವಿಕೆ, ಮದುವೆ, ಸೀಮಂತ, ಸಾವಿನ ಆಚರಣೆ ಹೀಗೆ ವೈವಿಧ್ಯಮಯ. ಸಮಾಜವು ಬಂದು ವ್ಯಕ್ತಿಯನ್ನು ಅಂಗೀಕರಿಸುವಂತೆ ಮಾಡುವಲ್ಲಿ ಈ ಜೀವನಾವರ್ತನದ ವಿಧಿ ಆಚರಣೆಗಳು. ನೆರವಾಗುತ್ತವೆ. ಈ ಸಂದರ್ಭದಲ್ಲಿ ನಡೆಯುವ ಆಚರಣೆಗಳು ವ್ಯಕ್ತಿಯ ಸಾಮಾಜಿಕ ಸ್ಥಿತಿಗತಿಯಲ್ಲಿ ಬದಲಾವಣೆ ತರುತ್ತವೆ.

**ಸಜ್ಜನ ಗಾಣಿಗರ ಜೀವನಾವರ್ತನಾ ಆಚರಣೆಗಳು ಈ ಕೆಳಗಿನಂತಿವೆ.**

**ಒಡಲಕ್ಕಿ ಶಾಸ್ತ್ರ ಸೀಮಂತ ಕಾರ್ಯ**

ವಿವಾಹಿತ ಹೆಣ್ಣೊಂದು ಮೊದಲ ಗರ್ಭಧರಿಸಿದಾಗ ಗಂಡನ ಮನೆಯವರು ಹೆಣ್ಣಿಗೆ ಮಾಡುವಂತಹ ಆಚರಣೆಯೇ ಸೀಮಂತ ಕಾರ್ಯವಾಗಿದೆ. ವಿವಾಹವಾಗಿ ಹೆಣ್ಣು ಮೂರು ವರ್ಷಗಳೊಳಗೆ ಗರ್ಭಿಣಿಯಾಗದಿದ್ದಲ್ಲಿ ಆತಂಕಕ್ಕೆ ಒಳಗಾದ ಆ ಕುಟುಂಬಗಳು ತಮ್ಮ ದೈವಗಳಾದ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ವೀರಭದ್ರ ಸ್ವಾಮಿ, ಮಾವಿನಹಳ್ಳಿ ಬಸವೇಶ್ವರ, ಮಾರಮ್ಮ, ಚೌಡಮ್ಮ ಮತ್ತು ದ್ಯಾಮಲಮ್ಮ ಮುಂತಾದ ದೇವ ದೇವತೆಗಳಿಗೆ ವಿವಾಹಿತ ಹೆಣ್ಣಿನ ಒಡಲನ್ನು ತುಂಬಿಸುವಂತೆ ಹಲವು ಹರಕೆಗಳನ್ನು ಕಟ್ಟುತ್ತಾರೆ.

ಸಜ್ಜನ ಗಾಣಿಗರಲ್ಲಿ ಗರ್ಭಿಣಿ ಹೆಣ್ಣನ್ನು ತವರು ಮನೆ ಹಾಗೂ ಗಂಡನ ಮನೆ ಎರಡರಲ್ಲೂ ಸಂಭ್ರಮದಿಂದ ಕಾಣಲಾಗುತ್ತದೆ. ಹೆಣ್ಣಿನ ಮೊದಲ ಬಸಿರಿಗೆ ಚೊಚ್ಚಲ ಬಸಿರೆಂದು ಕರೆಯುತ್ತಾರೆ. ಚೊಚ್ಚಲ ಬಸಿರಿಗೆ ಮಾತ್ರ ಒಡಲಕ್ಕಿ ಶಾಸ್ತ್ರ ಮಾಡಲಾಗುತ್ತದೆ.

ಸಜ್ಜನ ಗಾಣಿಗರಲ್ಲಿ ಹೆಣ್ಣು ಗರ್ಭಧರಿಸಿ ಎಂಟನೇ ತಿಂಗಳಲ್ಲಿ ಸೀಮಂತ ಮತ್ತು ಕುಬಸದ ಕಾರ್ಯವನ್ನು ನೆರವೇರಿಸುತ್ತಾರೆ. ಗರ್ಭಿಣಿ ಸ್ತ್ರೀ ಹೊಸ ಹಸಿರು ಸೀರೆ ಮತ್ತು ಕುಬಸ ಕೈಗೆ ಐದು ಹಸಿರು ಬಳೆಗಳನ್ನು ಹಾಗೂ ಗಂಡನಿಗೆ ಹೆಣ್ಣಿನ ಮನೆಯವರು ಹೊಸ ಬಟ್ಟೆಯನ್ನು ಕೊಡಿಗೆ ರೂಪದಲ್ಲಿ ಕೊಡುವುದಿದೆ. ಶ್ರೀಮಂತ ಕುಟುಂಬದವರು ಗರ್ಭಿಣಿಯ ಗಂಡನಿಗೆ ಬಂಗಾರದ ಚೈನ್ ಮತ್ತು ಉಂಗುರವನ್ನು ಕೊಡುತ್ತಾರೆ. ಈ ಸಂಪ್ರದಾಯ ಹೆಚ್ಚಾಗಿ ಉತ್ತರ ಕರ್ನಾಟಕದ ಗಾಣಿಗ ಸಮುದಾಯದಲ್ಲಿ ಕಂಡುಬರುತ್ತದೆ.

ಸಜ್ಜನ ಗಾಣಿಗರಲ್ಲಿ ಗರ್ಭಿಣಿಯು ಅತಿ ಕಷ್ಟಕರ ಕೆಲಸಗಳನ್ನು ಮಾಡಬಾರದು ಎಂಬ ನಂಬಿಕೆ ಇದೆ, ಗರ್ಭಿಣಿಯ ಹೆರಿಗೆ ಆಗುವವರಿಗೆ ಮನೆಬಿಟ್ಟು ಎಲ್ಲಿಯೂ ಹೋಗುವಂತಿಲ್ಲ. ಸೂರ್ಯಗ್ರಹಣ ಮತ್ತು ಚಂದ್ರಗ್ರಹಣದಂದು ಗರ್ಭಿಣಿ ಮಹಿಳೆಗೆ ಅದನ್ನು ನೋಡದಂತೆ ಎಚ್ಚರಿಕೆ ವಹಿಸುತ್ತಾರೆ.

ಸಜ್ಜನ ಗಾಣಿಗರಲ್ಲಿ ಮುತ್ತೈದೆಯರು ಐದು ಜನ ಗರ್ಭಿಣಿಯ ಸ್ನಾನ ಮಾಡಿಸುತ್ತಾರೆ. ನಂತರ ಕರಿಯ ಕಂಬಳಿಯ ಗದ್ದಿಗೆ ಮಾಡಿ ಅದರ ಮೇಲೆ ಗರ್ಭಿಣಿ ಹೆಣ್ಣನ್ನು ಹಾಗೂ ಆಕೆಯ ಗಂಡನನ್ನು ಕೂರಿಸುತ್ತಾರೆ. ಇಬ್ಬರಿಗೂ ಮುತ್ತೈದೆಯರು ಮುಖಕ್ಕೆ ಅರಿಶಿನ ಹಚ್ಚುತ್ತಾರೆ. ಹಾಗೂ ಕುಂಕುಮವನ್ನು ಹೆಣ್ಣಿನ ಹಣೆಗೆ ಇಡುತ್ತಾರೆ. ಗರ್ಭಿಣಿಗೆ ಮೊದಲು ತವರು ಮನೆಯವರು, ಅಕ್ಕಿ, ಎಲೆ ಅಡಿಕೆ, ಕೊಬ್ಬರಿ ಗಿಟುಕ, ಅರಿಶಿನ ಕೊಂಬು ಹಾಗೂ ಹೊಸ ಸೀರೆ ಕುಬುಸದೊಂದಿಗೆ, ಒಡಲಕ್ಕಿಯನ್ನು ಹಾಕುತ್ತಾರೆ. ನಂತರ ಅಲ್ಲಿ ಬಂದಿರುವ ಮತ್ತು ಸೇರಿರುವ ಮತ್ತೈದೆಯರು ತಮ್ಮ ತಮ್ಮ ಮನೆಗಳಿಂದ ಅಕ್ಕಿಯನ್ನು ತಂದು ಸೀಮಂತಕ್ಕೆ ಒಳಗಾದ ಹೆಣ್ಣಿನ ಮಡಿಲಿಗೆ ಹಾಕುತ್ತಾರೆ. ಹಾಗೂ ಆರತಿ ಬೆಳಗುತ್ತಾರೆ. ಈ ಸಂದರ್ಭದಲ್ಲಿ ಗರ್ಭಿಣಿಯು ಬಯಸಿದ ಎಲ್ಲಾ ವಸ್ತುಗಳನ್ನು ಹಂಪಲನ್ನು ತವರಿನವರು ತರುವುದುಂಟು. ಆ ಕಾರ್ಯದ ನಂತರ ಉಡಿ ಶಾಸ್ತ್ರಕ್ಕಾಗಿ ಬಂದ ಬಂಧು ಬಳಗಕ್ಕೆ ಸಿಹಿ ಊಟ ಮಾಡಿಸಲಾಗುತ್ತದೆ. ಊಟದ ಕೊನೆಗೆ ಮೊಸರನ್ನವನ್ನು ಹಾಕುತ್ತಾರೆ. ಹೊಟ್ಟೆ ತಂಪಾಗಿಸಿಕೊಂಡು ತಮ್ಮ ಮಗಳಿಗೆ ಒಳಿತಾಗಲೆಂದು ಹರಸಿ ಎಂದಿರಬೇಕು.

ಈ ಕಾರ್ಯದಲ್ಲಿ ಭಾಗವಹಿಸಿದ ಬಂಧು ಬಾಂಧವರು ಗರ್ಭಿಣಿಗೆ ವಸ್ತು ಮತ್ತು ಹಣದ ರೂಪದಲ್ಲಿ ಕೊಡುಗೆ ನೀಡುತ್ತಾರೆ.

ಸಜ್ಜನ ಗಾಣಿಗರಲ್ಲಿ ಒಡಲಕ್ಕಿ ಶಾಸ್ತ್ರವಾದ ನಂತರ ಹೆಣ್ಣನ್ನು ತವರು ಮನೆಗೆ ಕರೆದುಕೊಂಡು ಹೋಗಲಾಗುತ್ತದೆ. ಹೆಣ್ಣಿಗೆ ಹೆರಿಗೆಯಾಗಿ ಐದು ತಿಂಗಳು ಇಲ್ಲವೆ ಒಂಬತ್ತು ತಿಂಗಳ ನಂತರ ಮರಳಿ ಗಂಡನ ಮನೆಗೆ ಸೇರುವುದು. ಅಲ್ಲಿಯವರೆಗೂ ಆಕೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಆಕೆಯ ತವರು ಮನೆಯವರಿಗೆ ಸೇರಿರುತ್ತದೆ. ಹೆರಿಗೆಯಾದ ಹೆಣ್ಣು ಮರಳಿ ಗಂಡನ ಮನೆಗೆ ಬರುವಾಗ ಬಿದುರಿನ ತೊಟ್ಟಿಲು, ಮಗುವಿಗೆ ಉಡುದಾರ, ಕಿವಿಗೆ ಮುರುವು, ಕಾಲ ಕಡಗ ಮಗುವಿನ ಲಿಂಗದೊಂದಿಗೆ ಕರಡಿಗೆ, ಶ್ರೀಮಂತರು ಮಗುವಿನ ಬಂಗಾರದ ಚೈನನ್ನು ಕೊಡುವ ಸಂಪ್ರದಾಯವಿದೆ.

ಸಜ್ಜನ ಗಾಣಿಗರಲ್ಲಿ ಒಡಲಕ್ಕಿ ಶಾಸ್ತ್ರದೊಂದಿಗೆ ಅಲ್ಲಿ ಬಂದಂತಹ ಎಲ್ಲಾ ಮುತ್ತೈದೆಯರು ಮಗುವನ್ನು ಚಿರಾಯು ಹರಸುತ್ತಾರೆ, ಇವರಲ್ಲಿ ಗಂಡು ಪ್ರಧಾನ ಸಮುದಾಯವಿರುವುದರಿಂದ ಗಂಡು ಮಗುವನ್ನು ಹೆರಬೇಕೆಂದು, ಇವರು ಬಯಸುತ್ತಾರೆ.

ಸಜ್ಜನ ಗಾಣಿಗರಲ್ಲಿ ಒಡಲಕ್ಕಿ ಶಾಸ್ತ್ರದ ದಿವಸವೂ, ಮನೆಯ ಗುರುಗಳಾದ ಜಂಗಮರನ್ನು ಮನೆಗೆ ಕರೆತಂದು ಕೆಲವು ಮಂತ್ರಗಳೊಂದಿಗೆ ಈ ಕಾರ್ಯವನ್ನು ಮುಗಿಸಿ ಕೊಡುತ್ತಾರೆ. ಸಜ್ಜನ ಗಾಣಿಗರಲ್ಲಿ ಈ ದಿವಸ ಸಂತೋಷದಿಂದ ತಮ್ಮ ರಕ್ತ ಸಂಬಂಧಿಗಳೆಲ್ಲಾ ಬೆರೆತು ಹೋಗುವ ದಿವಸವು ಇದಾಗಿದೆ.

**ಹೆರಿಗೆ/ಜನನ**

ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲಿಯೂ ಹುಟ್ಟು ಸಾವಿನ ವಿಧಿ ನಿಷೇಧಗಳು ಒಂದೇ ತೆರನಾಗಿ ಕಂಡು ಬರುತ್ತವೆ. ಗರ್ಭತುಂಬಿ ಒಂಭತ್ತು ತಿಂಗಳ ನಂತರ ಹೆರಿಗೆಯಾಗುವುದು ಸಾಮಾನ್ಯವಾಡಿಕೆ. ಸೂಲಗಿತ್ತಿ ಒಂದು ಹೆರಿಗೆಯನ್ನು ಮಾಡಿಸಿ ಕೂಸಿನ ಮಾಂಸವನ್ನು ಒಂದು ಪಾತ್ರೆಯಲ್ಲಿ ಹಾಕಿ ಮುಚ್ಚುವರು. ದನದ ಕೊಟ್ಟಿಗೆ ಇಲ್ಲವೆ ಅದಿಲ್ಲದವರು ಮನೆಯ ಹಿತ್ತಿಲಿನಲ್ಲಿ ಇಲ್ಲವೆ, ತಿಪ್ಪೆಯಲ್ಲಿ ಗುಣಿ ತೊಡಿ ಅದರಲ್ಲಿ ಮುಚ್ಚುವರು. ಸಜ್ಜನ ಗಾಣಿಗರಲ್ಲಿ ಕೂಸನ್ನು ಸ್ವಚ್ಛವಾಗಿ ತೊಳೆದು ಮೃದುವಾದ ಬಟ್ಟೆಯಿಂದ ಮೈ ಒರೆಸುವರು ಮತ್ತು ತಾಯಿಗೂ ನೀರನ್ನು ಹಾಕಿಸುತ್ತಾರೆ. ತಾಯಿ ಮತ್ತು ಮಗುವನ್ನು ಪ್ರತ್ಯೇಕವಾದ ಕೋಣೆಯೊಳಗೆ ಮೃದುವಾದ ಹಾಸಿಗೆಯಲ್ಲಿಮಲಗಿಸುವರು. ಏಕೆಂದರೆ ಕಾಲಧೂಳಿ ಆಗಬಾರದೆಂದು ಮತ್ತು ಯಾರೊಬ್ಬರ ಕೆಟ್ಟ ನೆರಳು ಮಗುವಿನ ಮೇಲೆ ಬೀಳಬಾರದೆಂದು ಪ್ರತ್ಯೇಕ ಕೋಣೆಯಲ್ಲಿ ಮಲಗಿಸುವರು. ಹೆರಿಗೆಯ ನಂತರ ಸೂಲಗಿತ್ತಿಯನ್ನು ಹೊಸ ಸೀರೆ, ಖಣ, ಎಲೆ ಅಡಿಕೆ, ಉಡಿಯಲ್ಲಿ ದಕ್ಷಿಣ ಹಾಕಿ ಕಳಿಸುವರು. ಬಾಣಂತಿಗೆ ತೇವಾಂಶ, ರಹಿತವಾದ ಬೆಚ್ಚಗಿಡಲು ದಿನಕ್ಕೆ ಎರಡು ಸಾರಿ ಶೀತದಿಂದ ರಕ್ಷಿಸಲು ಕಬ್ಬಿಣದ ಬುಟ್ಟಿಯೊಳಕ್ಕೆ ಬೆಂಕಿ ಕಾವು ಮತ್ತು ಕೆಂಡವು ಕಾವು ಕೊಡಿಸುವರು. ಅದರಂತೆ ಕೂಸಿಗೆ ಪ್ರತಿದಿನ ಎಣ್ಣೆ ಸವರಿ ಬಿಸಿ ನೀರಿನಿಂದ ಸ್ನಾನ ಮಾಡಿಸುವರು. ಮಗು, ಹುಟ್ಟಿದ ನಂತರ ಜಾತಕವನ್ನು ಜ್ಯೋತಿಷ್ಯ ಕೇಳಿಸುವರು. ಆಗಲೇ ಮಗುವಿನ ಹುಟ್ಟಿದ ನಕ್ಷತ್ರ, ಕುಲ, ಗೋತ್ರ, ರಾಶಿ, ಜನ್ಮನಾಮ, ಜ್ಯೋತಿಷ್ಯಗಳಿಂದ ಬರೆಯಿಸಿ ಇಡುತ್ತಾರೆ. ಬಾಣಂತಿ ಕೂಸು ಇದ್ದ ಮನೆಯಲ್ಲಿ ಹೊರಗಿನಿಂದ ಬಂದ ವ್ಯಕ್ತಿಗಳು, ಮನೆಯೊಳಗೆ ಹೋಗ ಬೇಕಾದರೆ ಮನೆಯ ಹೊರಭಾಗದಲ್ಲಿಯೇ ಕೈ ಕಾಲುಗಳನ್ನು ತೊಳೆದುಕೊಂಡು ಪ್ರವೇಶಿಸುತ್ತಾರೆ.

**ಸೂತಕ**

ಬಹುಪಾಲು ಬುಡಕಟ್ಟುಗಳಲ್ಲಿ ಹೆರಿಗೆಯನ್ನು ಸೂತಕವೆಂದೇ ಭಾವಿಸಲ್ಪಡುತ್ತದೆ. ಆ ಕಾರಣಕ್ಕಾಗಿಯೇ, ಹೆರಿಗೆಯಾದ ಹೆಣ್ಣನ್ನು ಇಂದು ಪ್ರತ್ಯೇಕ ಕೊಠಡಿಯಲ್ಲಿ ಮತ್ತು ಗುಡಿಸಿಲಿನ ಒಂದು ಮೂಲೆಯಲ್ಲಿ ಇರಲು ಬಿಟ್ಟಿರುತ್ತಾರೆ.

ಕಾಡುಗೊಲ್ಲರು, ಬೇಡರು, ಅಗೇರರು ಇವರುಗಳಲ್ಲಿ ಹೆರಿಗೆಯು ಮನೆಯ ಹೊರಗೆ ಅವರು ನಿಗದಿಪಡಿಸಿದ ಸ್ಥಳದಲ್ಲಿ ಹೆರಿಗೆ ಮಾಡಿಸುತ್ತಿದ್ದರು. ಇತ್ತಿತ್ತಲಾಗಿ ಸೂಲಗಿತ್ತಿಯನ್ನು ಹೊರತಾಗಿ ಯಾರು ಪ್ರವೇಶಿಸುವಂತಿಲ್ಲ. (ಶಂಕರ ನಾರಾಯಣ.ತೀ.ನಂ., ೧೯೮೬, ೨೫.)

ಸಜ್ಜನ ಗಾಣಿಗರಲ್ಲಿಯೂ ಸಹ ಹೆರಿಗೆಯಾದ ಮನೆಯು ಸೂತಕದ ಮನೆಯಂದು ಅದೇ ರೀತಿಯಲ್ಲಿ ಸಾವು ಸಂಭವಿಸಿದ ಮನೆಯು ಸೂತಕದ ಮನೆಯೆಂದು ಹಾಗೂ ಋತುಮತಿಯಾಗುವುದು ಅಂತಹ ಮನೆಗಳಲ್ಲಿ

ಸೂತಕವನ್ನು ಆಚರಿಸುತ್ತಾರೆ. ಮಗುವಿನ ಹೆರಿಗೆಯ ನಂತರ ಸ್ವಲ್ಪದಿನಗಳ ಕಾಲ ಆ ಮನೆಯು ಸೂತಕದ ಮನೆ ಎನಿಸುತ್ತದೆ. ಈ ಸಂದರ್ಭದಲ್ಲಿ ಸಜ್ಜನ ಗಾಣಿಗರು ದೇವರ ಪೂಜೆಯನ್ನು ಮಾಡುವುದಿಲ್ಲ. ದೇವಸ್ಥಾನಗಳಿಗೆ ಹೋಗುವುದಿಲ್ಲ, ಹೀಗೆ ನಂತರ ಒಂದು ತಿಂಗಳೊಳಗಾಗಿ ಮನೆ, ನೆಲ, ಎಲ್ಲಾವನ್ನು ಸುಣ್ಣ ಬಣ್ಣಗಳನ್ನು ಹಚ್ಚಿ ಹೆರಿಗೆಯಾದ ತಾಯಿಯ ರಕ್ತ ಸ್ರಾವ ನಿಲ್ಲುವವರೆಗೂ ಅದು ಮುಟ್ಟಿನ ಅಥವಾ ಸೂತಕದ ಮನೆಯೆಂದು ಕರೆಯುತ್ತಾರೆ. ಮನೆಯವರು ಯಾರಾದರೂ ತಿಂಗಳ ರಕ್ತ ಸ್ರಾವ ಕಂಡು ಬಂದಲ್ಲಿ ಅವರು ಮೂರು ದಿವಸಗಳ ಕಾಲ ಮನೆಯ ಗರ್ಭಗುಡಿಯ ಒಳಗೆ ಹೋಗುವಂತಿಲ್ಲ. ಅವರು ದೇವರನ್ನು ಪೂಜಿಸುವಂತಿಲ್ಲ. ಅದೇ ರೀತಿಯಲ್ಲಿ ಸತ್ತ ಮನೆಯನ್ನು ಸಜ್ಜನ ಗಾಣಿಗರಲ್ಲಿ ಸೂತಕದ ಮನೆಯೆಂದು, ಆ ಮನೆಗೆ ಸುಣ್ಣ ಬಣ್ಣಗಳನ್ನು ಬಳಿದು ಸತ್ತವರ ಮೂರು ದಿವಸ ಮತ್ತು ಹದಿನಾರು ದಿವಸ ಸಮಾರಾಧನೆ ನಡೆದು ಕಡೆಗೆ ಸತ್ತವರನ್ನು ಒಳಗೆ ಕರೆದು ಕೊಳ್ಳುವುದು. ಇಷ್ಟೆಲ್ಲಾ ಶಾಸ್ತ್ರಗಳನ್ನು ಮಾಡಿದ ಮೇಲೆ ಸೂತಕ ನಿವಾರಣೆಯಾಗುತ್ತದೆ. ಈ ಸೂತಕ ಜನನ ಸೂತಕ ೦೯ ದಿವಸ. ಋತುಮತಿ ಸೂತಕ ೧೬ ದಿವಸಗಳು.

**ನಾಮಕರಣ/ತೊಟ್ಟಿಲು**

ಸಜ್ಜನ ಗಾಣಿಗರಲ್ಲಿ ಮಗು ಜನನದ ಮೂರುದಿನ, ಒಂಭತ್ತು ದಿನ ಹದಿನಾರು ದಿನದಂದು ವರ್ಷ ತುಂಬುವುದರೊಳಗಾಗಿ ತಮಗೆ ಅನುಕೂಲವಾದ ಒಳ್ಳೆಯ ದಿನವನ್ನು ಗುರುತಿಸಿಕೊಂಡು ನಾಮಕರಣ ಮಾಡಲಾಗುತ್ತದೆ ಇದೇ ಸಂಪ್ರದಾಯವು ಮುದ್ದೆ ಕಂಬಾರರಲ್ಲಿಯೂ ಇದೆ. (ಆರ್. ಬಿ. ಕುಮಾರ್, ೨೦೦೦, ೮೮.)

ಸಜ್ಜನ ಗಾಣಿಗರಲ್ಲಿ ಮಗುವಿನ ನಾಮಕರಣದಂದು ತಾಯಿ ಮತ್ತು ಮಗುವಿನ ತಲೆಸ್ನಾನ ಮಾಡಿಸಿ, ಜಂಗಮರನ್ನು ಕರೆಯಿಸಿ, ಮಗುವಿಗೆ ಪೂಜೆ ಮಾಡಿಸುತ್ತಾರೆ. ಮನೆಗೆ ಗೋಗಂಜನ್ನು ಗೋಮಂತ್ರವನ್ನು ಚೆಲ್ಲುತ್ತಾರೆ. ನಂತರ ಮಗುವಿಗೆ ಲಿಂಗಧಾರಣೆಯನ್ನು ಮಾಡುತ್ತಾರೆ. ನಂತರ ಅವರಿಗೆ ಬೇಕಾದ ಹೆಸರನ್ನು ಮಗುವಿನ ಕಿವಿಯಲ್ಲಿ ಹೇಳುತ್ತಾರೆ. ನಾಮಕರಣದ ಮನೆಯಲ್ಲಿ ಸಿಹಿ ಊಟವನ್ನು ಮಾಡಿಸಿ ದೇವರಿಗೆ ಎಡೆ ಹಿಡಿದು ಪೂಜೆ ಮಾಡುತ್ತಾರೆ.

ಬಾಣಂತಿಯರು ತಣ್ಣನೆಯ ನೀರು ಮುಟ್ಟುವುದಿಲ್ಲ ಹಾಗೂ ಪೊರಕೆ ಮರ ಇವೆಲ್ಲವನ್ನು ಮೂರು ತಿಂಗಳಲ್ಲಿ ಪೂಜೆ ಮಾಡಿಸಿ ಮುಟ್ಟಲು ನೀಡುತ್ತಾರೆ.

ಸಮಾನ್ಯವಾಗಿ ಸಜ್ಜನ ಗಾಣಿಗರಲ್ಲಿ ಐದು ತಿಂಗಳಲ್ಲಿ ನಾಮಕರಣವನ್ನು ಮಾಡುತ್ತಾರೆ. ಮಗುವಿಗೆ ತವರಿನವರು, ಕಾಲು ಕಡಗ, ಬಿಳಿಯ ಉಡುದಾರ, ಉಂಗುರ, ಬೆಳ್ಳಿಯ ಲಿಂಗದ ಕಾಯಿ ತರುತ್ತಾರೆ. ತವರು ಮನೆಯವರು ತಾಯಿ ಮತ್ತು ಮಗುವಿಗೆ ನಾಮಕರಣದಿಂದ ಹೊಸ ಬಟ್ಟೆ ಕೊಡುತ್ತಾರೆ. ನಾಮಕರಣದ ಸಂದರ್ಭದಲ್ಲಿ ತೊಟ್ಟಿಲನ್ನು ಶೃಂಗಾರ ಮಾಡುತ್ತಾರೆ. ತೊಟ್ಟಿಲಿನಲ್ಲಿ ಜಂಗಮರ ಕಾಲನ್ನು ಇಡುತ್ತಾರೆ. ಮನೆಯಲ್ಲಿ ಪೂಜೆಯೊಂದಿಗೆ ತೊಟ್ಟಿಲ ಪೂಜೆಯನ್ನು ಮಾಡುತ್ತಾರೆ. ಮನೆಗೆ ಗೋಮಂತ್ರವನ್ನು ಹಾಕುತ್ತಾರೆ. ನಂತರ ಗಂಡನ ಮನೆಯವರು ತಂದ ಉಡಿಯಕ್ಕಿಯನ್ನು ಮಗುವಿನ ತಾಯಿಗೆ ಹಾಕುತ್ತಾರೆ. ಪೂಜಿಸಿದ

ತೊಟ್ಟಿಲಿನಲ್ಲಿ ಮಗುವನ್ನು ಮಲಗಿಸುತ್ತಾರೆ. ತೊಟ್ಟಿಲಿನ ನಾಲ್ಕು ಮೂಲೆಗೆ ಬಟ್ಟೆಯಲ್ಲಿ ಬೆಲ್ಲ ಮತ್ತು ಮಂಡಕ್ಕಿ ಕಟ್ಟಿ ಇಡುತ್ತಾರೆ. ನಂತರ ಮಂಡಕ್ಕಿ ಬೆಲ್ಲವನ್ನು ಮಕ್ಕಳಿಗೆ ಹಂಚುತ್ತಾರೆ.

ಸೋದರತ್ತೆಯರು ತೊಟ್ಟಿಲನ್ನು ಮೂರು ಸುತ್ತು ಸುತ್ತಿ ಹೆಸರನ್ನು ಹೇಳಿ ಇಡುತ್ತಾರೆ. ಸೋದರತ್ತೆ ತೊಟ್ಟಿಲು ಸುತ್ತುವಾಗ ಅಲ್ಲಿ ಸೇರಿದ ಮುತ್ತೈದೆಯರು ಬಿದಿರಿನ ವಸ್ತುವಿನಿಂದ ಹೊಡೆಯುವ ಪದ್ಧತಿ ಇದೆ. ತೊಟ್ಟಿಲನ್ನು ತೂಗುವ ಶಾಸ್ತ್ರವನ್ನು, ಮೂರು ಜನ ಮುತ್ತೈದೆಯರು ಪೂಜಿಸಿ ಅಕ್ಷತೆಯನ್ನಾಕಿ, ಆರತಿಯೆನ್ನೆತ್ತಿ ತೊಟ್ಟಿಲನ್ನು ತೂಗುತ್ತಾರೆ. ನಂತರ ಗಂಡನ ಮನೆಗೆ ಮಗು ಮತ್ತು ತಾಯಿಯನ್ನು ಕರೆದುಕೊಂಡು ಬರುತ್ತಾರೆ. ಆಗ ಮಗುವಿನ ಸೋದರ ಮಾವ ತೊಟ್ಟಿಲನ್ನು ಹೊತ್ತುಕೊಂಡು ಬರುತ್ತಾರೆ. ಆಗ ಅವರೆಲ್ಲರನ್ನು ಪೂಜಿಸಿ ಗಂಡನ ಮನೆಯವರು ಮಗು ತಾಯಿ ಮತ್ತು ಸೋದರ ಮಾವನನ್ನು ಒಳಗೆ ಬರಮಾಡಿ ಕೊಳ್ಳುತ್ತಾರೆ. ಈ ಸಂದರ್ಭ ಸೋದರ ಮಾವ ಮತ್ತು ಅವರ ತಾಯಿಗೆ ಹೊಸ ಬಟ್ಟೆಯನ್ನು ಗಂಡನ ಮನೆಯವರು ಕೊಡುತ್ತಾರೆ.

ತೊಟ್ಟಿಲ ಕಾರ್ಯದಲ್ಲಿ ಮಗುವಿಗೆ ಮೊದಲು ತಮ್ಮ ಮನೆ ದೇವರ ಹೆಸರನ್ನಿಡುತ್ತಾರೆ. ನಂತರ ಅವರಿಗೆ ಬೇಕಾದ ಹೆಸರನ್ನು ನಂತರ ಬದಲಾಯಿಸಿ ಕೊಳ್ಳುತ್ತಾರೆ.

| **ಕುಲದೇವರ ಹೆಸರು** | **ಮಗುವಿನ ಹೆಸರು** |
|---|---|
| ಮೈಲಾರ ಲಿಂಗ | ನೀಲಪ್ಪ, ಮಲಗಂಗಾ, ಮಹಂತೇಶ್, ಮಲ್ಲಮ. |
| ಹುಲಿಗೆಮ್ಮ | ಹುಲಿಗೆಮ್ಮ, ಹುಲಿರಾಜ್, ಹುಲಿಯಪ್ಪ. |
| ಬಸವೇಶ್ವರ | ಬಸವರಾಜ, ಬಸವಣ್ಣ, ಬಸಪ್ಪ, ಬಸಮ್ಮ. |
| ಮಲೈ ಮಹಾದೇಶ್ವರ | ಮಹೇಶ್ವರಪ್ಪ, ಮಹಾದೇವಪ್ಪ, ಮಹಾಲಿಂಗಪ್ಪ, ಮಹಾನಳ್ಳಿಪ್ಪ, ಮಹಾದೇವಿ. |
| ಬನ್ನಿಮಹಾಂಕಾಳಿ | ಕಾಳಪ್ಪ, ಕಾಳಮ್ಮ, ಬನ್ನೆಪ್ಪ, ಬನ್ನಿಕಾಳಿ. |
| ವೀರಭದ್ರ ಸ್ವಾಮಿ | ವೀರಭದ್ರ, ಭದ್ರಪ್ಪ, ಭದ್ರಮ್ಮ. |
| ತಿಪ್ಪೇಸ್ವಾಮಿ | ತಿಪ್ಪೇಸ್ವಾಮಿ, ತಿಪ್ಪಣ್ಣ, ತಿಪ್ಪಕ್ಕಾ, ತಿಪ್ಪಮ್ಮಾ. |
| ಈರಣ್ಣ | ಈರಣ್ಣ, ಈರಮ್ಮ, ಈರಪ್ಪ. |
| ಯಲ್ಲಮ್ಮ | ಯಲ್ಲಮ್ಮ, ಯಲ್ಲಪ್ಪ, ರೇಣುಕಾ. |
| ದುರುಗಮ್ಮ | ದುರುಗಪ್ಪ, ದುರುಗಮ್ಮ. |
| ಗಾಳೆಮ್ಮ | ಗಾಳೆಪ್ಪ, ಗಾಳೆಮ್ಮ. |
| ನರಸಿಂಹ ಸ್ವಾಮಿ | ನರಸಿಂಹ, ನರಸಿಂಗ, ನರಸಮ್ಮ. |

ಹೀಗೆ ಇತ್ಯಾದಿ ಹೆಸರುಗಳನ್ನಿಡುತ್ತಾರೆ. ಅವರವರ ಮನೆ ದೇವರುಗಳ ಹೆಸರಿಡುವುದು ರೂಢಿ. ಹಾಗೆಯೇ ಅವರ ಸತ್ತ ಹಿರಿಯರ ಹೆಸರುಗಳನ್ನು ಇಟ್ಟು ಕೊಳ್ಳುತ್ತಾರೆ. ಇಂದು ಆಧುನಿಕತೆಗೆ ಒಳಗಾಗಿ ಅವರ ಹೆಸರುಗಳು ವಿದ್ಯಾಶ್ರೀ, ಅಂಬುಜಾ, ರತ್ನ, ಇಂಧುಮತಿ, ರೇಖಾ, ಮಂಜುಳ, ಸೀಮಾ, ದೀಪ, ರೋಹಿತ್, ಯುವರಾಜ್, ಚಂದ್ರಕಾಂತ, ನಾಗರಾಜ್ ಇತ್ಯಾದಿ ರೀತಿಯಲ್ಲಿವೆ.

ನಾಮಕರಣ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಒಂದೇ ದಿನವೇ ಮಾಡುತ್ತಾರೆ. ಮನೆಯ ಒಳಗಡೆ ಪೂರ್ವ ದಿಕ್ಕಿಗೆ ತೊಟ್ಟಿಲು ಕಟ್ಟುತ್ತಾರೆ. ಅದಕ್ಕೆ ಹೂವು, ಬಲೂನು, ರೇಷ್ಮೆಸೀರೆಗಳಲ್ಲಿ ಸಿಂಗರಿಸಿ ಬಗೆ ಬಗೆಯ ಹೂಗಳನ್ನು ಹರಡಿ ಅಲಂಕರಿಸುತ್ತಾರೆ. ಅಂದು ಬಾಣಂತಿಯಿಂದ ಗಂಗೆಪೂಜೆ ಮಾಡಲು ಬಾವಿ ಕೊಳವೆಬಾವಿಗಳಿಗೆ ಹೋಗುತ್ತಾರೆ. ಪೂಜಿಸಿಯಾದ ಮೇಲೆ ಬಾಣಂತಿ ಪತಿಯ ಮೇಲೆ ತುಂಬಿದ ಕೊಡವನ್ನು ಹೊರಿಸಿಕೊಂಡು ಬರುತ್ತಾರೆ. ಬಂದಾಗ ಮನೆಯ ಬಾಗಿಲಲ್ಲಿ ಅವುಗಳನ್ನು ಪೂಜಿಸಿ ಗಂಗೆ ಮಾತೆಯನ್ನು ಒಳಗೆ ಕರೆದುಕೊಳ್ಳುತ್ತಾರೆ. ನಂತರ ತಂದಿರುವ ನೀರಿನ ಕೊಡವನ್ನು ನಾಮಕರಣಕ್ಕೆ ಅಲಂಕರಿಸಿದ ತೊಟ್ಟಿಲು ಕೆಳಗಡೆ ಇಡುತ್ತಾರೆ. ಹುಟ್ಟಿದ ಮಗುವಿಗೆ ಅಜ್ಜಾ ಅಜ್ಜಿ ಹೊಸಬಟ್ಟೆ ತೊಡಿಸುತ್ತಾರೆ. ತೊಟ್ಟಿಲ ಪಕ್ಕದಲ್ಲಿ ಬಾಣಂತಿಯನ್ನು ಕೂಡಿಸುತ್ತಾರೆ. ಮುತ್ತೈದೆಯರು ಕುಲದೇವರನ್ನು ಹಾಗೂ ತಂದಿರುವ ಗಂಗೆಯ ನೀರಿಗೆ ಪೂಜೆಮಾಡಿ ತೊಟ್ಟಿಲಿಗೆ ಪೂಜೆ ಮಾಡುತ್ತಾರೆ.

ಹುಟ್ಟಿದ ಮಗುವಿನ ಸೋದರ ಮಾವ ಮತ್ತು ಸೋದರತ್ತೆಯರು, ಹೆಸರಿಡುವ ಪದ್ಧತಿ ಇದೆ. ಈ ಪದ್ಧತಿಯಲ್ಲಿ ಆಪಕ್ಕ ಈಪಕ್ಕ ಮುಖಾಮುಖಿಯಾಗಿ ನಿಂತು ಮಗುವನ್ನು ಮುತ್ತೈದೆಯರು ತೊಟ್ಟಿಲ ಮೇಲಿಂದ ಆ ಕಡೆಯಿಂದ ಈ ಕಡೆಗೆ ಮನೆದೇವರ ಹೆಸರುಗಳನ್ನು ಹೇಳಿ ಕೊಡುವುದುಂಟು. ಹೀಗೆ ಐದು ಬಾರಿ ಮಾಡಿ ಕೊನೆಯಲ್ಲಿ ಮಗುವನ್ನು ತೊಟ್ಟಿಲಿನಲ್ಲಿ ಹಾಕುತ್ತಾರೆ. ತರುವಾಯ ಹೆಸರಿಡುವ ಕಾರ್ಯಕ್ರಮ ನಡೆಯುತ್ತದೆ.

ಇದಾದ ಮೂರು ಅಥವಾ ನಾಲ್ಕು ದಿನದಲ್ಲಿ ಬಾಣಂತಿ ಮತ್ತು ಮಗು ಸೋದರ ಮಾವನೊಂದಿಗೆ, ಗಂಡನ ಮನೆಗೆ ಬರುತ್ತದೆ. ಸೋದರ ಮಾವನು ಮಗುವಿಗೆ ಹೊಸತೊಟ್ಟಿಲು, ಹೊಸಬಟ್ಟೆ, ಬೆಳ್ಳಿಉಡುದಾರ, ಕಾಲ್ಗಡುಗ, ಗೆಜ್ಜೆ, ಕೈ ಚೈನುಗಳು ಹಾಗೂ ಬಂಗಾರದ ಕಿವಿಯೋಲೆ, ಅಡಿಕೆ ಸಾಮಾನುಗಳು, ತೆಗೆದುಕೊಂಡು ಅಡಕೊಂದಿಗೆ ಬೆಳ್ಳಿಯ ಲಿಂಗದ ಕಾಯಿಯನ್ನು ತೆಗೆದುಕೊಂಡು ಅವರ ಗಂಡನ ಮನೆಗೆ ಬಿಟ್ಟು ಬರುವ ಸಂಪ್ರದಾಯವನ್ನು ಕಾಣಬಹುದು.

ನಾಮಕರಣದ ಕಾರ್ಯದಲ್ಲಿ ಸಜ್ಜನ ಗಾಣಿಗರಲ್ಲಿ ಬಂಧು-ಬಾಂದವರು ಮಗುವಿಗೆ ಉಡುಗೊರೆಯೊಂದಿಗೆ ಶತಾಯುಷಿಯಾಗಿ ಬಾಳೆಂದು ಹಾರೈಸುತ್ತಾರೆ. ಕಡೆಗೆ ಸಿಹಿ ಊಟವನ್ನು ಊಟಮಾಡಿ ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಾರೆ.

**ಚೌಲ ಶಾಸ್ತ್ರಾ ಅಥವಾ ಜವಳದ ಶಾಸ್ತ್ರ**

ಗಂಡನ ಮನೆಯಲ್ಲಿ ಈ ಕಾರ್ಯವು ನೆರವೇರುತ್ತದೆ, ಗಂಡನ ಮನೆಯವರು ಹೆಣ್ಣಿನ ತವರು ಮನೆಯವರಿಗೆ ಜವಳ ಇಳಿಸುವ ಕಾರ್ಯಕ್ರಮ ಇದೆ ಎಂದು ಹೇಳಿ ಕಳಿಸುತ್ತಾರೆ. ಪ್ರಸ್ತುತವಾಗಿ ಅನೇಕ

ಜವಳ ಕಾರ್ಯಕ್ರಮವು ಅವರ ಮನೆದೇವರ ಸನ್ನಿದಾನದಲ್ಲಿ ನಡೆಯುವುದು. ಒಂದು ವೇಳೆ ಮಗುವನ್ನು ಮನೆದೇವರ ಸನ್ನಿದಿಗೆ ಹೋಗಲಾಗದವರು ಮನೆದೇವರಿಗೆ ಪೂಜೆಮಾಡಿಸಿ ಅಲ್ಲಿಂದ ತೀರ್ಥ ತಂದು ಮಗುವಿನ ತಲೆಯ ಮೇಲೆ ಚಿಮಕಿಸಿ ಮಗುವಿನ ತಲೆ ಕೂದಲು ಕತ್ತರಿಸುತ್ತಾರೆ. ಈ ಸಂದರ್ಭದಲ್ಲಿ ಆ ಮನೆತನವು ನಡೆದು ಕೊಳ್ಳುವ ಜಂಗಮರನ್ನು ಕರೆಸಿ ಜಂಗಮರಿಂದ ಮಗುವಿನ ಪೂಜೆಮಾಡಿಸುತ್ತಾರೆ. ಜೊತೆಗೆ ಬಂದ ಜಂಗಮನು ಮಗುವಿನ ತಲೆಯ ಮೇಲೆ ತನ್ನ ಪಾದವನ್ನಿಟ್ಟು ಮಂತ್ರ ಪಠಿಸುತ್ತಾರೆ. ನಂತರ ಮಗುವಿನ ಸೋದರಮಾವನು, ವಿಳೇದ ಎಲೆಯನ್ನು ಕತ್ತರಿಮಾಡಿ ಮಗುವಿನ ತಲೆಯ ಮೇಲೆ ಅದನ್ನಾಡಿಸಿ, ಮಗುವಿಗೆ ಪೂಜಿಸುತ್ತಾರೆ. ನಂತರ ಕ್ಷೌರಿಕನನ್ನು ಕರೆಸಿ ಒಂದು ಕಡೆ ದೀಪ ಅಥವಾ ಮತ್ತೊಂದು ಕಡೆ ಮಂಗಳಾರತಿ ತಟ್ಟೆ ಇಟ್ಟಿರುತ್ತಾರೆ. ಕರಿಯ ಕಂಬಳಿ ಮೇಲೆ ತಾಯಿ ಮಗುವನ್ನು ಕೂರಿಸಿರುತ್ತಾರೆ. ಇದರ ಜೊತೆಗೆ ಅಕ್ಕಿ ಚೆಲ್ಲಿ, ಬೇಳೆ, ಗೋಧಿಹಿಟ್ಟು, ಎಲೆ ಅಡಿಕೆ, ದಕ್ಷಿಣೆಯ ರೂಪದಲ್ಲಿ ಹಣವನ್ನಿರಿಸಿ ನೀಡುತ್ತಾರೆ. ಮಗುವಿನ ಕೂದಲನ್ನು ತೆಗೆದ ಹಡಪದವರಿಗೆ ಅವನು ಮಾಡಿದ ಕಾರ್ಯಕ್ಕಾಗಿ ಈ ಮೇಲಿನ ವಸ್ತುಗಳೊಂದಿಗೆ, ಹೊಸ ಬಟ್ಟೆಯನ್ನು ಕೊಡುತ್ತಾರೆ. ಮಗುವಿನ ಕೂದಲು ತೆಗೆದ ಸೋದರ ಮಾವನಿಗೆ ಮತ್ತು ಸೋದರತ್ತೆಗೆ ಗಂಡನ ಮನೆಯವರು ಹೊಸ ಬಟ್ಟೆಯನ್ನು ಅವರವರ ಸ್ಥಿತಿಗೆ ಅನುಗುಣವಾಗಿ ಬಂಗಾರದ ಉಡುಗೊರೆಯನ್ನು ನೀಡುತ್ತಾರೆ. ಈ ಕಾರ್ಯಕ್ಕೆ ಬಂದಂತ ಕುಲಬಾಂಧವರು ಮಗುವಿಗೆ ವಸ್ತುವಿನ ಮತ್ತು ಹಣದ ರೂಪದ ಉಡುಗೊರೆಯನ್ನು ಕೊಡುತ್ತಾರೆ.

ಹಿಂದಿನ ದಿನ ಮಾನಗಳಲ್ಲಿ ಅವಿಭಕ್ತ ಕುಟುಂಬಗಳಾದ್ದುದರಿಂದ ಸಾಮೂಹಿಕ ಜವಳ ಕಾರ್ಯ ನಡೆಯುತ್ತಿತ್ತು. ಆದರೆ ಈಗ ವಿಭಕ್ತ ಕುಟುಂಭಗಳಲ್ಲಿ ಒಬ್ಬರಿಗೆ ಪ್ರತ್ಯೇಕ ದಿನ ನೋಡಿ ಒಂದು ವರ್ಷದೊಳಗಾಗಿ, ಇಲ್ಲವೆ ಮೂರನೇ ವರ್ಷದಲ್ಲಿ ಈ ಜವಳ ಕಾರ್ಯ ಮಾಡುತ್ತಾರೆ. ಈ ಕಾರ್ಯಕ್ಕೆ ಬಂದ ಕುಲಬಾಂಧವರಿಗೆ ಸಿಹಿ ಊಟವನ್ನು ಹಾಕಿಸುತ್ತಾರೆ.

ಜವಳ ಕಾರ್ಯದ ನಂತರ ಮಗುವಿಗೆ ಪುನಃ ಸ್ನಾನ ಮಾಡಿಸಿ ತವರು ಮನೆಯವರು ತಂದ ಹೊಸ ಬಟ್ಟೆಯನ್ನು ಹಾಕುತ್ತಾರೆ. ಜೊತೆಗೆ ತಾಯಿಗೆ ತವರಿನವರು ಈ ಸಂದರ್ಭದಲ್ಲಿ ಒಡಲಕ್ಕಿಯೊಂದಿಗೆ ಹೊಸ ಸೀರೆಯನ್ನು ತಂದೆಗೆ ಹೊಸ ಬಟ್ಟೆಯನ್ನು ಕೊಡುತ್ತಾರೆ. ಮುದ್ದೆ ಕಂಬಾರರಲ್ಲಿ ಜವಳ ಕಾರ್ಯದಲ್ಲಿ ಮಾಂಸದೂಟವನ್ನು ದೇವರಿಗೆ ನೈವೇದ್ಯಾ ಮಾಡಿ ತಮ್ಮ ಕುಲ ಬಂಧುಗಳು ಊಟ ಮಾಡುವುದುಂಟು. ಮುದ್ದೆ ಕುಂಬಾರರಲ್ಲಿಯೇ ಕೆಲವರಲ್ಲಿ ಈ ಕಾರ್ಯ ಮಧ್ಯರಾತ್ರಿಯಲ್ಲಿ ನೆರವೇರಿಸುತ್ತಾರೆ. (ಆರ್. ಬಿ. ಕುಮಾರ್, ೨೦೦೦, ೯೦. ೯೧) ಸಜ್ಜನ ಗಾಣಿಗರಲ್ಲಿ ಸಿಹಿ ಊಟ ಮತ್ತು ಸಸ್ಯಹಾರಿ ಊಟವನ್ನು ಮಾಡಿಸಿ ದೇವರಿಗೆ ನೈವೇದ್ಯ ಮಾಡಿ ನಂತರ ಬಂದಂತಹ ಕುಲಬಾಂಧವರಿಗೆ ಮಾಡಿಸಿದ ಊಟವನ್ನು ಬಡುಸುತ್ತಿದ್ದರು.

**ಮಕ್ಕಳಿಗೆ ದೃಷ್ಠಿ ತೆಗೆಯುವ ಆಚರಣೆಗಳು/(ನೆದರು) ಕಣ್ ಆಸರ**

ಮಕ್ಕಳು ಹೆಚ್ಚಾಗಿ ಅಳುತ್ತಿದ್ದರೆ ಮಕ್ಕಳಿಗೆ ಕಣ್ಣ್ ಆಸರ ಅಗಿದೆ ದೃಷ್ಠಿ ತೆಗೆಯಬೇಕು ಎನ್ನುತ್ತಾರೆ. ಆಸರದ ಆಚರಣೆಗಳು ಕೆಳಗಿನಂತಿವೆ.

*** ಸೆರಗು ಇಳೇ ತೆಗೆಯುವುದು**

ಮಗುವಿಗೆ ಅತ್ತೆಯರಾದವರು ತನ್ನ ಸೀರೆ ಸೆರಗಿನಿಂದ ಮಗುವಿಗೆ ಇಳೇ ತೆಗೆಯುತ್ತಾರೆ. ಇದರಿಂದ ಮಗು ಅಳು ನಿಲ್ಲಿಸುತ್ತದೆಂದು ಹೇಳುತ್ತಾರೆ.

*** ತುಂಬಿದ ಚಂಬು ನೀರು ಇಳೇ ತೆಗೆಯುವುದು**

ಮಗುವಿಗೆ ತುಂಬಿದ ಚಂಬು ನೀರನ್ನು ಇಳೇದೆಗೆದು ನೀರನ್ನು ರಸ್ತೆಗೆ ಚಲ್ಲುತ್ತಾರೆ.

*** ಅನ್ನ ಇಳೇ ತೆಗೆಯುವುದು**

ಒಂದು ಕರಿಯ ಹೆಂಚಿನಲ್ಲಿ ಅನ್ನವನ್ನು ಮೂರು ಮುಟಿಗೆ ಮಾಡಿ ಅದಕ್ಕೆ ಕುಂಕುಮ ಅರಿಶಿನ ಪುಡಿಯನ್ನು ನೀರಿನಲ್ಲಿ ಕಲೆಸಿ ಅನ್ನಕ್ಕೆ ಅದನ್ನು ಹಚ್ಚುತ್ತಾರೆ. ನಂತರ ದೀಪದಲ್ಲಿರುವ ಬತ್ತಿಯನ್ನು ಹೊರತೆಗೆದು ಅನ್ನದ ಮುಟಿಕೆಯ ಮೇಲೆ ಇಟ್ಟು, ಎಣ್ಣೆಯೊಂದಿಗಿದ್ದ ಬತ್ತಿಯನ್ನು ಬೆಂಕಿಕಡ್ಡಿಯಿಂದ ಹಚ್ಚಿ ಮಗು ಮತ್ತು ತಾಯಿಗೆ ಬೆಳಗಿ ಮೂರು ದಾರಿ ಕೂಡುವ ಹತ್ತಿರ ಇಟ್ಟು ಬರುವುದರಿಂದ ಮಗುವು ಅಳು ನಿಲ್ಲಿಸುತ್ತದೆ ಎಂದು ಹೇಳಿದ್ದಾರೆ.

*** ಚಪ್ಪಲಿ ಅಥವಾ ಪೊರಕೆಯಿಂದ ಇಳೇ ತೆಗೆಯುವುದು**

ಅಳುತ್ತಿರುವ ಮಗುವಿಗೆ ಅಥವಾ ಮಗು ಕಿರಿಕಿರಿ ಮಾಡುತ್ತಿದ್ದರೆ ಆ ಮಗುವಿಗೆ ಚಪ್ಪಲಿ ಅಥವಾ ಪೊರಕೆಯಿಂದ ಇಳೆದೆಗೆಯುತ್ತಾರೆ. ಇದರಿಂದಲೂ ಮಗು ಅಳುವುದನ್ನು ನಿಲ್ಲಿಸುತ್ತದೆ ಎನ್ನುತ್ತಾರೆ.

*** ಎಲೆ ಸುಡುವುದು**

ಮಗುವಿಗೆ ಸಂಜೆಯ ಹೊತ್ತಿನಲ್ಲಿ ವೀಳೆದೆಲೆಗೆ ಎಣ್ಣೆ ಹಚ್ಚಿ ಅದನ್ನು ಹಚ್ಚಿದ ಎಣ್ಣೆ ದೀಪದಿಂದ ವೀಳೆದೆಲೆಯನ್ನು ಸುಡುತ್ತಾರೆ. ಸುಡುವಾಗ ವೀಳೆದೆಲೆಯು ಚಟ್ ಚಟ್ ಎಂದು ಶಬ್ದ ಮಾಡುತ್ತದೆ. ಈ ರೀತಿ ಅಂದರೆ ಮಗುವಿಗೆ ಹೆಚ್ಚು ಕಣ್ಣು ದೃಷ್ಠಿಯಾಗಿದೆ ಎನ್ನುತ್ತಾರೆ. ಸುಟ್ಟ ಎಲೆಯ ಭಾಗದಿಂದ ಕರಕಲನ್ನು ತೆಗೆದು ಮಗುವಿಗೆ ಹಣೆಗೆ ಅಥವಾ ಕಾಲಿಗೆ ಹಚ್ಚುತ್ತಾರೆ.

*** ಮಗುವಿಗೆ ಆರೋಗ್ಯ ಸರಿ ಇಲ್ಲದೆ ಅಳುತ್ತಿದ್ದರೆ ಚೀಟಿ ಕಟ್ಟಿಸುವ ವಿಧಾನ**

ಗ್ರಹ ಚೀಟಿಯನ್ನು ತಾಮ್ರದ ಪಟದ ಮೇಲೆ ಬರೆದು ಆ ಚೀಟಿಯನ್ನು ಮಗುವಿನ ಕೊರಳಿಗೆ ಅಥವಾ ಕೈಗೆ ಕಟ್ಟುತ್ತಾರೆ.

*** ಮಸೀದಿಯ ಮೌಲ್ವಿ ಕಡೆಯಿಂದ ಚೀಟಿ ಕಟ್ಟಿಸಿಕೊಳ್ಳುವುದು**

ಸಜ್ಜನ ಗಾಣಿಗರು ಹಿಂದೂಗಳಾಗಿದ್ದರೂ ಮಗುವು ಕಿರಿಕಿರಿ ಮಾಡುತ್ತಿದ್ದರೆ ಮಗುವನ್ನು ಮಸೀದಿಗೆ ಕರೆದುಕೊಂಡು ಹೋಗಿ ಎಲೆ ಅಡಿಕೆ ಹಾಗೂ ದಕ್ಷಿಣೆಯನ್ನು ಕೊಟ್ಟು ಮೌಲ್ವಿಯಿಂದ ಚೀಟಿಯನ್ನು ಮಗುವಿನ ಕೊರಳಿಗೆ ಕಟ್ಟಿಸಿಕೊಂಡು ಬರುತ್ತಾರೆ. ಮತ್ತೆ ಕೆಲವೊಂದು ಸಂದರ್ಭಗಳಲ್ಲಿ ಮಸೀದಿಗೆ ಹರಕೆ ಮಾಡಿಕೊಳ್ಳುತ್ತಾರೆ.

ಅದೆಂದರೆ ಮಗುವಿಗೆ ವಾಸಿಯಾದರೆ ಮಸೀದಿಗೆ ಬಂದು ಮಗುವಿನ ತೂಕ ಸಕ್ಕರೆ ಕೊಡುತ್ತೇವೆ ಎಂದು ಫಲದೊರೆತಲ್ಲಿ ಮಗುವಿನ ತೂಕ ಮಸೀದಿಗೆ ಸಕ್ಕರೆಯನ್ನು ಕೊಟ್ಟು ಬರುತ್ತಾರೆ ಎಂದು ಹೇಳಿದರು.

*** ಮಂತ್ರವಾದಿಯ ಮೂಲಕ ಚೀಟಿ ಕಟ್ಟಿಸಿಕೊಳ್ಳುವುದು**

ಸಜ್ಜನ ಗಾಣಿಗರಲ್ಲಿ ಆರೋಗ್ಯ ಸರಿ ಇಲ್ಲದಿದ್ದರೆ ದೈವೀ ಭಕ್ತಿಯ ಜೊತೆಗೆ ಮಂತ್ರವಾದಿಯನ್ನು ನಂಬಿದ ಜನ ನಮ್ಮಲ್ಲಿದ್ದಾರೆ. ಆರೋಗ್ಯ ಸರಿಇಲ್ಲದವರಿಗೆ ಮಂತ್ರವಾದಿಗೆ ದಕ್ಷಿಣೆ ಎಲೆ ಅಡಿಕೆ ಕೊಡುವುದರ ಮೂಲಕ ಅವನಿಂದ ಚೀಟಿ ಕಟ್ಟಿಸಿಕೊಳ್ಳುತ್ತಾರೆ ಇದರಿಂದ ಆರೋಗ್ಯವು ಸರಿಯಾಗುತ್ತದೆ ಎಂದು ಇವರು ನಂಬಿದ್ದಾರೆ.

**ಪ್ರೌಢ ಸಂಸ್ಕಾರ/ಋತುಮತಿ**

ಬಾಲೆ ಕನ್ಯೆಯಾಗುವ ಪ್ರಕ್ರಿಯೆಯನ್ನು ಬುಡಕಟ್ಟು ಸಮುದಾಯಗಳು ಅತೀ ಸಂಭ್ರಮದಿಂದ ಎದುರುಗೊಳ್ಳುತ್ತವೆ. ಒಂದೊಂದು ಬುಡಕಟ್ಟು ಸಮುದಾಯಗಳಲ್ಲೂ ವಿಭಿನ್ನ ರೀತಿಯಲ್ಲಿ ಈ ಪ್ರೌಢ ಸಂಸ್ಕಾರಗಳನ್ನು ಆಚರಿಸುತ್ತಾರೆ. ಇವರಲ್ಲಿ ಬಾಲೆ ಕನ್ಯೆಯಾಗುವ ಕ್ರಿಯೆ ಮನುಷ್ಯ ಬದುಕಿನ ಮಹತ್ವದ ಕ್ರಿಯೆ.

ಸಜ್ಜನ ಗಾಣಿಗ ಸಮುದಾಯದಲ್ಲಿಯೂ ಸ್ತ್ರೀಯು ತಾರುಣ್ಯದ ಹೊಸ್ತಿಲು ಮುಟ್ಟಿದಳು ಎಂಬುದಕ್ಕೆ ಋತುಮತಿ ಎನ್ನುವರು. ಈ ಋತುಮತಿ ಎನ್ನುವುದಕ್ಕೆ ಪ್ರದೇಶಗಳಿಗನುಗುಣವಾಗಿ ಶಬ್ದಗಳನ್ನು ಬಳಸಿಕೊಳ್ಳುತ್ತಾರೆ. ಮೈನೆರೆ, ದೊಡ್ಡವಳಾದಳು, ಹರೆಯಕ್ಕೆ ಬಂದಳು, ಮದುವೆಗೆ ಬಂದಳು ಎಂದು ಮುಂತಾಗಿ ಹೇಳುವರು. ಕರ್ನಾಟಕದ ಹೆಚ್ಚು ಭಾಗದಲ್ಲಿ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ದೊಡ್ಡವಳಾಗಿದ್ದಾಳೆ ಎಂಬ ಪದವನ್ನು ಬಳಸುರು.

ಸಜ್ಜನ ಗಾಣಿಗರಲ್ಲಿ ಋತುಮತಿಯಾದ ಮನೆಯು ಸೂತಕವೆಂದು ಭಾವಿಸಿ ವಾರ ನಕ್ಷತ್ರ ದಿನ ಇವೆಲ್ಲವನ್ನೂ ಜ್ಯೋತಿಷ್ಯರಲ್ಲಿ ಕೇಳಿ ಬರುತ್ತಾರೆ. ಮೈನೆರೆದ ಕನ್ಯೆ ಮನೆಯ ಒಂದು ಬದಿಯಲ್ಲಿಯೇ ಮತ್ತು ಒಂದು ಕೋಣೆಯಲ್ಲಿಯೇ, ಕೂಡ್ರ ಬೇಕು. ದೇವರ ಮನೆಗೆ ಹೋಗುವಂತಿಲ್ಲ. ಯಾಕೆಂದರೆ ದೇವರ ಕೋಣೆಯು ಮೈಲಿಗೆ, ಆಗುತ್ತದೆ ಎಂಬ ಭಾವನೆಯಿಂದ ಮನೆಯಲ್ಲಿ ತಿರುಗಾಡಲು ಬಿಡುವುದಿಲ್ಲ. ಸೂತಕದ ಮನೆಯಲ್ಲಿ ದೇವರ ಪೂಜೆ ಮಾಡುವಂತಿಲ್ಲ. ದೇವಾಲಯಗಳಿಗೆ ಸೂತಕವಿರುವವರೆಗೂ ಪ್ರವೇಶಿಸುವಂತಿಲ್ಲ.

ಸಜ್ಜನ ಗಾಣಿಗರಲ್ಲಿ ಪ್ರತಿದಿನ ಋತುಮತಿಯಾದವಳಿಗೆ ಬೇವಿನ ತಪ್ಪಲ ರಸ, ಅರಿಶಿನ ಮತ್ತು ಎಣ್ಣೆಯನ್ನು ಹಚ್ಚಿ ಸ್ನಾನಮಾಡಿಸಿ ಮಡಿಯಾದ ಬಟ್ಟೆ ತೊಡಿಸುವರು. ಕನ್ಯೆಯ ಸೋದರತ್ತೆಯು ಮೊದಲು ನೀರನ್ನು ಹಾಕಬೇಕು. ನಂತರ ಐದು ಜನ ಮುತ್ತೈದೆಯರು ಸ್ನಾನದ ಶಾಸ್ತ್ರವನ್ನು ಮಾಡುವರು. ಊಟಕ್ಕೆ ಕೊಬ್ಬರಿ, ಬೆಲ್ಲ, ಸಜ್ಜಕ, ತುಪ್ಪ ಮುಂತಾದ ಪದಾರ್ಥಗಳನ್ನು ಅವಳಿಗೆ ಕೊಡುವರು. ಕಡುಬು ತಯಾರಿಸಿ ತಂದು ಆ ಮನೆಯವರಿಗೆ ಊಟ ಮಾಡುವ ಪದ್ಧತಿಯಿದೆ.

ಸಂಜೆಯ ವೇಳೆಗೆ ಅವಳನ್ನು ಅಲಂಕಾರ ಮಾಡಿ ಮಂಟಪವನ್ನು ಕಟ್ಟಿ ಅದರೊಳಗೆ ಕೂಡ್ರಿಸಿ, ಬಂದು ಒಳಗದವರು ಹಾಗೂ ಓಣಿಯ ಹಿರಿಯ ಹೆಂಗಸರನ್ನು ಕರೆದು ಸೋಬಾನೆ ಪದಗಳನ್ನು ಹಾಡಿಸುವರು. ಆಗ ಮೈ ನೆರೆದ ಹೆಣ್ಣು ಆ ಪದಗಳಲ್ಲಿಯ ಒಳ್ಳೆಯ ನೀತಿ, ರೀತಿ ನಡವಳಿಕೆಗಳನ್ನು ತಮ್ಮ ಜೀವನ ಪರ್ಯಂತ ಪಾಲಿಸಲು ನೆನಪಿನಲ್ಲಿಟ್ಟು ಕೊಳ್ಳುವಳು, ಕೊನೆಗೆ ಅವಳಿಗೆ ಆರತಿಯನ್ನು ಬೆಳಗಿ ತಮ್ಮ ತಮ್ಮ ಮನೆಗೆ ಹೋಗುವರು.

ಹೀಗೆ ಋತುಮತಿಯಾದವಳನ್ನು ೫. ೯. ೧೧. ದಿನಗಳವರೆಗೂ ಕೂಡ್ರಿಸುವರು. ಕೊನೆಯ ದಿನದಂದು ಬಂದು ಬಳಗದವರನ್ನು ಕರೆಯಿಸಿ ಒಟ್ಟಾರೆ ಈ ಕಾರ್ಯದಿಂದ ನಮ್ಮ ಮನೆಯಲ್ಲಿ ಯೋಗ್ಯವಾದ ಕನ್ಯೆ ಇದ್ದಾಳೆ ಎಂಬುದನ್ನು ಸಮುದಾಯಕ್ಕೆ ತಿಳಿಸುವುದಾಗಿದೆ. ಹೆಣ್ಣನ್ನು ಯಾವುದೇ ದೋಷವಿಲ್ಲದೆ ಪಡೆಯಲು ದೈಹಿಕವಾಗಿ ಯೋಗ್ಯಳನ್ನಾಗಿ ಮಾಡುವುದಾಗಿದೆ.

ಸಜ್ಜನ ಗಾಣಿಗರಲ್ಲಿ ಋತುಮತಿಯಾದವಳಿಗೆ ಕರಿ ಎಳ್ಳನ್ನು ಕುಟ್ಟಿ ತೀಡುತ್ತಾರೆ. ಋತುಮತಿಯಾದವಳನ್ನು ಮನೆಯ ಹೊರಗಡೆ ಕಳುಹಿಸುವುದಿಲ್ಲ. ಹಾಗೂ ಪೂಜೆ ಮಾಡುವಂತಿಲ್ಲ. ದೇವಸ್ಥಾನಕ್ಕೆ ಹೋಗುವಂತಿಲ್ಲ. ಸೂತಕವನ್ನು ಕಳೆದುಕೊಳ್ಳಲು ಮನೆ ಬಳಿಯುತ್ತಾರೆ. ಗೋಮಂತ್ರ ಮನೆಗೆಲ್ಲಾ ಚಿಮುಕಿಸುತ್ತಾರೆ ಋತುಮತಿ ಯಾದ ಸಂದರ್ಭದಲ್ಲಿ ಹಾಕಿಕೊಂಡ ಬಟ್ಟೆಗಳನ್ನು ಮಾಡಿವಾಳನಿಗೆ ಕೊಡುತ್ತಾರೆ. ಹೀಗೆ ಅರಿಶಿಣದ ನೀರಿನಿಂದ ೧೬ ದಿವಸಗಳವರೆಗೆ ಆರತಿ ಮಾಡಿ ತಾಯಿಯ ತವರು ಮನೆಯವರು, ಬಂದು ಬಳಗದವರು, ಉಡುಗೊರೆಯನ್ನು ನೀಡುತ್ತಾರೆ.

**ಗಂಗೆಯ ಪೂಜೆ:** ಋತುಮತಿಯಾದ ೧೬ ನೇ ದಿವಸದಲ್ಲಿ ಆರತಿ ಮಾಡಿ ಆಕೆಯ ಕೈಯಿಂದ ಗಂಗೆಯ ಪೂಡೆ ಮಾಡಿಸುತ್ತಾರೆ. ಗಂಗೆ ಪೂಜೆ ಮಾಡಿಸಲಿಕ್ಕೆ ನಲ್ಲಿಗೆ ಅಥವಾ ಬೋರ್‌ವೆಲ್‌ಗೆ ಅಥವಾ ಬಾವಿಗೆ ಹೋಗಿ ಗಂಗಾ ಪೂಜೆಯನ್ನು ಮಾಡಿ, ಆ ಹುಡುಗಿಯ ತಲೆಯ ಮೇಲೆ ತುಂಬಿದ ಕೊಡವನ್ನು ಹೊರಿಸಿಕೊಂಡು ಬರುತ್ತಾರೆ. ನಂತರ ಮನೆಯಲ್ಲಿ ಆಕೆಗೆ ಆರತಿ ಮಾಡುತ್ತಾರೆ. ಜಂಗಮರನ್ನು ಅಂದು ಕರೆಸಿ ಪೂಜೆ ಮಾಡಿಕೊಂಡು ಊದು ಬತ್ತಿಯಿಂದ ಸ್ವಲ್ಪ ನಾಲಿಗೆಯನ್ನು ಸುಡುತ್ತಾರೆ. ಈ ರೀತಿ ಋತುಮತಿಯು ಸಹಜ ಕ್ರಿಯೆಯಾದರೂ, ಈ ಕಾರ್ಯವು ಸಮುದಾಯದ ಜನರಲ್ಲಿ ಸಂತೋಷವನ್ನು ತರುತ್ತದೆ. ಸ್ತ್ರೀಯರು ೧೨, ೧೩ ವರ್ಷದಲ್ಲಿ ಋತುಮತಿಯಾಗುವುದು ಸಹಜ. ಈ ಸಂದರ್ಭದಲ್ಲಿ ಹುಡುಗಿಯರ ದೇಹದಲ್ಲಿ ಬೆಳವಣಿಗೆ ಹೆಚ್ಚುತ್ತದೆ.

**ವಿವಾಹ**

ವಿವಾಹ ಮತ್ತು ಕುಟುಂಬಗಳು ಪರಸ್ಪರ ಪೂರಕವಾದ ಹಾಗೂ ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆಗಳಾಗಿವೆ. ಮನೋಜೈವಿಕ ಆಧಾರಗಳ ಮೇಲೆ ರಚಿತವಾಗಿರುವ ಈ ಸಂಸ್ಥೆಗಳು ಸಾಮಾಜಿಕ ವ್ಯವಸ್ಥೆಯ ಕೇಂದ್ರ ಬಿಂದುಗಳಿದ್ದಂತೆ, ಸಾಮಾಜಿಕ ವ್ಯವಸ್ಥೆಯ ಮೂಲ ನೆಲೆಗಳಿದ್ದಂತೆ. ವಿವಾಹದ ನಂತರದ ಹೆಜ್ಜೆ

ಎಂದರೆ ಕುಟುಂಬದ ಸ್ಥಾಪನೆ. ಗಿಲಿನ್ ಮತ್ತು ಗಿಲಿನ್ ಹೇಳುವಂತೆ ''ಸಂತತಿಯನ್ನು ಹೊಂದತಕ್ಕ ಕುಟುಂಬಗಳ ಸ್ಥಾಪನೆಗೆ ಸಮಾಜವು ಮನ್ನಣೆಯನ್ನು ಕೊಟ್ಟಂತಹ ಮಾರ್ಗವೆಂದರೆ ವಿವಾಹವೊಂದೇ''. ವಿವಾಹ ಮತ್ತು ಕುಟುಂಬಗಳು ಪರಸ್ಪರ ಹಾಸು ಹೊಕ್ಕಾಗಿವೆ. ವಿವಾಹ ಮತ್ತು ಕುಟುಂಬಗಳಿಲ್ಲದೆ ಸಮಾಜ ಎಲ್ಲಿಯೂ ಕಂಡು ಬರುವುದಿಲ್ಲ. ಈ ಮಾತು ಆದಿವಾಸಿ ಸಮಾಜಗಳ ಬಗೆಗೆ ಬಹುತೇಕ ನಿಜವೆನಿಸುವುದು, ಹಾಗೂ ಗಾಣಿಗ ಸಮುದಾಯಕ್ಕೂ ಇದು ನಿಜವೆನ್ನಿಸುತ್ತದೆ.

ವಿವಾಹ ಮತ್ತು ಕುಟುಂಬಗಳು ಪಾಶ್ಚಿಮಾತ್ಯ, ಪ್ರಭಾವಕ್ಕೊಳಗಾಗಿ, ನಗರೀಕರಣ, ಕೈಗಾರೀಕರಣ, ಶಿಕ್ಷಣ, ವಿವಾಹದ ಮೇಲಿನ ಶಾಸನಗಳ ಪ್ರಭಾವ, ವೈವಾಹಿಕ ಬದಲಾವಣೆಗಳು, ಆಧುನಿಕ ವಿಜ್ಞಾನ, ವಿಚಾರವಾದ, ವ್ಯಕ್ತಿವಾದ, ಸಮಾನತೆ, ಸ್ವಾತಂತ್ರ್ಯ ಜೀವನ ಕ್ರಮ ಪ್ರಜಾಪ್ರಭುತ್ವ, ಸ್ತ್ರೀ ಸ್ವಾತಂತ್ರ್ಯ ಮುಂತಾದವು ವಿವಾಹ ಮತ್ತು ಕುಟುಂಬಗಳಲ್ಲಿ ಗಣನೀಯವಾದ ಬದಲಾವಣೆಯನ್ನು ತಂದಿವೆ ಎನ್ನಬಹುದು.

ವಿವಾಹ ಮತ್ತು ಕುಟುಂಬಗಳು ಇಂದು ಹಳ್ಳಿ ಮತ್ತು ಪಟ್ಟಣಗಳೆಂಬ ತಾರತಮ್ಯತೆ ಮರೆತು ಎಲ್ಲಾ ಪ್ರದೇಶಗಳಲ್ಲಿಯೂ ಗೋಚರಿಸುತ್ತವೆ. ವಿವಾಹದ ಉದ್ದೇಶವು ಲೈಂಗಿಕ ತೃಪ್ತಿ, ಪ್ರಜೋತ್ಪಾದನೆ, ಮಕ್ಕಳ ಪಾಲನೆ ಪೋಷಣೆ, ಧರ್ಮಾಚರಣೆ ಇವುಗಳನ್ನು ಒಳಗೊಂಡಿದೆ. ಈ ಆಚರಣೆಗಳನ್ನು ಹಿಂದೂ ವಿವಾಹದಲ್ಲಿ ಕಾಣುತ್ತೇವೆ. ಹಾಗೆಯೇ ಗಾಣಿಗ ಜನಾಂಗದಲ್ಲಿ ಗೋಚರಿಸುವಂತಹವುಗಳಾಗಿವೆ.

ವಿವಾಹ ಮತ್ತು ಮದುವೆ ಎಂಬುದು ಮಾನವ ಜೀವನದ ಪ್ರಮುಖ ಘಟ್ಟವಾಗಿದೆ. ಸಮಾಜದಲ್ಲಿಯ ಎರಡು ಕುಟುಂಬಗಳ, ನಡುವಿನ ಬೆಸುಗೆಯಕೊಂಡಿಯಾಗಿದೆ. ವಂಶಾಭಿವೃದ್ಧಿಯ ಮೂಲ ಉದ್ದೇಶದಿಂದ ಕುಟುಂಬದ ವಿಸ್ತಾರತೆ ಬೆಳೆಯುತ್ತದೆ.

ಸಾಮಾನ್ಯವಾಗಿ ತಂದೆಯ ಸಹೋದರಿಯ ಮಗಳೊಂದಿಗೆ ಅಂದರೆ ಅತ್ತೆಯ ಮಗಳೊಂದಿಗೆ, ಅಕ್ಕನ ಮಗಳೊಂದಿಗೆ, ಮದುವೆಯ ಸಂಬಂಧಗಳು ನಡೆಯುತ್ತವೆ. ಪ್ರೌಢವಿವಾಹ ಪದ್ಧತಿಯು ರೂಢಿಯಲ್ಲಿದ್ದು, ಪರಸ್ಪರ ವಿಚಾರ ವಿನಿಮಯಗಳಿಂದ ಮದುವೆಗಳು ನಿಶ್ಚಯವಾಗುತ್ತವೆ. ಏಕಪತ್ನಿತ್ವ ಅಥವಾ ಏಕ ಪತಿತ್ವ ಪದ್ಧತಿಯು ರೂಢಿಯಲ್ಲಿದೆ. ಹೆಣ್ಣು ಮಗಳಿಗೆ ಕುಂಕುಮ, ತಾಳಿ, ಕಿವಿಯೋಲೆ, ಮೂಗುತಿ, ಕಾಲುಂಗುರ, ಬಳೆಗಳು ಇವು ಮದುವೆಯ ಚಿನ್ಹೆಗಳಾಗಿರುತ್ತವೆ. ವಿವಾಹ ವಿಚ್ಛೇದಿತಗಳು ಸಜ್ಜನ ಗಾಣಿಗ ಸಮುದಾಯದಲ್ಲಿ ಬಹಳ ವಿರಳ.

### ವಧು ವರರ-ಆಯ್ಕೆ

ಹೆಣ್ಣಿರುವ ಮನೆಗೆ ಗಂಡಿನವರು ಕನ್ಯೆಯನ್ನು ನೋಡಲು ಬರುವ ಪದ್ಧತಿಯು ಈ ಜನಾಂಗದವರಲ್ಲಿದೆ. ಮತ, ಜಾತಿ, ಬೆಡಗು, ಕಂಕಣಬಲ ಮತ್ತು ದೇವರುಗಳ ಬಗೆಗೆ ತಿಳಿದುಕೊಂಡು ತಮಗೂ ಅವರಿಗೂ ಸರಿ ಹೊಂದಿದರೆ ಹೇಳಿ ಕಳಿಸುವರು, ಬೆಡಗುಗಳು ಎರಡೂ ಒಂದೇ ಆಗಿರಬಾರದು ಎಂಬ ಪದ್ಧತಿ ಇಲ್ಲಿ ಕಂಡು ಬರುತ್ತದೆ. ಏಕೆಂದರೆ ಒಂದೇ ಬೆಡಗಿನವರು ಸಹೋದರತೆಯ ರಕ್ತ ಸಂಬಂಧಿಗಳಾಗುತ್ತಾರೆಂಬ ನಂಬಿಕೆ

ಇವರಲ್ಲಿದೆ. ಗಂಡು-ಹೆಣ್ಣಿನ ಬಗೆಗೆ ಪಂಚಾಂಗದಲ್ಲಿ ಸಾಲಾವಳಿ ನೋಡಿಕೊಂಡು ಅದರಲ್ಲಿ ಒಳ್ಳೆಯ ಅಂಶಗಳು ಗುಣಗಳು ಬಂದರೆ ಮಾತ್ರ ಕನ್ಯೆ ನೋಡಲು ಹೋಗುವರು. ಈಗ ಹಿಂದಿನ ಕಾಲದಲ್ಲಿರುವಂತೆ ವಿವಾಹ ಹಿರಿಯರ ಒಪ್ಪಿಗೆಯನ್ನು ಪಡೆದರೆ ಸಾಲದು ಇಂದು ವಧು-ವರರ ಒಪ್ಪಿಗೆಯು ವಿವಾಹದಲ್ಲಿ ಬಹಳ ಮುಖ್ಯವಾಗಿರುತ್ತದೆ.

**ವಧುವಿಗೆ ಹಣ್ಣಿನ ಉಡಿದುಂಬುವುದು**

ಗಂಡಿನ ಕಡೆಯವರು ವಧು ನೋಡಲು ಬಂದಾಗ ಗಂಡಿನ ಕಡೆಯ ಮಹಿಳೆಯರು ಒಳಗಡೆ ಕರೆದು ಕಣ್ಣು, ಕೈ ಬೆರಳು, ಕಾಲು ಬೆರಳುಗಳನ್ನು ನೋಡುತ್ತಾರೆ. ಅಂಗಹೀನತೆ ಕಂಡುಬಂದರೆ ಮದುವೆಗೆ ಒಪ್ಪುವುದಿಲ್ಲ. ಸರಿ ಇದ್ದರೆ ಮದುವೆಗೆ ಒಪ್ಪಿಕೊಂಡು ವಧುವಿಗೆ ಹೊಸ ಸೀರೆಯೊಂದಿಗೆ ಉಡಿಯಲ್ಲಿ ಬಾಳೆಹಣ್ಣು, ಹೂ, ಎಲೆ, ಅಡಿಕೆ ಹಾಕಿ ಉಡಿ ತುಂಬುತ್ತಾರೆ. ಇದಕ್ಕೆ ಹಣ್ಣು ಇಡುವುದು ಎಂದು ಹೇಳುತ್ತಾರೆ.

**ಬೀಗತನ ಬೆಳೆಸುವುದು**

ಗಂಡಿನ ಕಡೆಯವರೆಗೆ ಹೆಣ್ಣು ಮನಸ್ಸಿಗೆ ಬಂದರೆ ಮನೆತನ ನೋಡಲು ಬರುವಂತೆ ತಿಳಿಸುವರು. ಆಗ ಹೆಣ್ಣಿನವರಿಗೆ ಗಂಡಿನ ಮನೆತನ ಮನಸ್ಸಿಗೆ ಬಂದರೆ ಊರಿನ ಹಿರಿಯರ ಸಮ್ಮುಖದಲ್ಲಿ ಮಾತುಕತೆ ನಡೆದು ಸಕ್ಕರೆಯನ್ನು ಮತ್ತು ಉರಿಗಡಲೆಯನ್ನು ಬೆರೆಸಿ ಅಲ್ಲಿ ಬಂದವರಿಗೆಲ್ಲಾ ಹಂಚುತ್ತಾರೆ. ಬಾಯಲ್ಲಿ ಸಕ್ಕರೆ ಹಾಕಿದರೆ ಬೀಗತನವಾದಂತೆ, ಇದೇ ವೇಳೆಯಲ್ಲಿ ಹೆಣ್ಣಿನವರು ಗಂಡಿನವರಿಗೆ ಕೊಡಬೇಕಾದ ವರದಕ್ಷಿಣೆ, ವರೋಪಚಾರ, ಯಾರ ಕಡೆಗೆ ಮದುವೆ ಮಾಡುವುದು ಮತ್ತು ಮದುವೆ ದಿನ, ತಾರೀಖು ಇತ್ಯಾದಿಗಳೆಲ್ಲವೂ ಇಲ್ಲಿಯೇ ನಿರ್ಧಾರವಾಗುತ್ತದೆ.

ಮದುವೆಯ ಆಚರಣೆಗಳು:- ಮದುವೆಗಳು ಯಾವಾಗಲೂ ಕಾರ್ತಿಕಮಾಸ, ವಸಂತಮಾಸ ಮತ್ತು ಜೇಷ್ಠಮಾಸಗಳಲ್ಲಿಯೇ ನಡೆಯುತ್ತವೆ. ಒಳ್ಳೆಯ ಶುಭದಿನದಂದು ಮದುವೆಯ ಕಾರ್ಯಗಳನ್ನು ಆರಂಭಿಸುತ್ತಾರೆ.

**ಮನೆದೇವರ ಪೂಜೆ ಮತ್ತು ಹಿರಿಯರ ಪೂಜೆ**

ಮದುವೆಯ ಪೂರ್ವದ ದಿನ ಸಜ್ಜನ ಗಾಣಿಗರು ತಮ್ಮ ಮನೆ ದೇವರಿಗೆ ಹೋಗಿ ಪೂಜೆ ಮಾಡಿಸಿಕೊಂಡು ಬರುವ ಪದ್ಧತಿ ರೂಢಿಯಲ್ಲಿದೆ. ಮನೆ ದೇವರ ಪೂಜೆಗೆ ಇಲ್ಲಿ ವರನು ಹೋಗಿ ಬರುವುದು ವಿಶೇಷವಾಗಿದೆ.

ಮದುವೆಯ ಹಿಂದಿನ ರಾತ್ರಿ ಮತ್ತು ಮದುವೆಯ ಪೂರ್ವದಲ್ಲಿ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಮದುವೆಯು ಯಾವುದೇ ಗದ್ದಲವಿಲ್ಲದೆ. ಸುಸೂತ್ರವಾಗಿ ನಡೆಯಲಿ ಎಂಬುದು ಗಾಣಿಗರ ಆಶೆಯಾಗಿದೆ. ಆ ದಿವಸದಂದು ಸತ್ತ ಹಿರಿಯರ ಸ್ಮರಿಸುವ ಕಾಲವಾಗಿದೆ. ಹಾಗೂ ಇದೆ ದಿನದಂದು ಊರಿನ ಎಲ್ಲಾ ಕುಲಬಾಂಧವರು ಹಾಗೂ ಊರಿನ ಇತರೆ ಜಾತಿಯವರಿಗೆ ಊಟವನ್ನು ಹಾಕುತ್ತಾರೆ. ಊಟವು ಸಿಹಿ ಅಡಿಗೆಯಿಂದ ಕೂಡಿದ್ದು ಸಸ್ಯಹಾರಿ ಊಟವಾಗಿರುತ್ತದೆ. ಸಮಗಾರರಲಲಿ ಈ ದಿವಸ ಮಾಂಸದ ಅಡಿಗೆಯನ್ನು ಮಾಡಿ ತಮ್ಮ ಕುಲಭಂದವರಿಗೆ ಊಟ ಹಾಕುತ್ತಾರೆ. (ಉ.ಕ. ಸಮಗಾರರು-೨೦೦೬)

**ಬೀಸುವಕಲ್ಲು ಮತ್ತು ಒನಕೆ ಪೂಜೆ**

ವಿವಾಹಕ್ಕೆ ಪೂರ್ವ ದಿವಸದಂದು ವರನ ಜೊತೆಗೆ ಐದು ಜನ ಮತ್ತೈದೆಯರು ಜೊತೆಗೂಡಿ ಬೀಸುವಕಲ್ಲಿನ ಮತ್ತು ಒನಕೆ ಪೂಜೆಯನ್ನು ಮಾಡಿಸುತ್ತಾರೆ. ಪೂಜೆಯೊಂದಿಗೆ ಮಂಗಳಾರತಿ ಎತ್ತುವರು ಹಾಗೂ ಬೀಸುವ ಕಲ್ಲಿಗೆ ಕಾಳನ್ನಾಕಿ ಸುತ್ತಿಸುವರು. ಅಡಿ ಸಂದರ್ಭದಲ್ಲಿ ಒನಕೆ ಮತ್ತು ಒಳಕಲ್ಲಿನ ಪೂಜೆಯನ್ನು ಮಾಡುತ್ತಾರೆ.

**ವಧು-ವರರಿಗೆ ಅರಿಶಿನ ಹಚ್ಚುವ ಶಾಸ್ತ್ರ**

ಮುತ್ತೈದೆಯರು ಜೊತೆಗೂಡಿ ವರನಿಗೆ ಎಲ್ಲರೂ ಕೈಕಾಲು ಮತ್ತು ಮುಖಕ್ಕೆ ಅರಿಶಿನ ಪುಡಿ ಹಚ್ಚಿ ದೀಪದ ಆರತಿ ಬೆಳಗುವ ಪದ್ಧತಿ ಇದೆ. ನಂತರ ವರನಾದವನು ಅರಿಶಿಣ ಪುಡಿ ಹಚ್ಚಿ ದೀಪದ ಆರತಿ ಮಾಡಿದ ತರುವಾಯ ವಧು-ವರನಿಗೆ ಮುತ್ತೈದೆಯರು ಕೂಡಿಕೊಂಡು ನೀರನ್ನಾಕಿ ಸ್ನಾನಮಾಡಿಸುತ್ತಾರೆ. ಇದು ವಿವಾಹದಲ್ಲಿ ವಿಶೇಷ ಸ್ನಾನವಾಗಿರುತ್ತದೆ. ಕುಲ ಜಾತಿಯವರೊಂದಿಗೆ ಸೇರಿಕೊಂಡು ಊರಿನ ಯಾವುದಾದರೊಂದು ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿಕೊಂಡು ಬರುವುದು.

**ಹಂದರ ಕಾರ್ಯ**

ಈ ಕಾರ್ಯದಲ್ಲಿ ಮನೆಯ ಮುಂದೆ ಅಥವಾ ಮನೆಯ ಒಳಗಡೆ ನಾಲ್ಕು ಕಂಬಗಳನ್ನು ಹೂಳಿ, ನಾಲ್ಕು ಮೂಲೆಗೂ ನಾಲ್ಕು ತೆಂಗಿನ ಕಾಯನ್ನು ಕಟ್ಟುತ್ತಾರೆ. ಹಂದರದ ಮೇಲುಭಾಗಕ್ಕೆ ತೆಂಗಿನ ಗರಿಗಳನ್ನು ಹಾಕುತ್ತಾರೆ. ಜೊತೆಗೆ ಹಂದರಕ್ಕೆ ವಿಶೇಷವಾದ ಪೂಜೆಯೊಂದಿಗೆ ಮಾವಿನ ಸೊಪ್ಪನ್ನು ಮತ್ತು ಎಲೆಗಳನ್ನು ಕಟ್ಟುವರು. ಮೂರನೆಯ ದಿವಸ ವಿಶೇಷ ಕಾರ್ಯಗಳೆಲ್ಲಾ ಈ ಹಂದರ ಅಡಿಯಲ್ಲಿ ನಡೆಯುವಂತಹವುಗಳಾಗಿವೆ. ಹಾಲು ಬಿಡುವ ಶಾಸ್ತ್ರ, ಮಾಂಗಲ್ಯ ಧಾರಣೆಯ ಕಾರ್ಯ, ಹಾಲಿನ ಪಾತ್ರೆಯಲ್ಲಿ ಉಂಗುರ ಹುಡುಕುವ ಶಾಸ್ತ್ರ ಇವೆಲ್ಲವೂ ಹಂದರ ಅಡಿಯಲ್ಲಿ ಮಾಡುವ ಕಾರ್ಯಗಳಾಗಿವೆ. ಇದನ್ನು 'ಹಂದರದ ಮದುವೆ' ಎಂದು ಕೂಡ ಕರೆಯುವುದುಂಟು. ಇದು ಸಜ್ಜನ ಗಾಣಿಗರಲ್ಲಿ ವಿಶೇಷವಾದಂತಹ ಮದುವೆ ಆಚರಣೆಯಾಗಿದೆ.

**ಲಗ್ನ ಪತ್ರದ ಪೂಜೆ**

ವಿವಾಹ ಪೂರ್ವದಲ್ಲಿ ಸುಮಾರು ೧೫ ದಿವಸಗಳ ಮುಂಚಿತವಾಗಿ ಲಗ್ನಪತ್ರವನ್ನು ಮನೆಗೆ ತಂದು ಅವುಗಳಿಗೆ ಪೂಜೆಯನ್ನು ಮಾಡಿ ನಾಲ್ಕು ಮೂಲೆಗೂ ಅರಿಶಿನ ಕುಂಕುಮವನ್ನು ಹಚ್ಚಿ ಪೂಜೆ ಮಾಡುತ್ತಾರೆ. ಪೂಡೆ ಮಾಡಿದ ಲಗ್ನ ಪತ್ರಗಳನ್ನು ತಮ್ಮ ಕುಲ ಸಂಬಂಧಿಕರಿಗೆಲ್ಲಾ ಹಂಚುತ್ತಾರೆ. ಈ ಲಗ್ನ ಪತ್ರಿಕೆಯು ವಧು-ವರರ ಸ್ಥಾನಮಾನ, ಶಿಕ್ಷಣ, ಅವರ ಕುಲ, ಮನೆತನಗಳು ಮತ್ತು ಅವರ ತಂದೆ ತಾಯಿಗಳ ಹೆಸರುಗಳನ್ನು ಒಳಗೊಂಡಿರುವುದಾಗಿರುತ್ತದೆ.

**ನಿಶ್ಚಿತಾರ್ಥದ ಬೆಳ್ಳಿಯ ಸರವನ್ನು ವಧುವಿನ ಕೊರಳಿಗೆ ಹಾಕುವುದು**

ವರ ಮತ್ತು ಐದು ಜನ ಮುತ್ತೈದೆಯರು ಸೇರಿ ನಿಶ್ಚಿತಾರ್ಥದ ಬೆಳ್ಳಿಯಸರವನ್ನು ಹೆಣ್ಣಿನ ಕೊರಳಿಗೆ ಹಾಕುವರು. ಇದನ್ನು ಮದುವೆಯ ಹಿಂದಿನ ರಾತ್ರಿ ನೇರವೇರಿಸುತ್ತಾರೆ. ಮತ್ತು ಮದುವೆಗೆ ಪೂರ್ವದಲ್ಲಿ

ವರನಿಗೆ ಹೆಣ್ಣು ರಾತ್ರಿಯಾದ ದಿನದಂತೆ ಈ ಸರಪಳಿ ಹೆಣ್ಣಿನ (ವಧುವಿನ) ಕೊರಳಿಗೆ ಹಾಕುವುದುಂಟು. ಈ ಸರವು ವಧುನಿನ ಕೊರಳಿಗೆ ಬಿದ್ದಿತೆಂದರೆ ಆ ವಿವಾಹವೂ ಖಾತ್ರಿಯಾದಂತೆ ಎಂಬ ನಂಬಿಕೆ ಸಜ್ಜನ ಗಾಣಿಗರಲ್ಲಿದೆ.

**ತಾಳಿ ಪೋಣಿಸುವುದು**

ವಧು ಮತ್ತು ವರ ಐದು ಜನ ಮುತ್ತೈದೆಯರು ಸೇರಿಕೊಂಡು ಬಂಗಾರದ ತಾಳಿ ಹಾಗೂ ಕರಿಮಣಿಯನ್ನು ಪೋಣಿಸುವ ಪದ್ದತಿ ಇವರಲ್ಲಿದೆ. ನಂತರ ವಧುವರರಿಗೆ ಮುತ್ತಿನ ಅಥವಾ ಬೆಂಡಿನ ಬಾಸಿಂಗವನ್ನು ಕಟ್ಟಿ ವರನಿಂದ ವಧುವಿಗೆ ತಾಳಿಯನ್ನು ಕಟ್ಟಿಸಿ ಅಕ್ಷತೆ (ಅಕ್ಕಿಕಾಳು,) ಹಾಕುವರು. ಇಲ್ಲಿ ಮದುವೆಗೆ ನೆರೆತ ಜನರೆಲ್ಲರೂ ಈ ಸಂದರ್ಭದಲ್ಲಿ ಅರಿಶಿನ ಪುಡಿ ಮತ್ತು ಕುಂಕುಮ ಬೆರಸಿದ ಅಕ್ಕಿಕಾಳುಗಳನ್ನು ವಧು ವರರಿಗೆ ತಾಳಿಕಟ್ಟಿದೊಡನೆಯೇ ವಧು ವರರ ಮೇಲೆ ಹಾಕುವ ಪದ್ದತಿ ಇವರಲ್ಲಿದೆ. ಅಕ್ಕಿಕಾಳು ಹಾಕಿ ಮಾಡುವ ವಿವಾಹಕ್ಕೆ ಒಳಗಿನ ಅಕ್ಕಿಕಾಳು ಎಂದು ಹೇಳುವರು. ತಾಳಿಕಟ್ಟುವುದಕ್ಕಿಂತ ಪೂರ್ವದಲ್ಲಿ ಅಲ್ಲಿ ನೆರೆತ ಕುಲಭಾಂದವರೆಲ್ಲರೂ ವಧು ವರರಿಗೆ ಕೈ ಮೇಲೆ ತೆಂಗಿನ ಕಾಯಿಯನ್ನಿಟ್ಟು ಅದಕ್ಕೆ ಹಾಲು ತುಪ್ಪವನ್ನು ಬಿಡುವ ಶಾಸ್ತ್ರವನ್ನು ಮಾಡುತ್ತಾರೆ. ಈ ಪದ್ದತಿಯು ಇವರಲ್ಲಿದೆ. ವರ ವಧುವಿಗೆ ತಾಳಿ ಕಟ್ಟುವ ಶಾಸ್ತ್ರವು ಹಂದರದ ಕೆಳಗೆ ನಡೆಯುತ್ತದೆ. ಆದ್ದರಿಂದ ಇದನ್ನು ಹಂದರ ವಿವಾಹ ಎನ್ನುವರು.

**ಸೋದರ ಮಾವನ ಪಾತ್ರ**

ಮದುವೆಯ ಹಂದರಕ್ಕೆ ವದುವನ್ನು ವಿಶೇಷವಾಗಿ ವಾದ್ಯಗಳೊಂದಿಗೆ ಕರೆತಂದಿರುವ ಜವಾಬ್ದಾರಿ ಆ ಹುಡುಗಿಯ ಸೋದರ ಮಾವನದಾಗಿರುತ್ತದೆ. ಈ ಕಾರ್ಯಕ್ಕಾಗಿ ವಧುವಿನ ತಂದೆ ತಾಯಿಗಳು ಸೋದರ ಮಾವನಿಗೂ ಹೊಸ ಬಟ್ಟೆಗಳನ್ನು ಕೊಡುವ ಪದ್ದತಿ ಇದೆ.

**ಈ ಶುಭ ಕಾರ್ಯಗಳಲ್ಲಿ ವಿಧುವೆಯು ಯಾವುದೇ ಕಾರ್ಯಗಳಲ್ಲಿ ಭಾಗವಹಿಸುವುದಿಲ್ಲ**

ಈ ಸಂದರ್ಭದಲ್ಲಿ ತಾಯಿಯು ವಿಧವೆಯಾಗಿದ್ದಾರೆ ವಿವಾಹದ ಯಾವುದೇ ಕಾರ್ಯದಲ್ಲಿ ಭಾಗವಹಿಸುವಂತಿಲ್ಲ. ಹುಡುಗ ಮತ್ತು ಹುಡುಗಿಯರ ಚಿಕ್ಕಪ್ಪ ಮತ್ತು ದೊಡ್ಡಪ್ಪ ಅವರ ಹೆಂಡತಿಯರು ಸೇರಿಕೊಂಡು ವಿವಾಹವನ್ನು ನಡೆಸಿಕೊಡುತ್ತಾರೆ. ಜೊತೆಗೆ ಹೊಸ ಬಟ್ಟೆಯ ದಾನವನ್ನು ಕೊಡುವ ಆಚರಣೆಯೂ ಇವರಲ್ಲಿದೆ.

**ತಾಳಿ ಕಟ್ಟಿದ ತರುವಾಯ ವಧುವರರಿಗೆ ಹಾಲಿನಲ್ಲಿ ಉಂಗುರ ಹುಡುಕುವ ಶಾಸ್ತ್ರ**

ವಿವಾಹ ನಡೆಸಿಕೊಡಲು ಬಂದ ಸ್ವಾಮಿಗಳು ಮತ್ತು ಐಯ್ಯನವರು ತಾಳಿ ಶಾಸ್ತ್ರದ ನಂತರ ಹಾಲಿನ ಪಾತ್ರೆಯಲ್ಲಿ ಉಂಗುರವನ್ನಾಕಿ ವಧು ವರರಿಗೆ ಆ ಉಂಗುರವನ್ನು ಹುಡುಕಲು ತಿಳಿಸುವರು. ಯಾರಿಗೆ ಉಂಗುರ ಸಿಗುತ್ತದೆಯೋ ಅವರು ಗೆದ್ದಂತೆ.

**ಸೂರ್ಯ ಪೂಜೆ ಮತ್ತು ಸೂರ್ಯ ನಮಸ್ಕಾರ:-** ವಿವಾಹದ ತರುವಾಯ ವಧುವರವನ್ನು ಹೊರ ಕರೆತಂದು ಅವರಿಂದ ಸೂರ್ಯ ಪೂಜೆಯನ್ನು ಮಾಡಿಸಿ ಸೂರ್ಯನಿಗೆ ನಮಸ್ಕಾರ ಮಾಡಿಸುತ್ತಾರೆ.

**ಆರತಕ್ಷತೆ:-** ತಾಳಿ ಕಟ್ಟುವ ಶಾಸ್ತ್ರವೆಲ್ಲಾ ಮುಗಿದ ಮೇಲೆ, ತಲೆಯ ಮೇಲಿನ ಬಾಸಿಂಗವನ್ನು ದೇವರ ಸನ್ನಿದಿಯಲ್ಲಿ ತೆಗೆದಿಟ್ಟು ಪ್ಯಾಂಟ್ ಮತ್ತು ಶರ್ಟ್, ವಿಶೇಷ ಸೀರೆಯ ಉಡಿಗೆಯೊಂದಿಗೆ ಸಾರ್ವಜನಿಕರ ಎದುರಿಗೆ ಮದುವೆ ಮಂಟಪದಲ್ಲಿ ಕುಳ್ಳಿರಿಸುತ್ತಾರೆ. ಅಲ್ಲಿ ಸೇರಿದ ಕುಲ ಸಂಬಂಧಿಗಳೆಲ್ಲಾ ವಿಶೇಷವಾಗಿ ವಧು ಮತ್ತು ವರರಿಗೆ ಅಕ್ಕಿಕಾಳನ್ನು ಹಾಕಿ ಗೌರವದ ಸೂಚಕವಾಗಿ ಹಣ ಹಾಗೂ ವಿವಿಧ ವಸ್ತುಗಳನ್ನು ಆರತಕ್ಷತೆಯ ಸಂದರ್ಭದಲ್ಲಿ ಕೊಡುವುದುಂಟು. ಈ ಸಂದರ್ಭದಲ್ಲಿ ವಿಶೇಷವಾಗಿ ಫೋಟೋ ತೆಗೆಸುವುದು ಮತ್ತು ವಿಡಿಯೋ ಕವರೇಜ್‌ನ್ನು ಮಾಡಿಸುತ್ತಾರೆ. ಇದರಲ್ಲಿ ತಮ್ಮ ಸಂಬಂಧಿಕರೆಲ್ಲಾ ಬರಬೇಕೆಂಬುದು ವಾಡಿಕೆ ಇದೆ.

**ಊಟ:-** ಇವರಲ್ಲಿ ಸಿಹಿ ಊಟವನ್ನು ಮದುವೆಯ ಸಂದರ್ಭದಲ್ಲಿ ನೀಡುತ್ತಾರೆ. ಜೊತೆಗೆ ಇವರು ಸಸ್ಯಹಾರಿಗಳಾಗಿದ್ದೂ ವಿಶೇಷವಾದ ಸಿಹಿ ಊಟವನ್ನು ಈ ಸಂದರ್ಭದಲ್ಲಿ ಮಾಡಿಸಿರುತ್ತಾರೆ. ವಿವಾಹಕ್ಕೆ ಸೇರಿದ ಎಲ್ಲರಿಗೂ ಗೌರವ ಪೂರ್ವಕವಾಗಿ ಊಟ ಮಾಡಲೇಬೇಕು. ಊಟದ ನಂತರ ವಿಶೇಷವಾಗಿ ಖಾರ ಹಾಕಿದ ಮಜ್ಜಿಗೆ ಮತ್ತು ಬಾಳೆಹಣ್ಣನ್ನು ಕೊಡುತ್ತಾರೆ. ಕಡೆಗೆ ವಿಶೇಷ ಎಲೆ ಅಡಿಕೆ ಫಲತಾಂಬೂಲವನ್ನು ಕೊಡುತ್ತಾರೆ. ವಿವಾಹಕ್ಕೆ ಬಂದ ಎಲ್ಲಾ ಸದಸ್ಯರನ್ನು ಗೌರವದಿಂದ ಗೌರವಿಸುವ ಕಾರ್ಯಕ್ರಮ ಈ ವಿವಾಹ ಕಾರ್ಯಕ್ರಮವಾಗಿದೆ.

**ಗಂಗಮ್ಮನ ಶಾಸ್ತ್ರ:-** ವಿವಾಹ ಕಾರ್ಯ ಮುಗಿದ ದಿವಸವೇ ಐದು ಜನ ಮುತ್ತೈದೆಯರು ಮತ್ತು ಮಕ್ಕಳು ಹೋಗಿ ಗಂಗಮ್ಮನನ್ನು ಪೂಜಿಸಿ ಐದು ಉಡಿಯನ್ನು ಹಾಕುತ್ತಾರೆ. ಉಡಿಯು ಎಲೆ ಅಡಿಕೆ ಚಿಗಳಿ, ಟಮಟ, ಬಾಳೇಹಣ್ಣು ಇವುಗಳನ್ನು ಒಳಗೊಂಡಿರುತ್ತದೆ. ಇದರ ಜೊತೆಗೆ ತುಂಬಿದ ಕೊಡವನ್ನು ಇಟ್ಟು ಅದರ ಕಂಟಕ್ಕೆ ೫ ಎಲೆಗಳನ್ನಿಟ್ಟು ಅದರ ಮೇಲೆ ಒಂದು ತೆಂಗಿನ ಕಾಯಿಯನ್ನಿಟ್ಟು ಅದನ್ನು ಹೂವಿನಿಂದ ಅಲಂಕಾರ ಮಾಡಿರುತ್ತಾರೆ. ಇಲ್ಲಿ ಐದು ಜನ ಮುತ್ತೈದೆಯರು ಇದನ್ನು ಪೂಜಿಸಿದ ನಂತರ ಉಡಿಯನ್ನು ಅಲ್ಲಿ ಸೇರಿದ ಎಲ್ಲರಿಗೂ ಕೊಡುತ್ತಾರೆ. ಅಲ್ಲಿ ಸೇರಿದವರಿಗೆಲ್ಲಾ ಕೈಗೆ ಕಂಕಣವನ್ನು ಕಟ್ಟುತ್ತಾರೆ. ನಂತರ ಬಂದು ಉಡಿಯನ್ನು ಗಂಗಮ್ಮನಿಗೆ ಬಿಟ್ಟು ಪೂಜಿಸಿದ ತುಂಬಿದ ಕೊಡವನ್ನು ವಧುವಿನ ತಲೆಯ ಮೇಲೆ ಹೊರಿಸಿಕೊಂಡು ಮನೆಗೆ ಗಂಗೆಯನ್ನು ಕರೆದುಕೊಂಡು ಬರುವರು. ಗಂಗೆಯನ್ನು ಮನೆಗೆ ತರುವಾಗ ಗಂಗೆಯನ್ನ ಹೊತ್ತ ವಧುವಿಗೆ ಕಾಯಿ ಇಳೇದೆಗೆದು ಒಡೆಯಬೇಕು. ಮತ್ತು ನಿಂಬೆಹಣ್ಣುಗಳನ್ನು ವೀಳೆದೆಗೆದು ಕಾಲಿನಿಂದ ಅದನ್ನು ತುಳಿಯಬೇಕು. ಮನೆಗೆ ತಂದ ಗಂಗೆಯನ್ನು ವರನಿಂದ ಪೂಜೆ ಮಾಡಿಸಿ ಗಂಗೆಯನ್ನು ದೇವರ ಮನೆಯಲ್ಲಿ ಇಡುವರು.

**ತೊಟ್ಟಿಲು ತೂಗುವ ಶಾಸ್ತ್ರ:-** ವಿವಾಹದ ದಿವಸದಂದೇ ತೊಟ್ಟಿಲಲ್ಲಿ ಗಂಧದ ಕಟ್ಟಿಗೆಯನ್ನು ಬಟ್ಟೆಯಲ್ಲಿ ಸುತ್ತಿ ತೊಟ್ಟಿಲಲ್ಲಿ ಹಾಕಿ ಮುತ್ತೈದೆಯರೊಂದಿಗೆ ನವ ವಧುವರರೂ ತೊಟ್ಟಿಲನ್ನು ತೂಗುವರು ಈ ಪದ್ದತಿ. ನವ ವಧುವರರಿಗೆ ಮುಂದೆ ಆಗಬಹುದಾದ ಮಕ್ಕಳ ಬಗ್ಗೆ ತಿಳಿಸುತ್ತದೆ.

**ಐದು ಬಳೆಯ ಶಾಸ್ತ್ರ:-** ಸಜ್ಜನ ಗಾಣಿಗರಲ್ಲಿ ಯಾವುದೇ ಶುಭ ಸಂದರ್ಭದಲ್ಲಿ ವಿವಾಹ ಸಂದರ್ಭದಲ್ಲಿ ವಧುವಿಗೆ ಐದು ಬಳೆಯನ್ನು ಕೊಡಿಸುವುದುಂಟು. ಸಜ್ಜನ ಗಾಣಿಗರು ಬೆಡಗಿನಲ್ಲಿ ಐದು ಬಳೆಯವರೆಂದು ಮತ್ತು ಜ್ಯೋತಿ ಅಥವಾ ಜೋಡು ಬಳೆಯ ಗಾಣಿಗರನ್ನು ಎರಡು ಬಳೆಯವರೆಂದು ಗುರುತಿಸಿಕೊಂಡಿದ್ದಾರೆ. ಯಾವುದೇ ಶುಭ ಸಂದರ್ಭದಲ್ಲಿ ಸಜ್ಜನ ಗಾಣಿಗ ೫ ಬಳೆ ಹಾಕಿದರೆ ಜ್ಯೋತಿ ಬಣದವರು ೨ ಬಳೆ ಹಾಕುತ್ತಾರೆ.

**ಗೃಹ ಪ್ರವೇಶ:-** ಅಂದರೆ ಹೊಸ ಮೊದಲಗಿತ್ತಿಗೆ ಮನೆ ತುಂಬಿಸಿಕೊಳ್ಳುವುದು. ಮದುವೆಯ ದಿನವೇ ಅನೇಕ ವಿಧಿ-ವಿಧಾನಗಳೊಂದಿಗೆ ವಧುವನ್ನು ವರನ ಮನೆಗೆ ಸೇರಿಸಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ವಧುವಿನ ಕಾಲನ್ನು ಮನೆಯ ಎರಡನೇ ಹೊಸ್ತಿಲು ಕಂಬದ ಮೇಲಿರಿಸಿ ಹೆಬ್ಬೆರಳು ಮತ್ತು ಎರಡನೆ ಕಾಲ್ ಬೆರಳಿನ ಸಂದಿಗೆ ವರನಾದವನು ಒಂದು ಮೊಳೆಯನ್ನು ಹೊಡೆಯುತ್ತಾನೆ. ನಂತರ ವಧುವಾದವಳು ಮನೆಯ ಹೊಸ್ತಲಿಯಲ್ಲಿ ಇಟ್ಟ ಅಕ್ಕಿ ತುಂಬಿದ ಚಂಬನ್ನು ಬಲ ಕಾಲಿನಲ್ಲಿ ಒದೆಯುವ ಪದ್ಧತಿಯು ಇವರಲ್ಲಿದೆ. ನಂತರ ದೇವರ ಮನೆಗೆ ಹೋಗಿ ದೇವರಿಗೆ ನಮಸ್ಕರಿಸಿ ವಧುವು ಹೊರಗೆ ಬರುತ್ತಾಳೆ.

**ವಧುವರರನ್ನು ಏಕಾಂತದಲ್ಲಿ ಬಿಡುವ ಕಾರ್ಯ:-** ವಿವಾಹವಾದ ದಿನದಂದು ಮತ್ತು ವಿವಾಹವಾದ ಐದನೆ ದಿವಸದಂದು ಈ ಕಾರ್ಯವನ್ನು ಮಾಡುತ್ತಾರೆ. ಅಂದರೆ ಒಂದು ಪ್ರತ್ಯೇಕ ಕೋಣೆಯಲ್ಲಿ ವಿವಿಧ ಬಗೆಯ ಸಿಹಿ ತಿಂಡಿಗಳನ್ನು ಇಟ್ಟು ಜೊತೆಗೆ ಹಣ್ಣು ಹಂಪಲುಗಳನ್ನಿಟ್ಟು, ವರನನ್ನು ಮೊದಲು ಕೋಣೆಗೆ ಕಳಿಸುತ್ತಾರೆ. ನಂತರ ಹಾಲಿನ ಲೋಟದೊಂದಿಗೆ ವಧುವನ್ನು ಆ ಕೋಣೆಯೊಳಗೆ ಕಳುಹಿಸಿ ಕದ ಹಾಕುತ್ತಾರೆ. ವಧುವರರಿಗೆ ಈ ರಾತ್ರಿಯು ಬಹಳ ವಿಶೇಷದ್ದಾಗಿರುತ್ತದೆ. ಆ ರಾತ್ರಿ ಹಾಸಿಗೆ ಹಾಸಿ ಸಹಕರಿಸಿದ ಹೆಣ್ಣು ಮಕ್ಕಳಿಗೆ ವರನಾದವನು ಹಾಸಿಗೆ ಬಿಡುವಾಗ ತಲೆ ದಿಂಬಿನ ಅಡಿಯಲ್ಲಿ ನೂರು ರೂಪಾಯಿ ಇಂದ ಐನೂರು ರೂಪಾಯಿಗಳವರೆಗೆ ಹಣ ಇಟ್ಟು ಬರುತ್ತಾನೆ. ಇದನ್ನು ಹಾಸಿಗೆ ಹಾಸಿದ ಹೆಣ್ಣು ಮಕ್ಕಳು ತೆಗೆದುಕೊಳ್ಳುತ್ತಾರೆ.

ಈ ಮೇಲಿನ ರೀತಿಯಲ್ಲಿ ಸಜ್ಜನ ಗಾಣಿಗರಲ್ಲಿ ವಿವಾಹದ ಸಂದರ್ಭದಲ್ಲಿ ವಿಶೇಷ ಆಚರಣೆಗಳನ್ನು ಮತ್ತು ನಂಬಿಕೆಗಳನ್ನು ಆಚರಿಸುತ್ತಾರೆ. ವಿವಾಹವಾದ ಪುರುಷ ಮತ್ತು ಮಹಿಳೆಯನ್ನು ಸಮುದಾಯ ಸಮಾಜ ಗೌರವದಿಂದ ಗೌರವಿಸುತ್ತದೆ. ಹಾಗೂ ಗೌರವದಿಂದ ಕಾಣಿಸುತ್ತದೆ.

**ಸಜ್ಜನ ಗಾಣಿಗ ಮಹಿಳೆಯರಿಗೆ ಸಂತಾನ ಹರಣ ಶಸ್ತ್ರಚಿಕಿತ್ಸೆ**

ಹಿಂದಿನ ದಿವಸಗಳಲ್ಲಿ ಮಕ್ಕಳನ್ನು ನಿಯಂತ್ರಣದಲ್ಲಿಟ್ಟು ಕೊಳ್ಳಲು ಯಾವುದೇ ವೈಜ್ಞಾನಿಕ ಸಂತಾನಹರಣ ಶಸ್ತ್ರ ಚಿಕಿತ್ಸೆಗಳು ಇರಲಿಲ್ಲ. ಜೊತೆಗೆ, ನಮ್ಮ ದೇಶದ ಹೆಣ್ಣು ಮಕ್ಕಳ ಫಲವತ್ತತೆಯ ಪ್ರಮಾಣ ಬೇರೆ ರಾಷ್ಟ್ರಗಳಿಗೆ ಹೋಲಿಸಿ ಕೊಂಡಾಗ ಹೆಚ್ಚಿದೆ. ಅಂದರೆ ಮಹಿಳೆ ಋತುಮತಿಯಿಂದ ಹಿಡಿದು ೪೬ನೇ ವರ್ಷದವರೆಗೂ ಮಗುವನ್ನು ಪಡೆಯುವ ಸಾಮರ್ಥ್ಯ ಹೊಂದಿದ್ದಾಳೆ. ಜನನದಲ್ಲಿ ಹೆಚ್ಚಳ ಮರಣದಲ್ಲಿ ನಿಯಂತ್ರಣ ಇದರಿಂದ ಭಾರತದಲ್ಲಿ ಜನಸಂಖ್ಯೆ ಹೆಚ್ಚಿದೆ. ನಮ್ಮ ರಾಷ್ಟ್ರವು ಉಷ್ಣ ವಾತಾವರಣವಿರುವುದರಿಂದ

ಮಕ್ಕಳ ಸಂಖ್ಯೆ ಹೆಚ್ಚಿತ್ತು. ಅನಕ್ಷರತೆ ಸಂಪ್ರದಾಯಗಳು, ಬಡತನ, ನಿರುದ್ಯೋಗ ಮುಂತಾದ ಅಂಶಗಳು ಭಾರತದ ಜನಸಂಖ್ಯೆ ಹೆಚ್ಚಳಕ್ಕೆ ಕಾರಣವಾಗಿವೆ.

ಜನಸಂಖ್ಯೆ ಹೆಚ್ಚಳದಲ್ಲಿ ಚೀನಾ ದೇಶವು ಪ್ರಥಮ ಸ್ಥಾನ ಪಡೆದಿದ್ದರೆ ಭಾರತ ದೇಶವು, ೨ನೇ ಸ್ಥಾನವನ್ನು ಪಡೆದುಕೊಂಡಿದೆ. ಭಾರತದ ಜನಸಂಖ್ಯೆಯನ್ನು ಪ್ರಪಂಚದ ಜನಸಂಖ್ಯೆಗೆ ಹೋಲಿಸಿಕೊಂಡಾಗ ಒಟ್ಟು ಭಾರತೀಯ ಜನಸಂಖ್ಯೆ ೧೬ರಷ್ಟು ಇದೆ. ನಮ್ಮ ಭಾರತ ದೇಶದಲ್ಲಿ ಪುರುಷರಿಗಿಂತ ಸ್ತ್ರೀಯರ ಪ್ರಮಾಣವು ಕಡಿಮೆ ಇದೆ. ಅಂದರೆ ೨೦೦೧ ರ ಜನಗಣತಿ ಪ್ರಕಾರ ೧೦೦೦ ಜನ ಪುರುಷರಿಗೆ ೯೩೩ ಜನ ಮಹಿಳೆಯರಿದ್ದಾರೆ.

ಇಂದು ಸಮಾಜದ ಅಭಿವೃದ್ಧಿಗೆ ಜನಸಂಖ್ಯೆ ಮತ್ತು ಸಂಪನ್ಮೂಲಗಳ ಯೋಗ್ಯ ಬಳಕೆಯಾಗಬೇಕು ಮತ್ತು ಕುಟುಂಬ ಕಲ್ಯಾಣ ಯೋಜನೆಯಡಿಯಲ್ಲಿ ಶಾಶ್ವತ ಜನಸಂಖ್ಯಾ, ನಿಯಂತ್ರಣವನ್ನು ಮಾಡುತ್ತಿದೆ. ಅಂದರೆ ಮಹಿಳೆಯರಿಗೆ ವೆಸಕ್ಟಮಿ ಮತ್ತು ಪುರುಷರಿಗೆ ಟ್ಯುಬೆಕ್ಟಮಿ ಶಸ್ತ್ರಚಿಕಿತ್ಸೆಯಿಂದ ಮಕ್ಕಳನ್ನು ಶಾಶ್ವತವಾಗಿ ನಿಯಂತ್ರಣಕ್ಕೆ ತರಬಹುದಾಗಿದೆ. ಸಂಶೋಧನೆ ಸಂದರ್ಭದಲ್ಲಿ ಇದರ ಬಗ್ಗೆ ವಿಚಾರಿಸಿದಾಗ ಪುರುಷರಾರು ಶಸ್ತ್ರ ಚಿಕಿತ್ಸೆಗೆ ಒಳಗಾಗಿಲ್ಲ. ಆದರೆ ಮಹಿಳೆಯರು ಶಾಶ್ವತ ಶಸ್ತ್ರ ಚಿಕಿತ್ಸಗೆ ಒಳಗಾಗಿದ್ದು ಇಂದು ಇವರು ವಾಸಿಸುವ ಕುಟುಂಬದ ಜನಸಂಖ್ಯೆ, ಇಳಿಮುಖವಾಗುತ್ತಿದೆ. ಇದರಿಂದ ಕುಟುಂಬದ ರಚನೆಯಲ್ಲಿ ಸಂಪೂರ್ಣ ಬದಲಾಗಿದೆ. ಒಟ್ಟಿನಲ್ಲಿ ಚಿತ್ರದುರ್ಗದ ಸಜ್ಜನ ಗಾಣಿಗರಲ್ಲಿ ಜನಸಂಖ್ಯೆಯು ನಿಯಂತ್ರಣಕ್ಕೆ ಬಂದಿದ್ದು, ಕುಟುಂಬ ಕಲ್ಯಾಣ ಯೋಜನೆ ಸಫಲವಾದಂತಾಗಿದೆ. ಸಜ್ಜನ ಗಾಣಿಗರಲ್ಲಿ ವಧು ತೆರ ಅಥವಾ ವಧುದಕ್ಷಿಣೆ ಬದಲಾಗಿ ವರದಕ್ಷಿಣೆ ಅಸ್ತಿತ್ವಕ್ಕೆ ಬಂದಿದೆ.

ಹಿಂದಿನ ಕಾಲದಲ್ಲಿ ಹಿರಿಯ ಜನಾಂಗವು ಕನ್ಯೆ ಅಥವಾ ಕನ್ಯೆಯ ಸಂಬಂಧಿಕರಿಗೆ ಕನ್ಯಾಶುಲ್ಕವನ್ನು ಕೊಟ್ಟು ವಿವಾಹವಾಗುವ ಪದ್ದತಿ ಇತ್ತು. ಇದೇ ರೀತಿ ಮುಸ್ಲಿಂ ಬಾಂಧವರಲ್ಲಿಯೂ ಕನ್ಯೆ ಮತ್ತು ಕನ್ಯೆಯ ಸಂಬಂಧಿಕರಿಗೆ ಮೊಹರ್ ಕೊಡುವ ಪದ್ಧತಿ ಇತ್ತು. ಅಂದರೆ ಹಿಂದೆ ಹಿಂದೂ ಮತ್ತು ಮುಸ್ಲಿಂ ಧರ್ಮಾಚರಣೆಯ ಜನರಲ್ಲಿ ಕನ್ಯಾಶುಲ್ಕ ಪದ್ಧತಿ ಇತ್ತೆಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಸಮಾಜದಲ್ಲಿ ವಿವಾಹವು ಸಾರ್ವತ್ರಿಕವಾಗಿದ್ದೂ ಸಾಮಾಜಿಕ ಸಂಸ್ಥೆಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಸಮಾಜದಲ್ಲಿ ವಿವಾಹ ಸಂದರ್ಭದಲ್ಲಿ ಕನ್ಯಾಶುಲ್ಕ ಪದ್ಧತಿಯು ಅಸ್ತಿತ್ವಕ್ಕೆ ಬರಲು ಕಾರಣವೆಂದರೆ ಸಮಾಜದಲ್ಲಿ ಪುರುಷರ ಸಂಖ್ಯೆಗಿಂತ ಮಹಿಳೆಯರ ಸಂಖ್ಯೆ ಕಡಿಮೆ ಇದ್ದಾಗ ವಿವಾಹವಾಗಲು ಕನ್ಯೆಯರು ಸಿಗದೇ ಇದ್ದಾಗ ಈ ಕನ್ಯಾಶುಲ್ಕ ಪದ್ದತಿ ಅಸ್ತಿತ್ವಕ್ಕೆ ಬಂದಿರಬಹುದು. ೧೯ ಮತ್ತು ೨೦ ಶತಮಾನಕ್ಕೆ ಪೂರ್ವದಲ್ಲಿ ಸಜ್ಜನ ಗಾಣಿಗರಲ್ಲಿಯೂ ಕನ್ಯಾಶುಲ್ಕ ಪದ್ಧತಿ ಅಸ್ಥಿತ್ವದಲ್ಲಿತ್ತು. ಈ ಕನ್ಯಾಶುಲ್ಕ ಹಿಂದೂಗಳಲ್ಲಿ ಬೆಳೆಯಲು ಮುಸ್ಲಿಂ ಧರ್ಮದ ಆಚರಣೆಗಳು ಹಿಂದೂಗಳ ಮೇಲೆ ಪ್ರಭಾವ ಬೀರಿವೆ ಎನ್ನಬಹುದಾಗಿದೆ. ಮದ್ಯಕಾಲೀನ ಯುಗದಲ್ಲಿ ಭಾರತವು ಮುಸ್ಲಿಂ ಅರಸರ ಆಳ್ವಿಕೆಗೆ ಅಥವಾ ಪ್ರಭಾವಕ್ಕೆ

ಒಳಗಾಗಿದ್ದರಿಂದಲೂ ಇವರ ಆಚರಣೆಗಳು ಹಿಂದೂ ಸಮಾಜದ ಮೇಲೆ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ.

ಮುಸ್ಲಿಂ ಆಡಳಿತ ಬಂದೇ ಹಿಂದೂ ಧರ್ಮದ ಮೇಲೆ ಪ್ರಭಾವದೊಂದಿಗೆ. ಕೆಲವು ಮುಸ್ಲಿಂ ಅರಸರಾದ ಅಕ್ಬರ್ ಮುಂತಾದವರ ಪ್ರಭಾವದಿಂದ ಮುಸ್ಲಿಂ ಪದ್ದತಿಗಳು ಹಿಂದೂಗಳಿಗೆ ಸರಿಕಂಡಿರಬೇಕು. ಅಂದಿನಿಂದ ಹಿಂದುಗಳಲ್ಲಿಯೂ ಅಂದಿನಿಂದ ಕನ್ಯಾಶುಲ್ಕ ಅಸ್ತಿತ್ವಕ್ಕೆ ಬಂದಿದೆ.

ಸಂಖ್ಯಾತ್ಮಕವಾಗಿ ಹಿಂದಿನ ಕಾಲದಲ್ಲಿ ಬಹು ಪತ್ನಿತ್ವ ಪದ್ದತಿ ರಾಜನಿಂದ ಹಿಡಿದು ಅದು ಪ್ರಜೆಗಳ ಮೇಲೆಯೋ ಅನುಕರಣೆ ಆಗುತ್ತಿತ್ತು. ಆಧುನಿಕ ದಿನಮಾನಗಳಲ್ಲಿಯೂ ಮುಸ್ಲಿಂರಲ್ಲಿ ಬಹು ಪತ್ನಿತ್ವ ಪದ್ಧತಿಯೂ ಆಚರಣೆಯಲ್ಲಿದೆ.

ಹಿಂದೆ ಸಮಾಜದ ಗಣ್ಯರಾದವರು ಎರಡು ಅಥವಾ ಮೂರು ಹೆಂಡತಿಯರನ್ನು ಪಡೆದರೆ ಸಮಾಜವು ಅಂತಹವರನ್ನು ಗೌರವಿಸುತ್ತಿತ್ತು. ಅವರ ಸ್ಥಾನಮಾನಗಳು ಮೇಲ್‌ಮುಖಕ್ಕೆ ಹೋಗುತ್ತಿದ್ದವು. ಆದರೆ ಇಂದು ಸಜ್ಜನ ಗಾಣಿಗರಲ್ಲಿ ಏಕ ಪತ್ನಿತ್ವ ಮತ್ತು ಏಕ ಪತಿತ್ವಕ್ಕೆ ಗೌರವಯುತ ಸ್ಥಾನಮಾನವನ್ನು ಸಮುದಾಯದಲ್ಲಿ ನೀಡಲಾಗುತ್ತಿದೆ.

ಕನ್ಯಾಶುಲ್ಕವು ಮುಸ್ಲಿಂರಲ್ಲಿ ಮಹರ್ ಎಂದು ಕರೆಸಿಕೊಂಡಿದ್ದು ಇದರ ಪ್ರಭಾವ ಹಿಂದೂಗಳ ಮೇಲೆಯೂ ಆಗಿರಬಹುದು. ನಮ್ಮ ದೇಶದ ಜನಸಂಖ್ಯೆಯಲ್ಲಿ ೧೯೦೧ ನೇ ಜನಗಣತಿ ಪ್ರಕಾರ ೧೦೦೦ ಜನ ಪುರುಷರಿಗೆ ೯೭೨ ಜನ ಮಹಿಳೆಯರಿದ್ದಾರೆಂದು ೨೦೦೧ ನೇ ಜನಗಣತಿಯ ಪ್ರಕಾರ ೧೦೦೦ ಜನ ಪುರುಷರಿಗೆ ೯೩೩ ಜನ ಮಹಿಳೆಯರಿರುವುದು ಕಂಡುಬರುತ್ತದೆ. ಇವರಲ್ಲಿ ಮಹಿಳೆಯರ ಸಂಖ್ಯೆ ಕಡಿಮೆ ಇದ್ದು, ಪುರುಷರ ಸಂಖ್ಯೆ ಹೆಚ್ಚಿರುವುದು ಗೋಚರಿಸುತ್ತದೆ. ಇದರಿಂದ ಮುಸ್ಲಿಂ ರಲ್ಲಿರುವಂತೆ ಹಿಂದೂಗಳಲ್ಲಿಯೂ ಅಸ್ತಿತ್ವಕ್ಕೆ ಬಂದಿದೆ.

ಕನ್ಯೆಯು ಎಷ್ಟು ಸುಂದರವಾಗಿರುತ್ತಾಳೆಯೇ ಮತ್ತು ಉತ್ತಮ ಕುಟುಂಬದಿಂದ ಬಂದಿರುತ್ತಾಳೆಯೋ ಅದರ ಆಧಾರದ ಮೇಲೆ ಕನ್ಯಾಶುಲ್ಕವು ಹೆಚ್ಚುತ್ತಾ ಹೋಗುತಿತ್ತು.

ಇಂದಿನ ದಿನಮಾನಗಳಲ್ಲಿ ಹಿಂದೂಗಳಲ್ಲಿ ಕನ್ಯಾಶುಲ್ಕವು ಮಾಯವಾಗಿದೆ. ಇದಕ್ಕೆ ಬದಲಾಗಿ ವರದಕ್ಷಿಣೆಯು ಅಸ್ತಿತ್ವಕ್ಕೆ ಬಂದಿದೆ. ವರದಕ್ಷಿಣೆ ಎಂದರೆ ವಧು ಅಥವಾ ವಧುವಿನ ಕಡೆಯವರು ವರನಿಗೆ ನೀಡಬಹುದಾದ ಹಣ ಮತ್ತು ವಸ್ತುಗಳನ್ನು ವರದಕ್ಷಿಣೆ ಎನ್ನುವರು. ಈ ಪದ್ಧತಿ ಅಸ್ತಿತ್ವಕ್ಕೆ ಬರಲು ಕಾರಣಗಳೆಂದರೆ ಸಮುದಾಯದಲ್ಲಿ ಪುರುಷ ಪ್ರಾಧಾನ್ಯತೆ ಹೆಚ್ಚಿರುವುದರಿಂದ ಈ ಪದ್ದತಿ ಬೆಳೆದು ಬಂದಿದೆ.

* ಒಳಬಾಂಧವ್ಯ ವಿವಾಹ ಪದ್ಧತಿಯು ವರದಕ್ಷಿಣೆ ಪದ್ಧತಿಗೆ ಪುಷ್ಠಿ ನೀಡಿದೆ.
* ಸಮುದಾಯದಲ್ಲಿ ಉತ್ತಮ ಶಿಕ್ಷಣ, ಹುದ್ದೆಗಳು ಹಾಗೂ ಸರ್ಕಾರಿ ಹುದ್ದೆಗಳನ್ನು ಪಡೆದಿರುವವರ ಪ್ರಮಾಣವು ಅಲ್ಪವಾಗಿರುವುದರಿಂದ ಇವರಲ್ಲಿ ವರನನ್ನು ಆಯ್ಕೆ ಮಾಡುವಲ್ಲಿ ಸ್ಪರ್ಧೆ ಅನಿವಾರ್ಯವಾಗಿದ್ದೂ ವರದಕ್ಷಿಣೆ ಪದ್ದತಿ ಅಸ್ತಿತ್ವಗೊಂಡಿದೆ.

* ಬಡವರಿಗಿಂತ ಶ್ರೀಮಂತರಲ್ಲಿ ಅನಕ್ಷರಸ್ಥರಿಗಿಂತ ಸಾಕ್ಷರಸ್ಥರಲ್ಲಿಯೇ ಈ ಪದ್ಧತಿಯು ಹೆಚ್ಚಿದೆ.

ಒಟ್ಟಿನಲ್ಲಿ ಆಧುನಿಕತೆಗೆ ತಕ್ಕಂತೆ ಸಜ್ಜನ ಗಾಣಿಗರು ಕೂಡ ವಧುದಕ್ಷಿಣೆ ಮರೆತು ಆ ಸ್ಥಾನದಲ್ಲಿ ವರ ದಕ್ಷಿಣೆಯನ್ನು ಅಸ್ತಿತ್ವಕ್ಕೆ ತಂದಿದ್ದಾರೆ. ಇಂದಿನ ದಿನಮಾನಗಳಲ್ಲಿ ಸರ್ಕಾರಿ ನೌಕರಿ ಪಡೆಯಲು ಹಣವು ಬೇಕೆ ಬೇಕು. ತನ್ನ ಅಳಿಯನಿಗೆ ಉತ್ತಮ ಹುದ್ದೆ ಸಿಗುತ್ತದೆ ಎಂದರೆ ಹೆಣ್ಣಿನವರು ಸಾಲವನ್ನು ಮಾಡಿಯಾದರೂ ವರದಕ್ಷಿಣೆ ಕೊಡುತ್ತಾರೆ. ಇಂದು ಕನ್ಯೆಯ ತಂದೆಯಾದವನು ವರನಿಗೆ ಅಥವಾ ವರನಕಡೆಯವರಿಗೆ ವರದಕ್ಷಿಣೆ ಕೊಟ್ಟು. ತನ್ನ ಮಗಳಿಗೆ ಯಾವುದೇ ಕೊರತೆ ಬೀಳದಂತೆ ವರನಿಗೆ ನೋಡಿಕೊಳ್ಳಲು ತಿಳಿಸುತ್ತಾನೆ.

೧೯೬೧ರಲ್ಲಿ ವರದಕ್ಷಿಣೆ ಕೊಡುವುದು ಮತ್ತು ತೆಗೆದು ಕೊಳ್ಳುವುದು ಅಪರಾಧವೆಂದು ಭಾರತೀಯ ಸಂವಿಧಾನವು ತಿಳಿಸಿದೆ. ಆದರೂ ಸರಿಯಾದ ಸಾಕ್ಷ್ಯಾಧಾರಗಳು ಇಲ್ಲದೆ ಇಂದಿಗೂ ಕೂಡ ಈ ಸಮುದಾಯದಲ್ಲಿ ವರದಕ್ಷಿಣೆ ಅಸ್ತಿತ್ವದಲ್ಲಿ ಇದೆ ಎನ್ನಬಹುದು.

**ವಿಧವಾ ಮರುವಿವಾಹದಲ್ಲಿ ಆಗಿರುವ ಬದಲಾವಣೆಗಳು**

ಗಂಡ ಸತ್ತವಳನ್ನು ವಿಧವೆ ಎನ್ನುತ್ತೇವೆ. ಕರಿ ಗಾಣಿಗರಲ್ಲಿ ಮತ್ತು ಜೋಡಿ ಮತ್ತುಜ್ಯೋತಿ ಗಾಣಿಗರಲ್ಲಿ ಗಂಡ ಸತ್ತವಳಿಗೆ ಮರು ಮದುವೆ ಮಾಡಿಕೊಳ್ಳಲು ಅವಕಾಶವಿದೆ. ಈ ಸಮುದಾಗಳಲ್ಲಿ ಹೆಂಡತಿಸತ್ತ ಗಂಡು ವಿಧುರ ಮತ್ತು ವಿಧವೆ ಇವರಿಬ್ಬರಿಗೂ ಪುನಃ ವಿವಾಹ ಮಾಡಿಕೊಳ್ಳಲು ಅವಕಾಶವಿದೆ.

ಸಜ್ಜನ ಗಾಣಿಗರಲ್ಲಿ ವಿಧುರ ಗಂಡಿಗೆ ಪುನರ್ ವಿವಾಹ ಮಾಡಿಕೊಳ್ಳಲು ಅವಕಾಶವಿದ್ದು, ಮಹಿಳೆಗೆ ಮಾತ್ರ ಸಹ ಸಜ್ಜನ ಗಾಣಿಗರಲ್ಲಿ ನೂರಕ್ಕೆ ನೂರು ಭಾಗ ಅವಕಾಶವನ್ನು ಕೊಟ್ಟಿಲ್ಲ. ಇಂದಿಗೂ ಸಹ ಈ ಆಚರಣೆಯು ಮುಂದುವರೆದು ಕೊಂಡು ಬಂದಿರುತ್ತದೆ.

ಸಜ್ಜನ ಗಾಣಿಗರಲ್ಲಿ ವಿಧವಾ ಮರು ವಿವಾಹಕ್ಕೆ ಅಡ್ಡಿಯಾಗಿರುವ ಅಂಶಗಳು. ೧. ಮೊದಲ ಗಂಡನಿಂದ ಹುಟ್ಟಿದ ಮಕ್ಕಳನ್ನು ಸಾಕುವ ಜವಾಬ್ದಾರಿ ವಿಧವೆಯ ಮೇಲಿರುತ್ತದೆ. ಮರು ವಿವಾಹದಲ್ಲಿ ಬಂದ ಗಂಡನು ಮೊದಲ ಗಂಡನಿಂದ ಹುಟ್ಟಿದ ಮಕ್ಕಳನ್ನು ಸರಿಯಾಗಿ ಸಾಕುತ್ತಾನೆ ಎಂದು ಹೇಳಲು ಬರುವುದಿಲ್ಲ. ೨. ವಿಧವಾ ಮಹಿಳೆ ತನ್ನ ಮೊದಲ ಗಂಡನ ಸ್ಮರಣೆಯಲ್ಲಿಯೇ ಮುಂದುವರೆದಲ್ಲಿ ಕುಟುಂಬದಲ್ಲಿ ತನ್ನ ಗಂಡನ ಆಸ್ತಿಯು ಹೆಂಡತಿಗೆ ವರ್ಗಾವಣೆಯಾಗಿ ಬರುತ್ತದೆ. ಅಕಸ್ಮಾತ್ ವಿಧವೆಯಾದವಳು ಮರು ಮದುವೆಯನ್ನು ಮಾಡಿಕೊಂಡರೆ ಮೊದಲನೆ ಗಂಡನ ಆಸ್ತಿಯಲ್ಲಿ ಆಸ್ತಿಯನ್ನು ಪಡೆಯಲು ತೊಂದರೆಯುಂಟಾಗುತ್ತದೆ. ೩. ವಿಧವೆ ಮರು ವಿವಾಹವನ್ನು ಮಾಡಿಕೊಂಡರೆ ಸಜ್ಜನ ಗಾಣಿಗ ಸಮುದಾಯವು ಆ ಮಹಿಳೆಗೆ ಗೌರವ, ಸ್ಥಾನಮಾನಗಳನ್ನು ಕೊಡುವುದಿಲ್ಲ, ೪. ಅವಿಭಕ್ತ ಕುಟುಂಬಗಳು ಸಜ್ಜನ ಗಾಣಿಗರಲ್ಲಿ ಹೆಚ್ಚಿರುವುದರಿಂದ ವಿಧವೆಯನ್ನು ಸಾಕುವ ಜವಾಬ್ದಾರಿಯನ್ನು ಅವಿಭಕ್ತ ಕುಟುಂಬವೇ ಹೊತ್ತು ಕೊಳ್ಳುವುದರಿಂದ ವಿಧವಾ ಮರುವಿವಾಹದ ಪ್ರವೇಶ ಉದ್ಭವಿಸುವುದಿಲ್ಲ.

ಆಧುನಿಕತೆಗೆ ತಕ್ಕಂತೆ ವಿಧವೆಯಾದಲ್ಲಿ ಮಕ್ಕಳಿಲ್ಲದಿದ್ದರೆ ತಮ್ಮ ಸಂಬಂಧಿಕರಲ್ಲಿಯೇ ಒಬ್ಬರನ್ನು ಆಯ್ಕೆ ಮಾಡಿಕೊಂಡು ಮರು ವಿವಾಹ ಮಾಡಿಕೊಳ್ಳುತ್ತಿದ್ದಾರೆ. ಆದರೆ ಸಜ್ಜನ ಗಾಣಿಗರಲ್ಲಿ ಇಂತಹ ಘಟನೆಗಳು ಬಹಳ ಕಷ್ಟ. ಆದರೂ ಅಲ್ಪಸ್ವಲ್ಪವಾದರೂ ವಿಧವಾ ಮರುವಿವಾಹದ ಪರಿವರ್ತನೆಯಾಗಿದೆ.

ಸಜ್ಜನ ಗಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಬಹು ಸಂಖ್ಯೆಯಲ್ಲಿದ್ದ ವಿಭಕ್ತ ಕುಟುಂಬಗಳು ಅಲ್ಪ ಪ್ರಮಾಣದಲ್ಲಿವೆ. ಅವಿಭಕ್ತ ಕುಟುಂಬಗಳಲ್ಲಿ ಪುರುಷ ಪ್ರಧಾನ ಲಕ್ಷಣಗಳನ್ನು ಒಳಗೊಂಡಿದ್ದು ಕರ್ತನಾದವನಿಗೆ ಹೆಚ್ಚು ಗೌರವ ಸ್ಥಾನವನ್ನು ನೀಡಲಾಗುತ್ತದೆ. ಇವರಲ್ಲಿ ಪುರುಷ ಪ್ರಧಾನ ಸಮಾಜವಾದ್ದರಿಂದ ವಿಧುರರಿಗೆ ಮರುವಿವಾಹ ಮಾಡಿಕೊಳ್ಳಲು ಅವಕಾಶವನ್ನು ನೀಡಿ ಮಹಿಳೆ ವಿಧವೆಗೆ ಮರು ವಿವಾಹಕ್ಕೆ ಅವಕಾಶ ಕೊಡದೇ ಇರುವುದು ಇದು ಒಂದು ಕಾರಣವಾಗಿದೆ.

ಸಜ್ಜನ ಗಾಣಿಗರಲ್ಲಿ ಲಿಂಗ ಅಸಮಾನತೆ ಇದೆ. ಕಾರಣ ಪುರುಷರಿಗೆ ಕೊಟ್ಟಷ್ಟು ಸ್ವತಂತ್ರ್ಯವನ್ನು ಹೆಣ್ಣು ಮಕ್ಕಳಿಗೆ ಕೊಡದಿರುವುದು ಲಿಂಗ ಅಸಮಾನತೆ ಮತ್ತು ತಾರತಮ್ಯಕ್ಕೆ ಕಾರಣವಾಗಿದೆ. ಪುರುಷರಿಗೆ ಕೊಟ್ಟಷ್ಟು ವಿದ್ಯಾಭ್ಯಾಸ ಕೊಡದಿರುವುದು ಎಲ್ಲಿಯೂ ಲಿಂಗ ಅಸಮಾನತೆ ಎದ್ದು ಕಾಣಿಸುವಂತದ್ದಾಗಿದೆ.

ಸಜ್ಜನ ಗಾಣಿಗರು ಕಾಲಮಾನಕ್ಕನುಗುಣವಾಗಿ ಬದಲಾಗುತ್ತಿದ್ದಾರೆ. ವಿಧವಾ ಮರು ವಿವಾಹದ ವಿಷಯದಲ್ಲಿ ನೂರಕ್ಕೆ ನೂರು ಭಾಗ ಬದಲಾಗದಿದ್ದರೂ ಈಗ ಮೊದಲಿನ ಸ್ಥಿತಿ ಉಳಿದುಕೊಂಡಿಲ್ಲ. ವಿಧವೆ ಬಯಸಿದ್ದಲ್ಲಿ ತಮ್ಮ ರಕ್ತ ಸಂಬಂಧಿಗಳಲ್ಲಿಯೇ ಗಂಡನ್ನು ನೋಡಿ ಮರು ವಿವಾಹ ಮಾಡುತ್ತಿರುವುದು ಗೋಚರವಾಗುತ್ತಿದೆ.

ಅದರಲ್ಲಿಯೂ ವಿಧವೆಯಾದ ಮಹಿಳೆಗೆ ಇನ್ನೂ ಮಕ್ಕಳಾಗದಿದ್ದರೆ ಎಲ್ಲಾ ದೃಷ್ಠಿಯಿಂದಲೂ ವಿಧವಾ ಮರು ವಿವಾಹಕ್ಕೆ ಉತ್ತಮ ಅವಕಾಶವಾದಂತಾಗುತ್ತದೆ. ಒಟ್ಟಾರೆಯಾಗಿ, ಇತ್ತೀಚಿನ ದಿನಮಾನಗಳಲ್ಲಿ ಸಜ್ಜನ ಗಾಣಿಗರಲ್ಲಿಯೂ ವಿಧವಾ ಮರುವಿವಾಹದಲ್ಲಿ ನೂರಕ್ಕೆ ನೂರರಷ್ಟು ಬದಲಾಗದಿದ್ದರೂ ಅಲ್ಪಸ್ವಲ್ಪವಾದರೂ ವಿಧವಾ ಮರುವಿವಾಹದಲ್ಲಿ ಪರಿವರ್ತನೆಯಾಗಿರುವುದು ಪ್ರಗತಿಯ ಸಂಖ್ಯೆತವಾಗಿದೆ.

**ಹಿಂದೂ ಸಜ್ಜನ ಗಾಣಿಗರ ವಿವಾಹದ ಇತ್ತೀಚಿನ ಬದಲಾವಣೆಗಳು**

ಹಿಂದೂ ಸಜ್ಜನ ಗಾಣಿಗರಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಇತ್ತೀಚಿನ ವರ್ಷಗಳಲ್ಲಿ ಅದರಲ್ಲಿಯೂ ಸ್ವಾತಂತ್ರ್ಯಾನಂತರ ಗಣನೀಯವಾದ ಪರಿವರ್ತನೆಗಳಾಗಿವೆ. ವಿವಾಹದ ಮೂಲ ಸ್ವರೂಪ ಮತ್ತು ಅವರ ಹಿಂದಿನ ಮೂಲಭೂತ ಭಾವನೆಗಳು ಹಾಗೂ ನಂಬಿಕೆಗಳಲ್ಲಿ ಬದಲಾಗದೇ ಇದ್ದರೂ ಅದಕ್ಕೆ ಸಂಬಂಧಿಸಿದ ಆಚರಣೆಗಳಲ್ಲಿ ಹಾಗೂ ನಿಯಮಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಅಂತಹ ಬದಲಾವಣೆಗಳ ಬಗೆಗಿನ ಒಂದು ಪಕ್ಷಿನೋಟ ಇಲ್ಲಿದೆ.

ಹಿಂದೂ ಸಜ್ಜನ ಗಾಣಿಗರಲ್ಲಿ ಪರಂಪರಾಗತ ವಿವಾಹದ ಪ್ರಕಾರಗಳು (ಆರ್ಶ, ರಾಕ್ಷಸ, ಪೈಶಾಚ, ದೈವ ಇತ್ಯಾದಿ) ಈಗ ಕಣ್ಮರೆಯಾಗಿದ್ದೂ ಪರಿಷ್ಕೃತ ಬ್ರಹ್ಮ ವಿವಾಹವು ಮಾತ್ರ ಆಚರಣೆಯಲ್ಲಿದೆ. ಗಾಂಧರ್ವ ವಿವಾಹದಲ್ಲಿ ಕಾಣುವಂತೆ ಯುವಕ-ಯುವತಿಯರು ಪರಸ್ಪರ ಪ್ರೀತಿಸಿ ವಿವಾಹವಾಗುವ ಪ್ರಕರಣಗಳಿಗೂ

ಕಡಿಮೆಯಿಲ್ಲ. ಇಂತಹ ವಿವಾಹಗಳನ್ನು ಅನಿವಾರ್ಯವಾಗಿ ತಂದೆ-ತಾಯಿಯವರು ಒಪ್ಪಿಕೊಂಡು ವಧೂವರರನ್ನು ಹರಸುವುದೂ ಇದೆ. ಈ ಬಗೆಯ ವಿವಾಹಗಳನ್ನು ಪ್ರೇಮ ವಿವಾಹ (Love Marriage) ಎಂದು ಕರೆಯಲಾಗುತ್ತಿದೆಯೇ ಹೊರತು ಗಾಂಧರ್ವ ವಿವಾಹವೆಂದಲ್ಲ.

ವಿವಾಹದ ವಯಸ್ಸಿಗೆ ಸಂಬಂಧಿಸಿದಂತೆ ಬದಲಾವಣೆಗಳಾಗಿದ್ದು ಬಾಲ್ಯ ವಿವಾಹಗಳಂತೂ ಪೂರ್ಣವಾಗಿ ಕಣ್ಮರೆಯಾಗಿವೆ. ಆರ್ಥಿಕ ಒತ್ತಡ, ಸಾಮಾಜಿಕ ಅಗತ್ಯತೆ, ಹಾಗೂ ಶಾಸನಾತ್ಮಕ ನಿಯಂತ್ರಣದಿಂದಾಗಿ ಬಾಲ್ಯ ವಿವಾಹದ ಬದಲು ಪ್ರೌಢ ವಿವಾಹಗಳೇ ಎಲ್ಲೆಡೆ ಕಾಣಬರುತ್ತಿವೆ. ಕಾನೂನಿನ ಕಣ್ಣಿಗೆ ಬೀಳದಂತೆ ಅಶಿಕ್ಷಿತ ಕೆಳಜಾತಿಗಳಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಿಗೆ, ವಿವಾಹ ಮಾಡುವುದು ಅಲ್ಲಲ್ಲಿ ಕಾಣಬರುತ್ತಿದ್ದರೂ ಮೇಲ್ಜಾತಿಗಳಲ್ಲಿ ಹಾಗೂ ಶಿಕ್ಷಿತರಲ್ಲಿ ಅದು ಸಂಪೂರ್ಣವಾಗಿ ನಿಂತು ಹೋಗಿದೆ. ಪ್ರಚಲಿತ ಶಾಸನದ ಪ್ರಕಾರ ೨೧ ವರ್ಷಕ್ಕೂ ಕಡಿಮೆ ವಯಸ್ಸಿನ ಯುವಕರು ಹಾಗೂ ೧೮ ವರ್ಷಕ್ಕೂ ಕಡಿಮೆ ವಯಸ್ಸಿನ ಯುವತಿಯರು ವಿವಾಹವಾಗುವಂತಿಲ್ಲ. ಈ ಶಾಸನದ ಒತ್ತಡಕ್ಕಿಂದ ಇಂದಿನ ಶೈಕ್ಷಣಿಕ ಹಾಗೂ ಆರ್ಥಿಕ ಕಾರಣಕ್ಕಾಗಿ ವಿಳಂಬಿತ ವಿವಾಹಗಳೇ ಇಂದು ಸಾಮಾನ್ಯವಾಗಿವೆ. ಪದವಿ ಹಾಗೂ ಸ್ನಾತಕೋತ್ತರ ಪದವಿಯನ್ನು ಮುಗಿಸಿ ಉದ್ಯೋಗಗಳಿಗಾಗಿ ಒಂದೆರಡು ವರ್ಷ ಯತ್ನಿಸಿ ಬಳಿಕ ವಿವಾಹವಾಗುವಾಗ ಸಾಮಾನ್ಯವಾಗಿ ಯುವಕರಿಗೆ ೨೬-೨೮ ಹಾಗೂ ಯುವತಿಯರಿಗೆ ೨೨-೨೪ ವರ್ಷಗಳೇ ಕಳೆದಿರುತ್ತವೆ. ಈ ಮಾತು ಮೇಲ್ಜಾತಿಗಳ ಶಿಕ್ಷಿತ ಕುಟುಂಬಗಳ ಹಾಗೂ ಮಧ್ಯಮ ವರ್ಗ ಹಾಗೂ ಮೇಲ್ವರ್ಗಗಳಿಗೆ ಹೆಚ್ಚು ಅನ್ವಯಿಸುತ್ತದೆ. ಹಿಂದೂ ಸಜ್ಜನ ಗಾಣಿಗರಲ್ಲಿಯೂ ಶೈಕ್ಷಣಿಕ ಹಾಗೂ ಆರ್ಥಿಕ ಕಾರಣಗಳಿಂದ ವಿವಾಹದ ವಯಸ್ಸು ತನ್ನಷ್ಟಕ್ಕೆ ತಾನೇ ಯುವಕ ಯುವತಿಯರಲ್ಲಿ ಹೆಚ್ಚಾಗುತ್ತಿದೆ.

**ಸಂಗಾತಿಯ ಆಯ್ಕೆಯಲ್ಲಿನ ಪರಿವರ್ತನೆ:-** ಜೀವನ ಸಂಗಾತಿಯ ಆಯ್ಕೆಯ ಪ್ರಕ್ರಿಯೆಯಲ್ಲಿ ಮೂರು ಬಗೆಯ ಪರಿವರ್ತನೆಗಳನ್ನು ಕಾಣಬಹುದು.

೧. ಆಯ್ಕೆಯ ಕ್ಷೇತ್ರ (Field of Selection) ಸಂಕುಚಿತತೆಯಿಂದ ವಿಸ್ತಾರವಾಗುತ್ತಿದೆ. ಅಂತರ್ಜಾತೀಯ ವಿವಾಹಗಳೂ ಇತ್ತೀಚಿನ ದಿನಮಾನಗಳಲ್ಲಿ ನಡೆಯಬಹುದಾಗಿದೆ.

೨. ಆಯ್ಕೆ ಮಾಡುವುದು ಯಾರು? (Party to Selection) ಎಂಬ ಪ್ರಶ್ನೆಗೆ ಸಂಬಂಧಿಸಿದ ಬದಲಾವಣೆ, ಸಜ್ಜನ ಗಾಣಿಗರಲ್ಲಿ ತಾಯ್ತಂದೆಯರು ಆಯ್ಕೆ ಮಾಡುವ ಪರಿಪಾಠ ಮರೆಯಾಗಿ ಯುವಕ ಹಾಗೂ ಯುವತಿಯರು ಒಂದುಗೂಡಿ ಮತ್ತು ವ್ಯಕ್ತಿಗತವಾಗಿ ಜೀವನ ಸಂಗತಿಗಳನ್ನು ಆಯ್ಕೆ ಮಾಡುವ ಕ್ರಮ ಜನಪ್ರಿಯವಾಗುತ್ತಿದೆ.

೩. ಆಯ್ಕೆಯ ನೆಲೆ ಮತ್ತು ಮಾನದಂಡವೂ ಬದಲಾಗಿದೆ, (Criteria of selection) ಆಯ್ಕೆಯ ಪ್ರಶ್ನೆಯಲ್ಲಿ ಇಂದು ಕೌಟುಂಬಿಕ ವಿಚಾರಗಳಿಗಿಂತಲೂ, ವ್ಯಕ್ತಿಗತವಾದ ಪರಿಗಣನೆಯೇ ಮುಖ್ಯವಾಗಿರುತ್ತದೆ. ಈ ಕಾರಣದಿಂದಲೇ ತಾಯ್ತಂದೆಯರಿಂದ ಮತ್ತು ಹಿರಿಯರಿಂದ ಪೂರ್ವ ಯೋಜಕ ಹಾಗೂ ವ್ಯವಸ್ಥಿತ

ವಿವಾಹಗಳಿಗಿಂತಲೂ (Pre-arranged Marriage) ಯುವಕ-ಯುವತಿಯರ ಪರಸ್ಪರ ಒಪ್ಪಿಗೆಯಿಂದ ನಡೆಯುವ ಹಾಗೂ ಪ್ರೇಮ ವಿವಾಹಗಳ (Love Marriage) ಸಂಖ್ಯೆಯು ಹೆಚ್ಚುತ್ತಾ ಬರುತ್ತಿದೆ.

ಹಿಂದೂ ಸಜ್ಜನ ಗಾಣಿಗರಲ್ಲಿ ವಿವಾಹದ ವಿಧಿಯಲ್ಲಿ ಬದಲಾವಣೆ (Change in the Hindu Sajjana Ganiga Marriage Rituals) ವಿವಾಹದ ವಿಧಿಯಲ್ಲಿ ಕೆಲವು ಬದಲಾವಣೆಗಳಿಗೆ ಒಳಗಾಗಿವೆ. ಅತ್ಯವಶ್ಯ ವಿಧಿಗಳೆನಿಸಿರುವ ವಾಗ್ದಾನ, ಕನ್ಯಾದಾನ, ಪಾಣಿಗ್ರಹಣ, ಸಪ್ತಪದಿ, ಮಾಂಗಲ್ಯಾಧಾರಣೆ, ಮುಂತಾದವುಗಳನ್ನು ಇಂದಿಗೂ ಆಚರಿಸಲಾಗುತ್ತಿದೆ. ಆದರೆ ವಿವಾಹ ಸಮಾರಂಭಕ್ಕೆ ಸಂಬಂಧಿಸಿದ ನೂರಾರು ಚಿಕ್ಕಪುಟ್ಟ ಪದ್ದತಿಗಳಲ್ಲಿ ಹಲವನ್ನು ಕೈಬಿಡಲಾಗಿದೆ. ಮತ್ತೆ ಕೆಲವನ್ನು ಸಾಂಕೇತಿಕವಾಗಿ ಆಚರಿಸಲಾಗುತ್ತಿದೆ. ಇನ್ನೂ ಕೆಲವನ್ನು ನವೀಕರಿಸಲಾಗಿದೆ. ಸಾಂಪ್ರದಾಯಿಕ ವಿವಾಹಗಳನ್ನು ಮೂರು ಅಥವಾ ನಾಲ್ಕು ದಿವಸಗಳವರೆಗೆ ಬಹಳ ಸಡಗರ ಸಂಭ್ರಮಗಳಿಂದ ಆಚರಿಸಲಾಗುತ್ತಿದೆ. ಈಗ ಒಂದು ದಿನಕ್ಕೆ, ಕೆಲವೊಮ್ಮೆ ಕೆಲವು ಗಂಟೆಗಳಿಗೆ ಮಾತ್ರ ಸೀಮಿತವಾಗಿರುವುದು. ಈ ಹಿಂದೆ ಕೇವಲ ಕುಲಸಂಬಂಧಿಕರು ಮತ್ತು ಸ್ವಜಾತಿ ಬಂಧುಗಳು ಮಾತ್ರ ವಿವಾಹ ಸಮಾರಂಭದಲ್ಲಿ ಭಾಗಿಗಳಾಗುತ್ತಿದ್ದಾರೆ. ಈಗ ಅದರಲ್ಲಿ ಸ್ನೇಹಿತರು, ಅನ್ಯ ಜಾತಿಗಳಿಗೆ, ಧರ್ಮಗಳಿಗೆ ಸೇರಿದ ಇಷ್ಟ ಮಿತ್ರರೂ ಪಾಲ್ಗೊಳ್ಳುತ್ತಿದ್ದಾರೆ. ಹಿಂದೂ ಸಜ್ಜನ ಗಾಣಿಗರಲ್ಲಿ ಈಗ ಮನೆ ಮುಂದಿನ ವಿವಾಹಗಳು ಕಡಿಮೆಯಾಗುತ್ತಿದ್ದು ದೇವಸ್ಥಾನಗಳಲ್ಲಿ ಹಾಗೂ ಕಲ್ಯಾಣ ಮಂಟಪಗಳಲ್ಲಿ ನೆರವೇರುತ್ತಿವೆ.

ಬಹುತೇಕ ವಿವಾಹಗಳು ಒಳಪಂಗಡ ವಿವಾಹಗಳೇ ಆಗಿವೆ. ಜಾತಿ ಚೌಕಟ್ಟಿನಿಂದ ಹೊರಗಡೆ ವಿವಾಹವಾಗುವುದು ಇಂದಿಗೂ ಸಾಮಾನ್ಯ ಆಚರಣೆಯಾಗಿಲ್ಲ. ಅಂತಹ ಪ್ರಕರಣಗಳು ಅಪರೂಪ ಅದಾಗಲೂ ಒಂದೇ ಜಾತಿಯ ಒಳಗಿನ ಹಲವು ಬಿನ್ನತೆಗಳನ್ನು ಮುಖ್ಯವಾಗಿ ಉಪಜಾತಿ ವ್ಯತ್ಯಾಸಗಳನ್ನು ಈಗ ಸಾಮಾನ್ಯವಾಗಿ ಅಲಕ್ಷಿಸಲಾಗುತ್ತಿದೆ. ವಿಭಿನ್ನ ಉಪಜಾತಿಗಳ ನಡುವೆ ವಿವಾಹಗಳು ನಡೆಯುವುದು ಈಗ ಸಾಮಾನ್ಯವಾಗಿದೆ. ಈಗ ಅದಕ್ಕೆ ಯಾರ ಆಕ್ಷೇಪವೂ ಇಲ್ಲ. ಅಂತರ್ಜಾತೀಯ ವಿವಾಹಗಳ ಬಗ್ಗೆ ಹುಬ್ಬೆರಿಸಿ ನೋಡುವ ಪರಿಪಾಠ ಅಳಿದಿಲ್ಲ. ಅಂತರ್ಜಾತೀಯ ವಿವಾಹಗಳನ್ನು ಕಾನೂನುಬದ್ಧಗೊಳಿಸಲಾಗಿದ್ದರೂ ಅವು ಜನಪ್ರಿಯವಾಗಲಿಲ್ಲ. ಹರಿಜನ ಕನ್ಯೆಯರನ್ನು ವಿವಾಹವಾಗುವ ಸವರ್ಣಯರಿಗೆ ಆರ್ಥಿಕ ನೆರವು ನೀಡುವ ಕರ್ನಾಟಕ ಸರ್ಕಾರದ ಯೋಜನೆಯೂ ಫಲಪ್ರದವಾಗಿಲ್ಲ, ಜಾತಿಯ ಪರಿಧಿಯೊಳಗಡೆಯೇ ವರನನ್ನು ಹುಡುಕಬೇಕಾದ ಅನಿವಾರ್ಯತೆಯು ವರದಕ್ಷಿಣೆಯಂತಹ ಪಿಡುಗಿಗೆ ಮತ್ತಷ್ಟು ಒತ್ತಾಸೆ ನೀಡಿದೆ. ವಿವಾಹದ ಸ್ವರೂಪ, ರೀತಿ ನೀತಿಗಳು ಹಾಗೂ ವಿಧಿ ವಿಧಾನಗಳು ಜಾತಿ ಜಾತಿಗಳಿಗೆ ಬೇರೆಯೇ ಆಗಿರುತ್ತವೆ.ಸಂಸ್ಕೃತೀಕರಣದ ಪ್ರಭಾವದಿಂದ ಕೆಳಜಾತಿಗಳು ಮೇಲ್ಜಾತಿಗಳ ವಿವಾಹದ ಕ್ರಮಗಳನ್ನು ಅನುಕರಣೆ ಮಾಡುವ ಪ್ರವೃತ್ತಿಯೂ ಕಾಣಬರುತ್ತಿದೆ.

**ವಧು ದಕ್ಷಿಣೆಯ ಬದಲಾಗಿ ವರದಕ್ಷಿಣೆ ಆಚರಣೆ:-** ಹಿಂದಿನ ಕಾಲದಲ್ಲಿ ವರನ ಕಡೆಯವರು ವಧುವಿನ ತಂದೆ ತಾಯಿಗಳಿಗೆ ಮತ್ತು ವದುವಿಗೆ ವಧು ದಕ್ಷಿಣೆ ಕೊಟ್ಟು ವಿವಾಹ ಮಾಡಿಕೊಳ್ಳಬೇಕಿತ್ತು. ಈಗ ವಧು

ದಕ್ಷಿಣೆಯ ಬದಲಾಗಿ ವರದಕ್ಷಿಣೆ ಆಚರಣೆ ಸಜ್ಜನ ಗಾಣಿಗರಲ್ಲಿಯೂ ಹೆಚ್ಚುತ್ತದೆ. ಶಾಸನಾತ್ಮಕವಾಗಿ ೧೯೬೧ ರಲ್ಲಿ ವರದಕ್ಷಿಣೆಯನ್ನು ಕೊಡುವುದು ಮತ್ತು ತೆಗೆದು ಕೊಳ್ಳುವುದು ಎರಡೂ ಕಾನೂನು ಬಾಹಿರ ಕ್ರಿಯೆಗಳೆಂದು ತಿಳಿಸಿದ್ದಾಗಲೂ ಇಂದು ಸಜ್ಜನ ಗಾಣಿಗರಲ್ಲಿ ವರದಕ್ಷಿಣೆಯು ರೂಢಿಗತ ಆಚರಣೆಯಾಗುತ್ತಿದೆ. ಇಂದಿನ ವಿವಾಹಗಳೂ ಹೆಚ್ಚು ಹೆಚ್ಚು ಆಂರಂಭವಾಗುತ್ತಿದ್ದು ಹೆಚ್ಚು ಖರ್ಚಿನವುಗಳಾಗುತ್ತಿವೆ. ಹಿಂದಿನ ದಿನಮಾನಗಳಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಿದ್ದು ಖರ್ಚಿನ ಕಡಿಮೆಗೋಸ್ಕರ ಸಾಮೂಹಿಕ ವಿವಾಹಗಳನ್ನು ಆಚರಿಸುತ್ತಿದ್ದರು. ಆದರೆ ಇಂದು ಮಠ ಮಾನ್ಯಗಳಲ್ಲಿ ನಡೆಯುವ ಸಾಮೂಹಿಕ ವಿವಾಹಗಳಲ್ಲಿ ವಿವಾಹಗಳನ್ನು ನೆರವೇರಿಸಿ ಕೊಳ್ಳುವುದು ಚಾಲ್ತಿಯಲ್ಲಿದೆ.

ಇಂದಿನ ವಿವಾಹಗಳು ಪ್ರತಿಷ್ಠೆಯ ಪ್ರದರ್ಶನಕ್ಕಾಗಿ ಹಣದ ದುರ್ವ್ಯಯವಾಗುತ್ತಿದ್ದು ವಿವಾಹ ಸಮಾರಂಭಗಳು ದುಭಾರಿಯಾಗುತ್ತಾ ಬಂದಿವೆ. ಇಂದಿನ ದಿನಮಾನಗಳಲ್ಲಿ ವಿವಾಹದ ಆರ್ಥಿಕ ಅಂಶಗಳಲ್ಲಿ ಪರಿವರ್ತನೆಗಳಾಗಿವೆ. (Change in economic Aspect of Marriage).

ಶಾಸನಾತ್ಮಕವಾಗಿ ವಿವಾಹದಲ್ಲಿ ವಿವಾಹ ವಿಚ್ಛೇದನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದರೂ ಸಜ್ಜನ ಗಾಣಿಗರಲ್ಲಿ ವಿವಾಹ ವಿಚ್ಛೇಧನಗಳಾಗುವುದು ಬಹಳಷ್ಟು ಕಡಿಮೆ. ಇಂದು ವೈವಾಹಿಕ ಬಂಧವು ಸಾಯುವವರೆಗೂ ಮತ್ತು ಸತ್ತ ಮೇಲೆಯೂ ಮುಂದುವರೆಯ ಬೇಕೆನ್ನುವ ಆಚರಣೆಗಳಲ್ಲಿ ಬದಲಾವಣೆಗೂ ಸಜ್ಜನ ಗಾಣಿಗರಲ್ಲಿ ಗೋಚರಿಸುತ್ತಿವೆ. ಇತ್ತೀಚಿನ ಆಧುನಿಕ ದಿನಮಾನಗಳಲ್ಲಿ ಪಾತಿವ್ರತ್ಯದ ಮೌಲ್ಯಗಳು ದುರ್ಬಲಗೊಳ್ಳುತ್ತಿದ್ದು, ಈಗ ಸ್ತ್ರೀ ಪುರುಷರಲ್ಲಿ ಕಂಡು ಬರುತ್ತಿರುವ ಸಮಾನತೆಯ ಕಲ್ಪನೆಯು ಹೆಚ್ಚುತ್ತಿದೆ.

ಬದಲಾಗುತ್ತಿರುವ ದೃಷ್ಠಿಕೋನ (The Changing Attitde) ಸಾಮಾಜಿಕ ಕಟ್ಟು ಕಟ್ಟಳೆಗಳು, ಸರಕಾರದ ಶಾಸನಗಳು, ಸಮಾಜ ಸುಧಾರಕರ ಪ್ರಯತ್ನಗಳು, ಜನಾಭಿಪ್ರಾಯದ ಕ್ರೋಢೀಕರಣೆಯ ಸಾಹಸಗಳು ಅಥವಾ ಪರಿಸ್ಥಿತಿಯ ಅಗತ್ಯತೆಗಳು ಹೀಗೆ ಅನೇಕ ಕಾರಣಗಳಿಂದ ವಿವಾಹದ ಬಗೆಗಿನ ದೃಷ್ಟಿಕೋನ ಬದಲಾಗಿದೆ ಎಂಬುದಂತೂ ಖಚಿತ. ಸ್ತ್ರೀಯರು ತಾವು ಸ್ವಂತ ವಿವಾಹ ವಿಚ್ಛೇದನ ಬಯಸದಿದ್ದರೂ ಅಂತಹ ಅವಕಾಶವನ್ನು ಸ್ತ್ರೀಯರಿಗೆ ಕಾನೂನು ಬದ್ಧವಾಗಿ ನೀಡಿರುವುದು ಸೂಕ್ತವಾಗಿಯೇ ಇದೆ ಎಂಬುದು ಬಹುತೇಕ ಸ್ತ್ರೀಯರ ಅಭಿಪ್ರಾಯವಾಗಿದೆ. ವಿಧವಾ ಸ್ತ್ರೀಯರನ್ನು ಸಜೀವವಾಗಿ ಸುಡುವ ಸತಿ ಪದ್ದತಿಗೆ ಅವರ ವಿರೋಧವಿದೆ. ಹಿಂದಿನ ಸಂಪ್ರದಾಯ, ಸಾಮಾಜಿಕ ಕಟ್ಟು ಕಟ್ಟಳೆಗಳನ್ನು ಅವರು ಅಂಧರಾಗಿ ಪವಿತ್ರ ಕರ್ತವ್ಯವೆಂದು ಒಪ್ಪಿಕೊಂಡು ಇಂದು ನಡೆಯಲಾರರು. ಸಂದರ್ಭ ಬಿದ್ದರೆ ಕಾನೂನಿನ ನೆರವನ್ನು ಪಡೆಯಲು ಸಿದ್ದರು. ಇಂದಿನ ದಿನಗಳಲ್ಲಿ ಸ್ತ್ರೀ-ಪುರುಷರಿಗೆ ಸಮಾನವಾದ ಅವಕಾಶಗಳು ಹಾಗೂ ಸ್ವತಂತ್ರ್ಯತೆಯು ಸಿಗುತ್ತಿದೆ. ಎಲ್ಲಿಸ್ ರವರು ಹೇಳುವಂತೆ ಸ್ವಾತಂತ್ರ್ಯವೆಂಬುದು ವಿವಾಹದ ಬದ್ರತೆಯನ್ನೆಂದಿಗೂ ನಾಶಪಡಿಸುವ ಬದಲಾಗಿ, ಅದನ್ನದು ಮತ್ತಷ್ಟು ಸದೃಢಗೊಳಿಸುವುದು ಎಂದಿದ್ದಾರೆ.

ಬದಲಾಗುತ್ತಿರುವ ಪರಿಸ್ಥಿತಿಯ ಸುಳಿಯಲ್ಲಿ ವಿವಾಹದ ನೈತಿಕತೆಯು, ವಿವಾಹದ ಆದರ್ಶಗಳು, ವಿಧವಾ ಪುನರ್ ವಿವಾಹ ಹಾಗೂ ವಿವಾಹ ವಿಚ್ಛೇದನಗಳಿಗೆ ಅವಕಾಶ ಕೊಟ್ಟಿದ್ದರೂ ಪಾಶ್ಚಿಮಾತ್ಯ ಸಮಾಜಗಳಲ್ಲಿರುವಂತೆ

ಇಲ್ಲಿ ದಿನ ನಿತ್ಯದ ಸುದ್ದಿಯಾಗಿಲ್ಲ. ಗಂಡಂದಿರ ದಾಯಸಿಯರಂತೆ ಗುಲಾಮರಂತೆ ಪತ್ನಿಯರು ಇಲ್ಲದಿರಬಹುದು, ಆದರೆ ತಮ್ಮ ಗಂಡಂದಿರ ಬಗ್ಗೆ ಅವರಿಗೆ ಆಧಾರವಿದೆ. ಧರ್ಮಶ್ರದ್ಧೆಯಿಂದ ಕೂಡಿದ ಗೌರವವಿದೆ. ನೈತಿಕವಾಗಿ ಅವರು ಒಬ್ಬರಿಗೊಬ್ಬರು ಬದ್ಧರಾಗಿದ್ದಾರೆ. ವಿವಾಹವು ಆಧುನಿಕ ದಿನದ ಬದಲಾವಣೆಗಳು ಏನೇ ಆಗಿದ್ದರೂ, ವಿವಾಹದ ಪವಿತ್ರತೆಯು ಕೊಚ್ಚಿ ಹೋಗುವ ಯಾವ ಸಾಧ್ಯತೆಯೂ ಇಲ್ಲ, ಅದು ಇಂದಿಗೂ ಸದೃಢವಾಗಿ ಉಳಿದುಕೊಂಡಿದೆ.

ಹಿಂದೂ ಸಜ್ಜನ ಗಾಣಿಗರಲ್ಲಿ ವಿವಾಹದ ಬಗೆಗಿನ ಸಾಂಪ್ರದಾಯಕ ನಂಬಿಕೆಗಳು ಅಷ್ಟಾಗಿ ಬದಲಾಗಿಲ್ಲ, ವಿವಾಹವನ್ನು ಒಂದು ಪವಿತ್ರ ಸಂಸ್ಕಾರ ವಿಧಿ ಎಂದೇ ಪರಿಗಣಿಸಲಾಗುತ್ತಿದೆ. ವಿವಾಹದ ನಂಟು ಒಂದು ಬ್ರಹ್ಮ ಗಂಟು, ಯಾವ ಹೆಣ್ಣಿಗೆ ಯಾವ ಗಂಡು ಎಂಬುದು ದೈವ ನಿಯಾಮಕ, ಒಳ್ಳೆಯ ಗಂಡ ಮತ್ತು ಒಳ್ಳೆಯ ಹೆಂಡತಿ ಸಿಗುವುದು, ಸಿಗದಿರುವುದು ಅವರವರ ಕರ್ಮಫಲ ಈ ಬಗೆಯ ಅಭಿಪ್ರಾಯಗಳು, ಇಂದಿಗೂ ಇವೆ. ಪಾಶ್ಚಿಮಾತ್ಯರಂತೆ ವಿವಾಹವನ್ನು ಒಂದು ಸಾಮಾಜಿಕ ಕಟ್ಟಳೆಯ ಒಪ್ಪಂದ, ಎಂದು ಪರಿಗಣಿಸುವುದಿಲ್ಲ. ಮೋಕ್ಷ ಪ್ರಾಪ್ತಿಗಾಗಿ ಅಲ್ಲದಿದ್ದರೂ ಕುಟುಂಬದ ರಥವನ್ನು ಮುನ್ನಡಿಸಲು ಪರಂಪರೆಯನ್ನು ಮುನ್ನಡೆಸಿಕೊಂಡು ಬರಲು ಗಂಡು ಸಂತಾನ ಬಯಕೆ ಇಂದಿಗೂ ಇದೆ. ಅದಾಗ್ಯೂ ಹೆಣ್ಣು ಮಕ್ಕಳನ್ನು ಅವಗಣಿಸುವುದಿಲ್ಲ.

ಒಟ್ಟಿನಲ್ಲಿ ಹಿಂದೂ ಸಜ್ಜನ ಗಾಣಿಗರಲ್ಲಿ ವೈವಾಹಿಕವಾಗಿ ಬದಲಾಗಿರುವುದಂತೂ ಸತ್ಯವಾಗಿದೆ ಇದಕ್ಕೆ ಕಾರಣಗಳು ಶಾಸನಗಳ ಪ್ರಭಾವ, ಆಧುನಿಕ ಶಿಕ್ಷಣ, ಕೈಗಾರೀಕರಣ, ನಗರೀಕರಣ, ಮುಂತಾದವುಗಳು ವಿವಾಹದಲ್ಲಿ ಬದಲಾವಣೆ ತರುವಲ್ಲಿ ಪ್ರಮುಖ ಪಾತ್ರವನ್ನುವಹಿಸಿವೆ.

**ಸಾವು/ಮರಣ**

ಮಾನವನ ಹುಟ್ಟಿನಂತೆ ಸಾವು ಅನಿವಾರ್ಯ. ಹುಟ್ಟು, ಸಾವು ಜೀವನದ ಎರಡು ಮುಖಗಳಿದ್ದಂತೆ. ಹುಟ್ಟು ಸಾವನ್ನು ಜೊತೆಗಿಟ್ಟು ಕೊಂಡೆ ಬರುತ್ತದೆ. ನಿರಾಶಾವಾದಿಯ ದೃಷ್ಠಿಯಲ್ಲಿ ಹುಟ್ಟಿನಿಂದ ಪ್ರಾರಂಭವಾಗುವ ಜೀವನ ಚಕ್ರ ಸಾವಿನತ್ತ ಚಲಿಸುತ್ತದೆ. ಹೀಗಾಗಿ ನಿರಾಶಾವಾದಿ ಏಕೆ ಬಾಳಬೇಕು ಎಂದಿದ್ದರೂ ಸಾಯಬೇಕಲ್ಲ ಎಂದು ಹತಾಶನಾದರೆ, ಅಶಾವಾದಿಯು ಜೀವನದ ಅಂತಿಮ ನಿಲ್ದಾಣವೇ ಸಾವು, ಅದು ಸಮೀಪಿಸುವುದರೊಳಗಾಗಿ ಬಾಳಿನ ಪ್ರತಿ ಕ್ಷಣವನ್ನು ಸಾರ್ಥಕ ಮಾಡಿಕೊಳ್ಳಬೇಕು ಎಂದು ಉತ್ಸಾಹದಿಂದ ಮುಂದುವರೆಯುತ್ತಾನೆ.

ಸಾವು ಅನಿವಾರ್ಯ ಎಷ್ಟೇ ದೀರ್ಘಕಾಲ ಬದುಕಿದ್ದರೂ ಒಂದು ದಿವಸ ಜೀವನ ನಾಟಕಕ್ಕೆ ಅಂತಿಮ ತೆರೆ ಎಳೆಯಬೇಕು. ಜೀವನದ ಹುಟ್ಟು ಸಾವುಗಳ ಮಧ್ಯೆ ಅನೇಕ ಘಟನಾವಳಿಗಳ ಒಂದು ಚಕ್ರ. ಹುಟ್ಟು ಆರಂಬಿಕ ನಿಲ್ದಾಣವಾದರೆ ಬಾಲ್ಯ, ಯೌವನ, ಮುಪ್ಪು ಎಂಬ ಮೂರು ನಿಲ್ದಾಣಗಳನ್ನು ದಾಟಿ ಜೀವನ ಮರಣ ಎಂಬ ಕೊನೆಯ ನಿಲ್ದಾಣದಲ್ಲಿ ನಿಲ್ಲುತ್ತದೆ.

ಆಧುನಿಕ ಜಗತ್ತಿನಲ್ಲಿ ಹುಟ್ಟನ್ನು ನಿಯಂತ್ರಿಸುವ ಅಲ್ಪ ಮಟ್ಟದ ಸಾಮರ್ಥ್ಯಕ್ಕೆ ಮನುಷ್ಯ ಒಳಗಾಗಿದ್ದರೂ ಸಾವನ್ನು ಆತ ನಿಯಂತ್ರಿಸುವ ಹಂತಕ್ಕಿನ್ನೂ ತಲುಪಿಲ್ಲ.

ಸಜ್ಜನ ಗಣಿಗರಲ್ಲಿ ಹೂಳುವ ಪದ್ದತಿ ಇದೆ. ಇವರಲ್ಲಿ ಹೆಣವನ್ನು ಸುಡುವುದಿಲ್ಲ. ಇವರಲ್ಲಿ ಸತ್ತ ತಕ್ಷಣ ಸ್ನಾನ ಮಾಡಿಸಿ ಗುಂಟೆಗೆ ಬಡಿಯುತ್ತಾರೆ. ಎಂದರೆ ಎರಡು ಬಿದುರಿನ ಕೋಲಿನಿಂದ ಕತ್ತರಿ ಆಕಾರವ ಮಾಡಿ (ಕವೆ ಮಾಡಿ) ಅದನ್ನು ಸತ್ತ ವ್ಯಕ್ತಿಯ ಕುತ್ತಿಗೆಗೆ ಇಡುತ್ತಾರೆ. ಈ ಜನಾಂಗದಲ್ಲಿ ಮದುವೆಯಾದವರನ್ನು ಮಾತ್ರ ಗೋಡೆಗೆ ಆಶ್ರಯವಾಗಿ ಕೂರಿಸುತ್ತಾರೆ. ಮದುವೆಯಾಗದಿರುವ ಹೆಣ್ಣು, ಗಂಡುಗಳು ಮರಣ ಹೊಂದಿದರೆ ಅವರನ್ನು ಚಟ್ಟಕಟ್ಟಿ ಅದರ ಮೇಲೆ ಮರಣ ಹೊಂದಿದ ಕುಮಾರಿ ಮತ್ತು ಕುಮಾರನನ್ನು ಮಲಗಿಸಿ ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ. ಅಂದರೆ ಈ ಚಟ್ಟಕ್ಕೆ ಬಳಸುವ ಕಟ್ಟಿಗೆ ಎಂದರೆ ಕಳ್ಳಿ ಮರದ ಕಟ್ಟಿಗೆಯನ್ನು ಬಳಸುತ್ತಾರೆ. ಜೊತೆಗೆ ದನಗಳು ತಿನ್ನುವ ಸೊಪ್ಪೆಯನ್ನು ಚಟ್ಟಕ್ಕೆ ತುಂಬಿ ಹುರಿಯಿಂದ ಬಿಗಿಯುತ್ತಾರೆ. ಜೊತೆಗೆ ಸ್ಮಶಾನದಲ್ಲಿಯೂ ತೋಡಿರುವ ತಗ್ಗಿನಲ್ಲಿ ಮದುವೆಯಾಗದಿರುವವರನ್ನು ಆರು ಅಡಿ ಉದ್ದ ಆರು ಅಡಿ ಆಳ ಹಾಗೂ ಮೂರು ಅಡಿ ಅಗಲವಾಗಿ ತಗ್ಗು ತೋಡಿಸಿ ಅದರಲ್ಲಿ ಮಲಗಿಸಿ ಜಂಗಮರಿಂದ ಪೂಜೆ ಮಾಡಿಸಿ, ತಂದೆ ತಾಯಿಗಳೊಂದಿಗೆ ರಕ್ತ ಬಂಧು ಬಳಗ ಕುಲ ಬಂಧು ಬಳಗದವರು, ಮೂರು ಹಿಡಿ ಮಣ್ಣೆ ಕೊಡುತ್ತಾರೆ. ಇಲ್ಲಿ ಮದುವೆಯಾಗದಿರುವವರನ್ನು ಕೂರಿಸಿ ಹೂಳುವುದಿಲ್ಲ ಮಲಗಿಸಿ ಹೂಳುತ್ತಾರೆ. ಈ ಸಮುದಾಯದಲ್ಲಿ ವ್ಯಕ್ತಿ ಸತ್ತ ತಕ್ಷಣ ಒಕ್ಕಲು ಮಾದಿಗರನ್ನು ಕರೆಸಿ ಅವರನ್ನು ತನ್ನ ಬಂಧು ಬಳಗದವರೆಲ್ಲರಿಗೂ ವಿಷಯ ಮುಟ್ಟಿಸಿ ಬರಲು ಕಳಿಸುತ್ತಾರೆ. ಹಾಗೂ ಹೆಣವನ್ನು ಹೂಳುವ ಜಾಗದಲ್ಲಿ ನಾಯಕ ಹಿರಿಯ ವ್ಯಕ್ತಿಯೊಬ್ಬ ಸ್ಮಶಾನಕ್ಕೆ ಹೋಗಿ ಅಳತೆ ಮಾಡಿ ತಗ್ಗು ತೋಡುವಂತೆ ಮಾದಿಗ ಜನಾಂಗಕ್ಕೆ ಹೇಳುತ್ತಾರೆ. ಸಜ್ಜನ ಗಾಣಿಗರ ಸ್ಮಶಾನದ ತಗ್ಗನ್ನು ತೆಗೆಯುವವರು ಆ ಊರಿನ ಮಾದಿಗ ಜನಾಂಗದವರು. ಸಜ್ಜನ ಗಾಣಿಗರಲ್ಲಿ ಮದುವೆಯಾದ ಹೆಣ್ಣು ಅಥವಾ ಗಂಡು ಯಾರೇ ಸತ್ತಿರಲಿ, ಸತ್ತ ಹೆಣದ ಕೈ ಕಾಲುಗಳನ್ನು ಮುರಿಯುತ್ತಾರೆ. ಕಾರಣ ಹೆಣವನ್ನು ಕೂರಿಸಿಕೊಂಡು ಮಂಟಪದಲ್ಲಿ ಕೊಂಡೊಯ್ಯುವಾಗ ಸೆಟೆದುಕೊಂಡ ಅಂಗಾಗಳು ನಾವು ಹೇಳಿದ ರೀತಿಯಲ್ಲಿ ಕೇಳುವುದಿಲ್ಲ. ಅದ್ದರಿಂದ ಸತ್ತ ತಕ್ಷಣ ಕೈ ಕಾಲುಗಳನ್ನು ಮುರಿಯುವ ಪದ್ದತಿ ಇದೆ. ಸ್ನಾನದ ನಂತರ ಪೂಜೆ ಮಾಡಿ ಹೂವಿನ ಹಾರ ಹಾಕುತ್ತಾರೆ. ಜೊತೆಗೆ ಎಲೆ ಅಡಿಕೆ ಕುಟ್ಟಿ ಬಾಯಿಯಲ್ಲಿಇಡುತ್ತಾರೆ. ನಂತರ ಮನೆಯ ಮಕ್ಕಳು, ಬಂಧು-ಬಳಗದವರು ಹೂವಿನ ಹಾರ ಹಾಕಿ, ಕಾಯಿ ಒಡೆಸುತ್ತಾರೆ. ಗಂಡ ಸತ್ತಾಗ ಅವನ ಹೆಂಡತಿಯಿದ್ದರೆ ಅವಳಿಗೆ ಅವಳ ತವರು ಮನೆಯವರು ತದನಂತರ ಬಂಧು-ಬಳಗದವರು ಹೊಸ ಸೀರೆಯನ್ನು ತಂದು ಉಡಿಸುವರು. ಭಜನೆ ಮೇಳವನ್ನು ಕರೆಸಿ ಭಜನೆ ಮಾಡಲು ಹೇಳುವರು. ಸಂಜೆಯ ಕಾಲದಲ್ಲಿ ತೀರಿದರೆ ಆ ದಿನವೇ ಮಣ್ಣು ಮಾಡಲು ಸಾಧ್ಯವಾಗದಿದ್ದರೆ, ಆ ದಿವಸ ರಾತ್ರಿ ಭಜನೆ ಮಾಡಿಸುತ್ತಾರೆ. ಸತ್ತ ಸಂದರ್ಭದಲ್ಲಿ ಹಾಗೂ ಶುಭ ಸಂದರ್ಭಗಳಲ್ಲಿ ಬಾರಿಸುವ ಭಜನಾ ನಾದಕ್ಕೂ ವ್ಯತ್ಯಾಸವಿರುತ್ತದೆ. ಮತ್ತು ಬೇರೆಯೇ ಆಗಿರುತ್ತದೆ.

**ಮಂಟಪ ತಯಾರಿಕೆ:-** ವಿವಾಹಿತ ಗಂಡು ಮತ್ತು ಹೆಣ್ಣು ಯಾರೇ ಸತ್ತರು ಮಂಟಪ ಸಿದ್ದಪಡಿಸುತ್ತಾರೆ. ಮತ್ತು ಈಗಾಗಲೇ ಗಾಣಿಗರಲ್ಲಿ ಎಲ್ಲರಿಗೂ ಸಿದ್ದಪಡಿಸಿದ ಮಂಟಪದ ನಾಲ್ಕು ಮೂಲೆಗಳಿಗೂ ನಾಲ್ಕು ತೆಂಗಿನ ಕಾಯಿಗೆ ನಾಲ್ಕು ಬೆಣೆಯನ್ನು ಬಡಿದು ನಾಲ್ಕು ಮೂಲೆಗೂ ತೆಂಗಿನ ಕಾಯಿ ಕಟ್ಟುತ್ತಾರೆ. ಹೂ

ಮತ್ತು ಹೂವಿನ ಹಾರದಿಂದ  ಮಂಟಪವನ್ನು ಅಲಂಕರಿಸುತ್ತಾರೆ. ನಾಲ್ಕು ಬಾಳೆ ಕಂದನ್ನು ಕಟ್ಟುತ್ತಾರೆ. ಹೆಣದ ಮುಂದೆ ದೀಪ ಅಕ್ಷತೆ ಕಾಳು ಹಾಗೂ ಆರತಿ ತಟ್ಟೆಯನ್ನು ಇಟ್ಟಿರುತ್ತಾರೆ. ಪೂಜೆ ಮಾಡಿದ ನಂತರ ಬಿಲ್ವಪತ್ರೆಯನ್ನು ಹೆಣದ ಮೇಲೆ ಹಾಕಿ ಪೂಜಿಸುವರು. ಸ್ನಾನ ಮಾಡಿಸುವಾಗ ಉಡುದಾರ ಮುಂತಾದವುಗಳನ್ನು ತೆಗೆಯುತ್ತಾರೆ. ಸತ್ತವರಿಗೆ ಬಿಳಿಯ ಬಟ್ಟೆಯನ್ನು ತೊಡಿಸುವರು.

ವ್ಯಕ್ತಿ ಸತ್ತ ವೇಳೆಯು ಸರಿಯಾಗಿಲ್ಲದಿದ್ದರೆ ಜೋಳದ ದವಸವನ್ನು ಬಡ ಬಗ್ಗರಿಗೆ ದಾನ ಮಾಡುತ್ತಾರೆ. ಸತ್ತ ವೇಳೆಯು ಸರಿಯಾಗಿಲ್ಲದಿದ್ದರೆ, ಮನೆಯನ್ನು ಕೆಲವು ದಿನಗಳ ಕಾಲ ಬಿಡುವಂತಹ ಪ್ರಸಂಗಗಳು ಇರುತ್ತವೆ. ಉತ್ತರ ಕರ್ನಾಟಕದಲ್ಲಿ ಹೆಣವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಭಜನೆಯೊಂದಿಗೆ ಪಟಾಕಿಯನ್ನು ಹಾರಿಸುತ್ತಾರೆ. ಪಟಾಕಿ ಹೊಡೆಯುವ ಸಂಪ್ರದಾಯ ಚಿತ್ರದುರ್ಗದ ಸಜ್ಜನ ಗಾಣಿಗರಲ್ಲಿ ಇಲ್ಲ. ದಾರಿಯುದ್ದಕ್ಕೂ ಹೆಣವನ್ನು ಸ್ಮಶಾನಕ್ಕೆ ಹೊತ್ತುಕೊಂಡು ಹೋಗುವಾಗ ವೀಳ್ಯದೆಲೆ, ನವಣೆಕಾಳು ಮತ್ತು ಚುರುಮುರಿಗಳನ್ನು ತೂರುತ್ತಾರೆ. ಇದಕ್ಕೆ ಕಾರಣವೇನೆಂದರೆ ಸತ್ತ ವ್ಯಕ್ತಿಯು ದೆವ್ವವಾಗಿ ಬರಬಾರದು ಮತ್ತು ಚಲ್ಲುತ್ತಾ ಬಂದ ಕಾಳುಗಳನ್ನು ಆ ದೆವ್ವವು ಎಲ್ಲಾ ಕಾಳುಗಳನ್ನು ಒಂದು ಕಾಳು ಬಿಡದಂತೆ ಬೆಳಗಾಗುವುದರೊಳಗಾಗಿ ಆರಿಸಿಕೊಂಡು ಬರಬೇಕು. ಆದರೆ ಅದಕ್ಕೆ ಎಲ್ಲಾ ಕಾಳು ಆರಿಸಲಿಕ್ಕೆ ಆಗುವುದಿಲ್ಲ. ಎಣಿಸಲಿಕ್ಕಂತೂ ಆಗೋದೆ ಇಲ್ಲ. ಒಟ್ಟಾರೆ ಸತ್ತ ವ್ಯಕ್ತಿಯು ಒಂದು ವೇಳೆ ದೆವ್ವವಾಗಿದ್ದಲ್ಲಿ ಕಾಟಕೊಡದಿರಲೆಂದು ಹೆಣದ ಹಿಂದೆ ಸಜ್ಜೆ ಮತ್ತು ನವಣೆಗಳನ್ನು ಚಲ್ಲುತ್ತಾ ಹೋಗುವರೆಂಬ ನಂಬಿಕೆ ಈ ಸಮುದಾಯದಲ್ಲಿದೆ.

ಸಜ್ಜೆ, ನವಣೆ, ವೀಳ್ಯೆದೆಲೆ, ಮಂಡಕ್ಕಿ, ಚಿಲ್ಲರೆ ದುಡ್ಡು ಹೀಗೆ ದಾರಿಯುದ್ದಕ್ಕೂ ತೂರುವುದನ್ನು ವೈಜ್ಞಾನಿಕವಾಗಿ ಅವಲೋಕಿಸಿದಾಗ ಹೆಣ ನೋಡಲು ಮತ್ತು ಸ್ಮಶಾನಕ್ಕೆ ಹೋದ ಹೆಣವನ್ನು ಮಣ್ಣು ಮಾಡಲು, ಬಂದ ಕುಲ-ಭಾಂದವರಿಗೆ ದಾರಿಯನ್ನು ಯಾರನ್ನು ಕೇಳದೆ ಎಲ್ಲಿಯವರೆಗೆ ಮಂಡಕ್ಕಿ ವೀಳ್ಯದೆಲೆ ಮತ್ತು ಚಿಲ್ಲರೆ ದುಡ್ಡು ಸಜ್ಜಿ, ನವಣೆ ಬಿದ್ದಿರುತ್ತದೆಯೋ ಅಲ್ಲಿಗೆ ಅಂದರೆ ಹೆಣವನ್ನು ತೆಗೆದುಕೊಂಡು ಹೋದ ಜಾಗಕ್ಕೆ ಸರಿಯಾಗಿ ಬರಲು ಸಾಧ್ಯವಾಗುತ್ತದೆ. ಮರಣ ಹೊಂದಿದವನು ಗಂಡಸಾಗಿದ್ದರೆ ಅವನ ಜೊತೆಗೆ ಅವನ ಹೆಂಡತಿಯನ್ನು ಕೂರಿಸುತ್ತಾರೆ. ಅವಳಿಂದ ಪೂಜೆ ಮಾಡಿಸುತ್ತಾರೆ. ತವರಿನವರು ಕಡೆಯ ಉಡಿಹಕ್ಕಿ ಹಾಕುವರು. ಹೆಣವನ್ನು ಹೊರುವಾಗ (ತೆಗೆದುಕೊಂಡು ಸ್ಮಶಾನಕ್ಕೆ ಹೋಗುವಾಗ) ಹಿಂದೆ ಹೊತ್ತವರು, ಮುಂದೆ ಹೊತ್ತವರು ಹಿಂದೆ ಮುಂದೆ ಆಗುತ್ತಾರೆ. ಇದರ ಸಂಕೇತವೆಂದರೆ ನಿನ್ನನ್ನು ನಾವು ಹೊರುತ್ತಿದ್ದೇವೆ. ಅದೇ ರೀತಿಯಲ್ಲಿ ಇಡೀ ಕುಲಬಾಂಧವರು ನಿನ್ನ ಕುಟುಂಬದ ಜವಾಬ್ದಾರಿಯನ್ನು ಹೊರುತ್ತದೆ ಎಂಬ ಸಂಕೇವಾಗಿದೆ.

ಸ್ಮಶನಕ್ಕೆ ಹೆಣವನ್ನು ತರುವಾಗ ಸ್ಮಶಾನ ಇನ್ನೂ ಸ್ವಲ್ಪ ಕಾಲ್ನಡಿಗೆ ದೂರ ಇರುವಾಗಲೇ ಅಲ್ಲಿ ಹೆಣದ ಮಂಟಪವನ್ನು ಮತ್ತು ಚಟ್ಟವನ್ನು ೫ ನಿಮಿಷ ಕೆಳಗೆ ಇಳಿಸುತ್ತಾರೆ. ಈ ಸ್ಥಳಕ್ಕೆ 'ವಸ್ತಿ ಕಟ್ಟೆ' ಎನ್ನುವರು.

ಆದ್ದರಿಂದ ಇದಕ್ಕೆ ವಸ್ತಿಕಟ್ಟೆ ಇಳಿಸುವುದು ಎನ್ನುವರು. ಇಲ್ಲಿ ಹೆಣಕ್ಕೆ ಪೂಜಿಸಿ ಕಾಯಿ ಒಡೆಯುತ್ತಾರೆ. ಐದು ನಿಮಿಷದ ನಂತರ ಸ್ಮಶಾನಕ್ಕೆ ಹೆಣವನ್ನು ತರುತ್ತಾರೆ.

**ಹೆಣವನ್ನು ಹೂಳುವ ಗುಣಿ:-** ಮಾದಿಗ ಜನಾಂಗವರು ಹೆಣ ಹೂಳಲು ಗುಣಿ ತೆಗೆದಿರುತ್ತಾರೆ. ಹೆಣದ ಗುಣಿಗೆ ಇಳಿಯಲು ಮೆಟ್ಟಿಲು ಮಾಡಿರುತ್ತಾರೆ. ಜೊತೆಗೆ ಹೆಣವನ್ನು ಕೂರಿಸಲು ಪ್ರತ್ಯೇಕವಾದ ಗುಳಿಯನ್ನು ಮಾಡಿರುತ್ತಾರೆ. ಈಶ್ವರ ಲಿಂಗಾಕೃತಿಯಲ್ಲಿ ಗುಳಿಯನ್ನು ತೋಡಿರುತ್ತಾರೆ. ಅದರ ಒಳಗಡೆ ಹೆಣವನ್ನಿಟ್ಟು ದೀಪವನ್ನು ಹಚ್ಚಿಡಲು ಪ್ರತ್ಯೇಕ ಗುಣಿ ಮಾಡಿರುತ್ತಾರೆ. ಅದರಲ್ಲಿ ದೀಪ ಹಚ್ಚಿಡುತ್ತಾರೆ. ಹೆಣವನ್ನು ತಗ್ಗಿನಲ್ಲಿ ಇಳಿಸಿದಾಗ ಅದನ್ನು ಈ ಮೊದಲೇ ಮಾಡಿದ ಗುಳಿಯಲ್ಲಿ ಉತ್ತಾರಾಭಿಮುಖವಾಗಿ ಹೆಣವನ್ನು ಕೂರಿಸುತ್ತಾರೆ. ಈ ಕಾರ್ಯಕ್ಕೆ ಸ್ಮಶಾನಕ್ಕೆ ಬಂದ ಜಂಗಮರು ಐದನೇ ಎಡಗಾಲನ್ನು ಹೆಣದ ಮೊಳಕಾಲಿನ ಮೇಲೆ ತನ್ನ ಪಾದವನ್ನಿಟ್ಟು ಮಂತ್ರವನ್ನು ಹೇಳುತ್ತದೆ. ಆ ಸಂದರ್ಭದಲ್ಲಿ ಮನೆಯ ಹಿರಿಯ ಮಗನಿಂದ ಪೂಜೆ ಮಾಡಿಸಿ ಅವನಿಗೆ ಹೆಣದಿಂದ ರುಮಾಲನ್ನು ತೆಗೆದು (ಅಡಿಸುತ್ತಾರೆ) ಹಾಕುತ್ತಾರೆ. ಇದರ ಅರ್ಥ ಇನ್ನೂ ಮುಂದಿನ ಕುಟುಂಬದ ಹೊಣೆಗಾರಿಕೆ ಮತ್ತು ಜವಾಬ್ದಾರಿ ನಿನ್ನ ಮೇಲಿದೆ ಎಂಬುದನ್ನು ಸೂಚಿಸುವುದಾಗಿದೆ.

ಸಜ್ಜನ ಗಾಣಿಗರಲ್ಲಿ ಗಂಡನು ಸತ್ತಿದ್ದರೆ ಆತನನ್ನು ಹೂಳುವ ಜಾಗದಲ್ಲಿ ಸಮುದಾಯದ ವಿಧವೆಯಾದ ಮುದುಕಿಯೊಬ್ಬಳು ಬಂದು ಶವದ ಎದುರುಗಡೆ ಕೂರಿಸಿರುವ ವಿಧವೆಯಾದ ಮಹಿಳೆಗೆ ಬಳೆಗಳನ್ನು ಒಡೆಯುತ್ತಾರೆ. ಕುಂಕುಮ ಅಳಿಸುತ್ತಾರೆ. ಹೂವನ್ನು ಜಡೆಯಿಂದ ಕಿತ್ತು ಎಸೆಯುತ್ತಾರೆ. ಗಂಡ ಕಟ್ಟಿದ ತಾಳಿ ಮತ್ತು ಮಾಂಗಲ್ಯವನ್ನು ತೆಗೆಯುತ್ತಾರೆ. ಗಂಡ ಸತ್ತ ಮಹಿಳೆ ಯಾವುದೇ ಅಲಂಕಾರವನ್ನು ಮಾಡಿಕೊಳ್ಳುವಂತಿಲ್ಲ. ಹಿರಿಯ ಮಗನ ಮತ್ತು ಜಂಗಮರ ಪೂಜೆಯ ನಂತರ ಸ್ಮಶಾನಕ್ಕೆ ಬಂದ ಕುಲಬಾಂಧವರು. ತಗ್ಗಿಗೆ ಮತ್ತು ಹೆಣಕ್ಕೆ ಪೂಜಿಸುತ್ತಾರೆ. ಜೊತೆಗೆ ವಿಧವೆಯಿಂದಲೂ (ಹೆಂಡತಿಯಿಂದಲೂ) ಪೂಜೆ ಮಾಡಿಸುತ್ತಾರೆ. ಹೆಣಕ್ಕೆ ಕಟ್ಟುಕಡೆಯ ಪೂಜೆ ಅದಾಗಿರುತ್ತದೆ. ಸ್ಮಶಾನಕ್ಕೆ ಬಂದ ಎಲ್ಲರ ಕೈಯಲ್ಲೂ ಬಿಲ್ವಪತ್ರೆ, ದೇವ ಕಣಗಲ ಹೂ, ತಂಗಟಿ ಹೂ ಇವುಗಳನ್ನು ಕೊಟ್ಟು, ಜಂಗಮನು ಮಂತ್ರವನ್ನು ಜಪಿಸುವನು. ಕಟ್ಟುಕಡೆಯದಾಗಿ ಓಂ ನಮಃ ಶಿವಾಯಃ ಎಂಬುದಾಗಿ ಹೇಳುತ್ತಾ ಕೈಯಲ್ಲಿದ್ದ ಬಿಲ್ವಪತ್ರೆ, ದೇವ ಕಣಗಲ ಹೂ, ತಂಗಡಿ ಹೂವನ್ನು ಶವದ ಗುಣಿಗೆ ಹಾಕುವರು. ಹೆಣದ ಮೇಲೆ ಮೊದಲು ವಿಭೂತಿಗಟ್ಟಿ ಒಡೆದು ಹಾಕುವರು. ಹಾಗೂ ಇವರೆಲ್ಲಾ ಮೂರು ಹಿಡಿ ಪವಿತ್ರವಾದ ಮಣ್ಣನ್ನು ಗುಣಿಗೆ ಕೊಡುವ ಶಾಸ್ತ್ರವನ್ನು ಮುಗಿಸುವರು. ನಂತರ ಕುಲಬಾಂಧವರು ಸಲಿಕೆಯಿಂದ ಹೆಣದ ಗುಳಿಗೆ ಮಣ್ಣನ್ನು ತುಂಬಿಸುತ್ತಾರೆ. ಹೆಣದ ಗುಡ್ಡೆಯ ಮೇಲೆ ಹೆಣಕ್ಕೆ ಹಾಕಿದ ಹೂವಿನ ಹಾರಗಳನ್ನು ಹಾಕಿ ಬರುತ್ತಾರೆ. ಹೆಣಕ್ಕೆ ಗುಣಿ ತೋಡಲು ತೆಗೆದುಕೊಂಡು ಹೋದ ಸಲಿಕೆ ಹಾಕಿ ಪುಟ್ಟಿ ಮುಂತಾದ ಸಾಮಾಗ್ರಿಗಳನ್ನು ಗುಡ್ಡೆಯ ಹತ್ತಿರವೇ ಹಾಕಿ ಬರುತ್ತಾರೆ. ಮೂರನೇ ದಿವಸದ ಕಾರ್ಯ ನೆರವೇರಿದ ಮೇಲೆ ಪೂಜೆಯೊಂದಿಗೆ ಆಯುಧಗಳನ್ನು ಮನೆಗೆ ತರುತ್ತಾರೆ.

ಹೆಣವನ್ನು ಹೂಳಿ ಬಂದ ಕುಲಬಾಂಧವರೆಲ್ಲರೂ ಅಲ್ಲಿಯೇ ಹತ್ತಿರ ನೀರಿದ್ದ ಜಾಗಕ್ಕೆ ಎಲ್ಲರೂ ಹೋಗಿ ಕೈಕಾಲು ಮುಖ ತೊಳೆದು ಜಂಗಮರ ಕಾಲು ತೊಳೆದು ನಮಸ್ಕರಿಸಿ ಬಂದಿದ್ದ ಜಂಗಮನಿಗೆ ಕಾಣಿಕೆಯಾಗಿ

ಹಣವನ್ನು ನೀಡುತ್ತಾರೆ. ನಂತರ ಕುಲಬಾಂಧವರೆಲ್ಲರೂ ಸತ್ತ ವ್ಯಕ್ತಿಯ ಮನೆಯ ಹತ್ತಿರ ಹೋಗಿ ಹೆಣದ ಜಾಗದಲ್ಲಿ ಹಚ್ಚಿಟ್ಟಿರುವ ದೀಪ ನೋಡಿ ತಮ್ಮ ತಮ್ಮ ಮನೆಗಳಿಗೆ ಹೋಗಿ ಹೊರಗಿನಿಂದಲೇ ಸ್ನಾನ ಮಾಡಿ ಬೇರೆ ಬಟ್ಟೆಗಳನ್ನು ಬದಲಿಸಿ ಮನೆಯೊಳಗೆ ಹೋಗಿ ದೇವರ ಪೂಜೆ ಮತ್ತು ದರ್ಶನವನ್ನು ಮಾಡುತ್ತಾರೆ.

ಹೆಣವನ್ನು ಸ್ಮಶಾನದಲ್ಲಿ ಹೂಳಿ ಬರುವುದರೊಳಗಾಗಿ ಸತ್ತ ಮನೆಯಲ್ಲಿದ್ದವರು ಮನೆಯಲ್ಲಿದ್ದ ನೀರನ್ನು ಹೊರಚಲ್ಲಿ ಕಸ ಹೊಡೆದು ನೆಲತೊಳೆದು ಸತ್ತ ವ್ಯಕ್ತಿಯ ಜಾಗದಲ್ಲಿ ಎಣ್ಣೆ ದೀಪವನ್ನು ಹಚ್ಚಿಡುತ್ತಾರೆ. ಸ್ಮಶಾನದಿಂದ ತಿರುಗಿ ಬಂದವರು ಸತ್ತ ವ್ಯಕ್ತಿಯ ಜಾಗದಲ್ಲಿರುವ ದೀಪವನ್ನು ನೋಡಿಹೋಗಬೇಕು. ಇದರಿಂದ ಎಲ್ಲಾ ದೋಷಗಳು ಹೋಗುತ್ತವೆ ಎಂಬ ನಂಬಿಕೆ ಸಜ್ಜನ ಗಾಣಿಗರಲ್ಲಿದೆ.

**ಮೂರು ದಿನದಲ್ಲಿ ಆಚರಿಸುವ ಕಾರ್ಯ/ಕೂಳು ಹಾಕುವುದು.**

ಹೆಣವನ್ನು ಸ್ಮಶಾನದಲ್ಲಿ ಹೂಳಿ ಬಂದ ಮೂರನೇ ದಿನದಂದು ಅಣ್ಣ ತಮ್ಮಂದಿರ ಮನೆಯವರೆಲ್ಲಾ ಅಕ್ಕಿ, ಬೆಳೆ, ಬೆಲ್ಲ ಇತ್ಯಾದಿ ವಸ್ತುಗಳನ್ನು ವ್ಯಕ್ತಿ ಸತ್ತ ಮನೆಗೆ ಕೊಟ್ಟು ಅಡಿಗೆ ಮಾಡಿಸುತ್ತಾರೆ. ನಂತರ ಸತ್ತ ವ್ಯಕ್ತಿಯು ಯಾವ ವಸ್ತುಗಳನ್ನು ಉಪಯೋಗಿಸುತ್ತಿದ್ದನೋ ಮತ್ತು ತಿನ್ನುತ್ತಿದ್ದನೋ ಅವುಗಳೆಲ್ಲವನ್ನು ಪ್ರಸಾದದೊಂದಿಗೆ ಅಣ್ಣ ತಮ್ಮಂದಿರಾದವರು ಅವರ ಹೆಂಡತಿ ಮಕ್ಕಳು ಗುಡ್ಡೆಯ ಹತ್ತಿರಕ್ಕೆ ತೆಗೆದುಕೊಂಡು ಹೋಗಿ ಗುಡ್ಡೆಯ ಮೇಲಿಟ್ಟು ಹೋದ ಎಲ್ಲಾ ಅಣ್ಣ ತಮ್ಮಂದಿರು ಮನೆಯವರು ಗುಡ್ಡೆ ಬಿಟ್ಟು ಸ್ವಲ್ಪ ದೂರದಲ್ಲಿ ಕೂರುತ್ತಾರೆ.

**ಕಾಗೆ ಮುಟ್ಟುವ ಶಾಸ್ತ್ರ:-** ಗುಡ್ಡೆಯ ಮೇಲೆ ಇಟ್ಟಿರುವ ಪ್ರಸಾದ ಮತ್ತು ವಸ್ತುಗಳನ್ನು ಕಾಗೆ ಬಂದು ಮೊದಲು ಮುಟ್ಟಬೇಕು, ಬೇಗ ಮುಟ್ಟಿದರೆ ಸತ್ತವರು ಅದೃಷ್ಟವಂತರೆಂದು, ಕಾಗೆ ಯಾವ ವಸ್ತು ಮೊದಲು ಮುಟ್ಟುತ್ತದೆಯೋ ಅದು ಸತ್ತ ವ್ಯಕ್ತಿಗೆ ಬಹು ಇಷ್ಟವೆಂದು ನಂಬಿಕೆ ಇವರಲ್ಲಿದೆ. ಕಾಗೆ ಮುಟ್ಟಿ ಹೋದ ನಂತರ ಅಲ್ಲಿಗೆ ತೆಗೆದುಕೊಂಡು ಹೋದ ಎಲ್ಲಾ ತಿನಿಸುಗಳನ್ನು ತಿಂದು ಮತ್ತು (ಊಟ ಮಾಡಿ) ಮನೆಗೆ ಬರುತ್ತಾರೆ. ಸತ್ತವರ ಮನೆಯ ನೆಂಟರಾದವರು ಅವರು ಮೂರು ದಿನದಲ್ಲಿ ಹಚ್ಚಿಟ್ಟ ದೀಪವನ್ನು ನೋಡುವುದಿಲ್ಲ. ಸತ್ತವರ ಮನೆಗೆ ಹೋಗುವುದಿಲ್ಲ. ಈ ಕಾರ್ಯಕ್ಕೆ ಅಣ್ಣ-ತಮ್ಮಂದಿರ ಮನೆಯವರು ಸೇರಿ ಮಾಡುವ ಮೂರನೇ ದಿವಸದ ಕಾರ್ಯವಾಗಿದೆ.

**ದೊಡ್ಡ ದಿವಸ/ಕೈಲಾಸ ಗಣಾರಾಧನೆ:-** ವ್ಯಕ್ತಿಯು ಸತ್ತ ಒಂಬತ್ತು, ಹದಿಮೂರು ಹದಿನಾರನೇ ದಿನಗಳಲ್ಲಿ ದೊಡ್ಡ ದಿನಗಳಲ್ಲಿ ದೊಡ್ಡ ದಿವಸವನ್ನು ಸಂಬಂಧಿಕರೆಲ್ಲಾ ಕೂಡಿ ನಿರ್ಣಯ ತೆಗೆದುಕೊಂಡು ಮಾಡುತ್ತಾರೆ. ಇದನ್ನೇ ಕೈಲಾಸ ಗಣಾರಾಧನೆ ಎನ್ನುವರು.

ಹೆಣದ ಮಣ್ಣಿಗೆ ಬಂದ ಕುಲಬಾಂಧವರಿಗೆ ದೊಡ್ಡ ದಿವಸದ ದಿನಾಂಕವನ್ನು ಹೆಣದ ಕಡೆಯವರು ಜಂಗಮರ ಕಡೆಯಿಂದ ಮಣ್ಣಾದ ದಿವಸದಂದು ಸ್ಮಶಾನದಲ್ಲಿಯೇ ತಿಳಿಸುತ್ತಾರೆ. ಈ ದಿವಸದಂದು ಮಣ್ಣಿನಲ್ಲಿ ಭಾಗವಹಿಸಿದ ಎಲ್ಲಾ ಕುಲಬಾಂಧವರು ಸೇರಿ ಸತ್ತ ವ್ಯಕ್ತಿಯ ಫೋಟೋಕ್ಕೆ ಮಾಲೆ ಹಾಕಿ

ಕಾಯಿಯನ್ನು ಒಡೆಯುತ್ತಾರೆ. ಅಕ್ಷತೆ ಹಾಕುತ್ತಾರೆ. ನಂತರ ಸತ್ತವರ ಮನೆಯಲ್ಲಿ ಸಹ ಭೋಜನವನ್ನು ಮಾಡುತ್ತಾರೆ (ಸಿಹಿ ಅಡುಗೆ). ಇವರಲ್ಲಿ ಸಸ್ಯ ಆಹಾರವೇ ಇವರ ಆಹಾರ ಪದ್ದತಿಯಾಗಿದೆ.

**ದೈವದಲ್ಲಿ ಹಾಕಿ ಕೊಳ್ಳುವುದು (ಒಳಗೆ ತೆಗೆದುಕೊಳ್ಳುವುದು)**

ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗಲೆಂದು ಒಂದು ತಿಂಗಳು ತುಂಬುವುದರೊಳಗಾಗಿ ಒಳ್ಳೆಯ ದಿನ ನೋಡಿ ಪೂಜೆ ಮಾಡುವುದಕ್ಕೆ ದೈವದಲ್ಲಿ ಹಾಕಿಕೊಳ್ಳುವುದು ಎನ್ನುವರು. ಆದಿನ ಮನೆಯನ್ನು ಸುಣ್ಣ-ಬಣ್ಣದಿಂದ ಸಾರಿಸಿ, ಗೋಮೂತ್ರ ಮನೆ ತುಂಬಾ ಚಿಮ್ಮಿಸಿ, ಹಾಸಿಗೆ, ಹೊದಿಕೆಗಳನ್ನು ಸ್ವಚ್ಛಗೊಳಿಸುವರು. ಈ ಪೂಜೆ ಮಾಡುವಾಗ ಬೆಳ್ಳಿಯ ಮುಖವನ್ನು ಮಾಡಿಸುವರು. ಗಂಡ ಸತ್ತರೆ ಗಂಡು ದೇವರ ಮುಖವನ್ನು ಹೆಣ್ಣು ಸತ್ತರೆ ಹೆಣ್ಣು ದೇವಿಯ ಮುಖವನ್ನಿಟ್ಟು, ತುಂಬಿದ ಚರಿಗೆಗೆ ವಸ್ತುವನ್ನು ಇಟ್ಟು ಹೂಹಾರ ಹಾಕಿ ಹಣ್ಣು, ಹಂಪಲ, ಕರಿದ ಪದಾರ್ಥ, ತಿಂಡಿ-ತಿನಿಸುಗಳನ್ನು ಇಟ್ಟು ಪೂಜಿಸುವರು. ಸತ್ತವರು ದೈವವಾದರೆಂಬ ನಂಬಿಕೆ ಈ ಆಚರಣೆಯ ಹಿಂದಿದೆ. ವಿಶೇಷವಾಗಿ ಸತ್ತ ವ್ಯಕ್ತಿಯು ಯಾವ ಆಹಾರವನ್ನು ಬಹಳ ಇಷ್ಟ ಪಡುವನೋ ಆ ಆಹಾರ ಪೂಜೆಗೆ ಇಡುವರು. ಈ ಪೂಜೆಯ ದಿವಸ ಜಂಗಮರು ಮನೆಯ ಒಳಗೆ ಪ್ರಸಾದದೊಂದಿಗೆ, ಸತ್ತ ವ್ಯಕ್ತಿಯನ್ನು ಹೆಸರಿಡಿದು ಒಳಗೆ ಬರುವಂತೆ ಕರೆಯುವರು. ಇದರಿಂದ ಸತ್ತ ವ್ಯಕ್ತಿಯು ಒಳಗೆ ಬಂದು ತನಗೆ ಬೇಕಾದ ಇಷ್ಟವಾದ ತಿಂಡಿ-ತಿನಿಸುಗಳನ್ನು ತಿನ್ನುತ್ತಾರೆ ಎಂಬ ನಂಬಿಕೆ ಸಜ್ಜನ ಗಾಣಿಗರಲ್ಲಿದೆ. ಈ ಕಾರ್ಯದ ನಂತರ ಹಿರಿಯರ ಹಬ್ಬದಲ್ಲಿ ಸತ್ತವರನ್ನು ಸೇರಿಸಿಕೊಂಡು ಪೂಜಿಸುತ್ತಾರೆ. ಇದು ವಾರ್ಷಿಕಾವರ್ತನಾ ಆಚರಣೆಗಳಲ್ಲಿ ಹಿರಿಯರ ಹಬ್ಬ ಎಂದೆನಿಸುತ್ತದೆ. ಇದು ಹಿರಿಯರನ್ನು ಅಂದರೆ ಸತ್ತ ವ್ಯಕ್ತಿಗಳನ್ನು ಸ್ಮರಿಸುವ ಹಬ್ಬವಾಗಿದೆ.

**ಸಮಾಧಿ ಕಟ್ಟುವದು**

ಸಮಾಧಿ ಕಟ್ಟುವವರಿಗೆ ಹೊಸ ಬಟ್ಟೆ ಮತ್ತು ಹಣ ಕೊಡುತ್ತಾರೆ. ತಿಂಗಳು ತುಂಬಿದಾಗ ಅಥವ ಒಂದು ವರ್ಷದೊಳಗಾಗಿ ಸಮಾಧಿ ಕಟ್ಟಿಸಬೇಕು. ಸಮಾಧಿಗೆ ಬೇಕಾಗಿರುವ ವಸ್ತುಗಳನ್ನು ಸ್ಮಶಾನದಲ್ಲಿ ಶೇಖರಿಸಿಟ್ಟುಕೊಂಡು ಒಂದೇ ದಿನದಲ್ಲಿ ಸಮಾಧಿ ಕಟ್ಟಿಮುಗಿಸಬೇಕು. ಉಳಿದ ಸಾಮಾನುಗಳನ್ನು ಮನೆಗೆ ತರುವಂತಿಲ್ಲ ಅವುಗಳನ್ನು ಸ್ಮಶಾನದಲ್ಲಿಟ್ಟು ಬರಬೇಕು. ಸಮಾಧಿ ಕಟ್ಟಿಸಿದ ಮೇಲೆ ಮನೆಯ ಜಂಗಮರಿಂದ ಅಭಿಷೇಕ ಮಾಡಿಸುವುದು. ನಂತರ ಕುಲಬಾಂಧವರು ಬಂದು ಸಮಾದಿಗೆ ನಿಗಧಿ ಪಡಿಸಿದ ದಿನದಂದು ಪೂಜೆಮಾಡಿಕೊಂಡು ಹೋಗುತ್ತಾರೆ.

**೪.೨. ವಾರ್ಷಿಕ ವರ್ತನದ ಆಚರಣೆಗಳು**

**ಯುಗಾದಿ ಹಬ್ಬ**

ಯುಗಾದಿ ಭಾರತೀಯ ಪರಂಪರೆಯಲ್ಲಿ ವರ್ಷದ ಹೊಸದಿನ. ಋತುಗಳಲ್ಲಿ ವಸಂತದಂತೆ ದೇವತೆಗಳಲ್ಲಿ ಗಣಪತಿಯಂತೆ, ಹಬ್ಬಗಳಲ್ಲಿ ಯುಗಾದಿ ಹಿಂದೂಗಳಿಗೆ ದೊಡ್ಡ ಹಬ್ಬ. ಅಂತೆಯೇ ಭಾರತದ ಪ್ರಮುಖ ಹಬ್ಬವೂ ಹೌದು.

ಹಿಂದೂ ಹಬ್ಬಗಳಾದ ಗೌರಿ ಗಣೇಶ, ವಿಜಯದಶಮಿ, ದೀಪಾವಳಿ, ಮುಂತಾದವುಗಳು ಪುರಾಣ, ಇತಿಹಾಸ, ಧರ್ಮಶಾಸ್ತ್ರಗಳನ್ನು ಆಧರಿಸಿ ರೂಪಗೊಂಡಿವೆಯಾದರೂ ಪುರಾಣವೇ ಅವುಗಳ ಬೆನ್ನೆಲುಬು. ಆದರೆ ಸಂಕ್ರಾಂತಿ ಮತ್ತು ಯುಗಾದಿ ವೈಶಿಷ್ಟವೇ ಬೇರೆ. ಯಾವ ಪೌರಣಿಕ ಕಥೆಯೂ ಅಲ್ಲ. ಕಾಲಮಾನ ಪದ್ದತಿಯೂ ಇವುಗಳ ಬೆನ್ನೆಲುಬು ಜೋತಿಷ್ಯ, ಧರ್ಮಶಾಸ್ತ್ರ, ಋತು ಧರ್ಮಗಳು ಪಕ್ಕೆಲುವುಗಳು.

ಪವಿತ್ರ ಯುಗಾದಿ ಹಬ್ಬವನ್ನು ಬಡವ-ಶ್ರೀಮಂತರೆಂಬ ಬೇದಭಾವವಿಲ್ಲದೆ ನಾಗರೀಕರು, ಹರ್ಷದಿಂದ ಯುಗಾದಿ ಹಬ್ಬವನ್ನು ಸ್ವಾಗತಿಸುತ್ತಾರೆ. ರೈತನ ಹೊಸ ವರ್ಷವೆಂದರೆ ಹೊಸ ಮಳೆಗಳು ಪ್ರಾರಂಭಿಸುತ್ತವೆ. ಯುಗಾದಿಯೆಂದು ಮಳೆಯಾದರೆ ಶುಭ (ಜಾನಪದ ಸಾಹಿತ್ಯ ದರ್ಶನ-ಸಂಚಿಕೆ ೧೦-ಪು-೩೩-೪೦).

ಯುಗಾದಿಯ ಪೂರ್ವದ ದಿನಗಳಲ್ಲಿ ವ್ಯವಸಾಯದ ಕೆಲಸಗಳೆಲ್ಲವು ಪರಿಸಮಾಪ್ತಿಗೊಂಡು ವಿಶ್ರಾಂತಿಗೆ ಅನುವು ಮಾಡಿ ಕೊಟ್ಟಿರುತ್ತವೆ. ಸಜ್ಜನ ಗಾಣಿಗರಲ್ಲಿಯೂ ಈ ಹಬ್ಬವು ವಿಶೇಷವಾಗಿ ಕಂಡು ಬರುತ್ತದೆ. ಹಬ್ಬದ ಪೂರ್ವದಲ್ಲಿ ಮನೆಗಳ ಧೂಳು ಝಾಢಿಸಿ, ಸುಣ್ಣ ಬಣ್ಣಗಳನ್ನು ಬಳಿದು ನೆಲ ಸಾರಿಸಿ ಚೊಕ್ಕಾಟಗೊಳಿಸುತ್ತಾರೆ. ಗೃಹಿಣಿಯರು ಮನೆಯಲ್ಲಿನ ಹಾಸಿಗೆ ಹೊದಿಕೆ, ಜಮಖಾನೆ ಶಾಲುಗಳನ್ನು ಸ್ವಚ್ಛವಾಗಿ ಒಗೆದು ಮಡಿ ಮಾಡುತ್ತಾರೆ. ಹಬ್ಬದ ಹಿಂದಿನ ದಿವಸವೆ ಕಡಲೆಯನ್ನು ಪುಡಿಮಾಡಿ ಅದಕ್ಕೆ ಸಕ್ಕರೆ ಮತ್ತು ಬೇವಿನ ಹೂವನ್ನು ಬೆರೆಸುತ್ತಾರೆ. ಇದರಲ್ಲಿ ಇಂದು ತುಪ್ಪದವರ ಮನೆಗಳಲ್ಲಿ ಬೇವು ಬೆಲ್ಲದ ವಾತಾವರಣ ಕಂಡು ಬರುವುದಿಲ್ಲ. ಆ ದಿನ ತುಪ್ಪದವರು ಬೇವನ್ನು ಮುಟ್ಟುವುದಿಲ್ಲ. ಕಾರಣವೆಂದರೆ ಹಿಂದೆ ತಮ್ಮ ಕುಲಬಾಂಧವರಲ್ಲೊಬ್ಬ ಬೇವುತರಲು ಹೋಗಿ ಬೇವಿನ ಮರದಿಂದ ಕೆಳಗೆಬಿದ್ದು ಸತ್ತು ಹೋಗಿದ್ದ ಕಾರಣದಿಂದ ಅಂದಿನಿಂದ ಯುಗಾದಿ ಹಬ್ಬದಲ್ಲಿ ಬೇವು ಬೆಲ್ಲವನ್ನು ತಯಾರಿಸುವುದಿಲ್ಲ. ಮತ್ತು ಮೊದಲ ಹಬ್ಬದ ದಿವಸ ಬೇವನ್ನು ಮುಟ್ಟುವುದಿಲ್ಲ. ತಮ್ಮ ಕುಲಬಾಂಧವರನ್ನು ಹೊರತುಪಡಿಸಿ ಸಜ್ಜನ ಗಾಣಿಗರ ಇತರ ಪಂಗಡಗಳಲ್ಲಿ ಬೇವು ಬೆಲ್ಲವನ್ನು ತಯಾರಿಸುತ್ತಾರೆ. ಜೊತೆಗೆ ತುಪ್ಪದವರ ಮನೆಗಳಿಗೆ ಸಜ್ಜನ ಗಾಣಿಗರ ಇತರೆ ಪಂಗಡಗಳು ಬೇವು ಬೆಲ್ಲವನ್ನು ಕಳಿಸಿಕೊಡುತ್ತಾರೆ.

**ಬೇವಿನ ಸ್ನಾನ:-** ತುಪ್ಪದವರನ್ನು ಬಿಟ್ಟರೆ ಎಲ್ಲಾ ಪಂಗಡದವರು ಎಣ್ಣೆ ಸ್ನಾನದೊಂದಿಗೆ ಬಿಸಿ ನೀರಿಗೆ ಬೇವಿನ ಸೊಪ್ಪು ಹಾಕಿ ಸ್ನಾನ ಮಾಡುತ್ತಾರೆ. ತುಪ್ಪದವರು ಮಾತ್ರ ಅಂದು ಎಣ್ಣೆ ಸ್ನಾನವನ್ನು ವಿಶೇಷವಾಗಿ ಮಾಡುತ್ತಾರೆ. ನಂತರ ಹೊಸಬಟ್ಟೆ ಧರಿಸುತ್ತಾರೆ. ಅನಂತರ ಮಕ್ಕಳನ್ನು ಮತ್ತು ಪುರುಷರನ್ನು ದೇವರ ಮುಂದೆ ಕೂಡಿಸಿ ಗೃಹಿಣಿಯರು ಸಡಗರದಿಂದ ಆರತಿಬೆಳಗುತ್ತಾರೆ. ಹಾಗೂ ಮನೆಯಲ್ಲಿನ ದೇವರನ್ನು ಪೂಜಿಸಿ ದೇವಸ್ಥಾನಗಳಿಗೆ ಹೋಗಿ ಬರುತ್ತಾರೆ. ಈ ಹಬ್ಬದಲ್ಲಿ ಬೇವು ಬೆಲ್ಲಕ್ಕೆ ಅತ್ಯಂತ ಪ್ರಾಶಸ್ತ್ಯವಿದೆ. ಬೇವುಗೆ ಕ್ರಿಮಿನಾಶಕ ಔಷಧ ಗುಣಗಳಿವೆ. ಬೇವು ತಿಂದು ಜಾಗೃತ ಮನಸ್ಸು ಸಮಾಧಾನ ಪಟ್ಟುಕೊಳ್ಳುತ್ತದೆ. ಬೇವು ಜೀವನದಲ್ಲಿಯ ಕಹಿಗೆ, ಬೆಲ್ಲ ಸಿಹಿಗೆ ಸಂಕೇತ. ಬೇವು ಬೆಲ್ಲಗಳ ಮಿಶ್ರಣ ಜೀವನಲ್ಲಿಯ ಸುಖ ದುಃಖಗಳ ಪ್ರತೀಕ. ಬೇವಿಗೆ ತನ್ನ ಸಂಪರ್ಕದಲ್ಲಿರುವ ವಸ್ತುಗಳನ್ನು ಸಂರಕ್ಷಿಸುವ ವಿಶೇಷ ಶಕ್ತಿಯಿದೆ. (ಧವಸ ಧಾನ್ಯಗಳಲ್ಲಿ ಬೇವಿನ ಸೊಪ್ಪು ಬೆರಸಿ ಚೀಲ ತುಂಬುತ್ತಾರೆ. ಇಲ್ಲ ಹಗೆಗಳಿಗೆ ಹಾಕುತ್ತಾರೆ. ಇದರಿಂದ

ಹುಳುಗಳು ದವಸಕ್ಕೆ ಹತ್ತುವುದಿಲ್ಲ). ಆದಿಮಾನವನ ತಿಳುವಳಿಕೆ ಮೂಡಿದಾಗ ತನ್ನ ಮಾರ್ಯಾದೆ ಮುಚ್ಚಿಗೊಳ್ಳಲು ಸೊಂಟದ ಸುತ್ತ ಕಟ್ಟಿ ಕೊಂಡಿದ್ದು ಬೇವಿನ ತೊಂಗಲೇ ಎಂದು ತೋರುತ್ತದೆ. (ಮರಗಳಲ್ಲಿ ಬೇವು ಸಾರ್ವತ್ರಿಕ) ಬೆತ್ತಲೆ ಸೇವೆ ಸಲ್ಲಿಸುವವರು ಸೊಂಟದ ಸುತ್ತ ಬೇವಿನ ತೊಂಗಲನ್ನೇ ಕಟ್ಟಿಕೊಂಡಿರುತ್ತಾರೆ. ಮುಸ್ಲಿಮರಲ್ಲಿ ಸ್ಮಶಾನದಲ್ಲಿ ಹೆಣ ಹೂಳಿದ ಮೇಲೆ ಅವರ ಗುಡ್ಡೆಯ. ಅಕ್ಕ ಪಕ್ಕದಲ್ಲಿ ಬೇವಿನ ಗಿಡ ಬೆಳೆಸುತ್ತಾರೆ. ಮಸ್ಲಿಂ ಬಾಂಧವರಲ್ಲಿಯೂ ಬೇವಿಗೆ ಹೆಚ್ಚು ಪ್ರಶಸ್ತ್ಯವನ್ನು ನೀಡುತ್ತಾರೆ.

ಈ ಹಬ್ಬವು ಬೇವು ಬೆಲ್ಲ ರುಚಿ ನೋಡುವುದರೊಂದಿಗೆ ಹಬ್ಬದ ಮನೆಯೊಳಗಿನ ಬೆಳಗಿನ ಕಾರ್ಯಕ್ರಮಗಳು, ಮುಕ್ತಾಯವಾಗುತ್ತವೆ. ಬೇವು ಬೆಲ್ಲವನ್ನು ಮಾಡದವರು ಸಿಹಿ ಅಡಿಗೆಗಳನ್ನು ಮಾಡುವುದರೊಂದಿಗೆ ಹಬ್ಬವನ್ನು ಪ್ರಾರಂಭಿಸುತ್ತಾರೆ. ಈ ದಿವಸ ದೇವರಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ನಂತರ ಮನೆಯ ಸದಸ್ಯರೆಲ್ಲರೂ ಹಾಗೂ ನೆಂಟರು ಜೊತೆಗೂಡಿ ಸಿಹಿ ಊಟವನ್ನು ಮಾಡುತ್ತಾರೆ.

ಸಜ್ಜನ ಗಾಣಿಗರಲ್ಲಿ ಈ ಹಬ್ಬದಲ್ಲಿ ವಿಶೇಷವಾಗಿ ಜೂಜನ್ನು ಆಟವಾಡುವ ಪದ್ಧತಿ ಇದೆ. ಇದರಲ್ಲಿ ಹಣ ಗೆದ್ದವರು ಸಂತೋಷ ಪಟ್ಟರೆ, ಜೊತೆಗೆ ಈ ವರ್ಷಾರಾಂಭ ತಮಗೆ ಲಕ್ಕು ಇದೆ ಎನ್ನುತ್ತಾರೆ. ಹಣ ಸೋತವರು, ನಮ್ಮ ಲಕ್ಕು ಸರಿಯಾಗಿಲ್ಲ ಈ ವರ್ಷದಲ್ಲಿ ಎನ್ನುತ್ತಾರೆ.

ಹಬ್ಬದ ಎರಡನೇ ದಿವಸ ಸಂಜೆ ವಿಶೇಷವಾಗಿ ಚಂದ್ರ ದರ್ಶನ ಮತ್ತು ಪೂಜೆಯನ್ನು ಮಾಡುತ್ತಾರೆ. ನಂತರ ಈಶ್ವರ ದೇವಸ್ಥಾನಕ್ಕೆ ಹೋಗಿ ಅಂಜನೇಯ ದೇವಸ್ಥಾನಗಳಿಗೆ ಹೋಗಿ ದೇವರ ಪೂಜೆಯೊಂದಿಗೆ ಮನೆಗೆ ಬಂದು ನಂತರ ತಮ್ಮ ಕುಲ ಸಂಬಂಧಿಕರ ಮನೆಗಳೆಲ್ಲಕ್ಕೂ ಬೇಟಿನೀಡಿ ಹಿರಿಯರಿಗೆ ಕಿರಿಯರು ಗೌರವ ಪೂರ್ವಕ ಸಮಸ್ಕರಿಸಿ ಚಂದ್ರ ದರ್ಶನವಾಯಿತೆಂದು ಕೇಳುತ್ತಾರೆ.

ಯುಗಾದಿ ಮೂರನೇ ದಿವಸದಲ್ಲಿ ಕುಲಬಾಂಧವರಲ್ಲಿ ನೆಂಟರಿಗೆ ನೀರುಗ್ಗುವ ಕಾರ್ಯಕ್ರಮವಿರುತ್ತದೆ. ಹೀಗೆ ಸಜ್ಜನ ಗಾಣಿಗರಲ್ಲಿ ಯುಗಾದಿ ಹಬ್ಬವು ವಿಶೇಷವಾಗಿ ಮೂರು ದಿವಸಗಳ ಕಾಲ ನಡೆಯುತ್ತದೆ.

**ಬಸವಜಯಂತಿ**

ಸಜ್ಜನ ಗಾಣಿಗರು ಲಿಂಗಾಯಿತರು, ಲಿಂಗವನ್ನು ಧರಿಸಿದವರಾಗಿದ್ದಾರೆ. ಬಸವಣ್ಣನವರ ಜಯಂತಿಯು ಎಲ್ಲಾ ಲಿಂಗಾಯತರಿಗೆ ಸರ್ವಶ್ರೇಷ್ಠ ಹಬ್ಬ. ಅದು ಮನುಕುಲಕ್ಕೆ ಸ್ವಾತಂತ್ರ್ಯ ಸಾರುವ ಮಹಾಪುರುಷನಿಗೆ ಜನ್ಮವಿತ್ತಿದೆ. ಪ್ರತಿ ವರ್ಷ ವೈಶಾಖ ಶುದ್ಧ ಅಕ್ಷಯ ತೃತೀಯದಂದು ಈ ಹಬ್ಬವು ಬರುತ್ತದೆ. ಅಂದು ಎಲ್ಲಾ ಲಿಂಗಾಯತರು ಮನೆಯಲ್ಲಿ ಕಡ್ಡಾಯವಾಗಿ ಸ್ನಾನ ಪೂಜಾದಿಗಳನ್ನು ಮಾಡಿ ವಚನಶಾಸ್ತ್ರ ಪಾರಾಯಣ ಮಾಡಬೇಕು. ಸ್ಥಿತಿವಂತರು, ವ್ಯಾಪಾರಸ್ಥರು, ಅನುಕೂಲವಿದ್ದವರು ತಮ್ಮ ತಮ್ಮ ಯೋಗ್ಯತೆಗೆ ಅನುಸಾರವಾಗಿ ವಚನಗಳ ನೂರಾರು ಪ್ರತಿಗಳನ್ನು ಪ್ರಕಟಿಸಿ ತೆಂಗಿನಕಾಯಿ, ಬಾಳೆಹಣ್ಣು ಇತ್ಯಾದಿ ವಸ್ತುಗಳನ್ನು ಕೊಡುವ ಬದಲಿಗೆ ವಚನಗಳ ಪ್ರತಿಗಳನ್ನು ಹಂಚಬೇಕು. ವ್ಯಾಪಾರಸ್ಥರು ತಮ್ಮ ಅಂಗಡಿಗಳಲ್ಲಿ ಬಸವಣ್ಣನವರ ದೊಡ್ಡ ಭಾವ ಚಿತ್ರವನ್ನು ಅಲಂಕರಿಸಿದ್ದು ಸಹೋದ್ಯೋಗಿಗಳಿಗೆ ಆಮಂತ್ರಣ ನೀಡಿ ವಚನಗ್ರಂಥಗಳನ್ನು ಹಂಚುತ್ತಾರೆ.

ಅಂದು ಅಂಗಡಿಯ ವ್ಯಾಪಾರವನ್ನು ನಿಲ್ಲಿಸಿ ಬಡಬಗ್ಗರಿಗೆ ಕೈಲಾದಷ್ಟು ಸಹಾಯಮಾಡಿ, ವೈದ್ಯರು ಅಂದು ಉಚಿತ ಚಿಕಿತ್ಸೆಯನ್ನು ನೀಡಿ ಸೇವಾಭಾವವನ್ನು ಪ್ರಕಟಿಸಬೇಕು. ದೊಡ್ಡ ಪ್ರಮಾಣದಲ್ಲಿ ಬಸವ ಜಯಂತಿಯ ಮೆರವಣಿಗೆಗಳನ್ನು ಏರ್ಪಡಿಸಿ ಅದರಲ್ಲಿ ಭಾಗವಹಿಸಬೇಕು. ನಾನು ಶ್ರೀಮಂತ, ದೊಡ್ಡ ಅಧಿಕಾರಿ, ವಿದ್ಯಾವಂತ ಎಂಬ ಸಮ್ಮು ತೆರೆಯದ ಕಿಂಕರರಾಗಿ ಭಾಗವಹಿಸಿ ಗುರು ಭಕ್ತಿಯನ್ನು ಸಮಾಜ ಸಂಘಟನಾ ಪ್ರಜ್ಞೆಯನ್ನು ಪ್ರಕಟಿಸಬೇಕು.

ಚಿತ್ರದುರ್ಗ ಜಿಲ್ಲೆಯಲ್ಲಿ ಬಸವ ಜಯಂತಿಯ ಹಬ್ಬ ಅತ್ಯಂತ ವಿಶೇಷವಾಗಿ ನಡೆಯುತ್ತದೆ. ಪ್ರತಿ ಹಳ್ಳಿಗಳಲ್ಲಿಯೂ ಈಶ್ವರ ಮತ್ತು ಬಸವಣ್ಣನ ದೇವಸ್ಥಾನವಿದೆ. ಈ ದೇವಸ್ಥಾನಗಳಿಗೆ ಸುಣ್ಣ ಬಣ್ಣಗಳನ್ನು ಹಚ್ಚಿ ಅಲಂಕರಿಸುತ್ತಾರೆ. ಮಾವಿನ ತೋರಣವನ್ನು ಕಟ್ಟುತ್ತಾರೆ. ಈ ದಿನ ಬಸವಣ್ಣನವರ ಜನಿಸಿದ ದಿನ. ಆದ್ದರಿಂದ ಊರಿನಲ್ಲಿ ಬಸವಣ್ಣನವರ ಭಾವ ಚಿತ್ರವನ್ನು ಊರಿನ ತುಂಬಾ ಮೆರವಣಿಗೆ ಮಾಡುತ್ತಾರೆ. ಅಲ್ಲದೆ ಎತ್ತುಗಳಿಗೆ ಆದಿನ ಚೆನ್ನಾಗಿ ಸ್ನಾನ ಮಾಡಿಸಿ ಕೋಡಿಗೆ ಬಣ್ಣ ಹಚ್ಚಿ ಕುತ್ತಿಗೆಗೆ ಗೆಜ್ಜೆಯನ್ನು ಕಟ್ಟುತ್ತಾರೆ. ಅಲ್ಲದೆ ಮೂಗುದಾರ ಕಟ್ಟುತ್ತಾರೆ. ಹೂವಿನ ಹಾರ ಎತ್ತಿನ ಕೊರಳಿಗೆ ಹಾಕುತ್ತಾರೆ. ಎತ್ತುಗಳ ಬೆನ್ನ ಮೇಲೆ ಶಾಲುಗಳನ್ನು ಹಾಕುತ್ತಾರೆ. ಹೀಗೆ ಎತ್ತುಗಳಿಗೆ ಅಲಂಕರಿಸುತ್ತಾರೆ. ಪ್ರತಿಯೊಬ್ಬ ಊರಿನ ರೈತರು ತಮ್ಮ ಜೋಡಿ ಎತ್ತುಗಳಿಗೆ ಹೀಗೆ ಅಲಂಕಾರ ಮಾಡಿ ಊರಿನ ಸಾಮೂಹಿಕ ಎತ್ತುಗಳೊಂದಿಗೆ ಈಶ್ವರ ಮತ್ತು ಬಸವಣ್ಣನ ದೇವಾಲಯಕ್ಕೆ ಹೋಗಿ ದೇವರ ಪೂಜೆಯೊಂದಿಗೆ ಎತ್ತುಗಳನ್ನು ಪೂಜಿಸುತ್ತಾರೆ. ತಾವು ಎತ್ತುಗಳ ಜೊತೆ ತೆಗೆದುಕೊಂಡು ಹೋಗಿದ್ದ ತೆಂಗಿನಕಾಯಿ, ಬಾಳೇಹಣ್ಣು, ಉದ್ಬತ್ತಿ ಕರ್ಪೂರದೊಂದಿಗೆ ದೇವರ ಪೂಜೆ ಮಾಡಿಸುತ್ತಾರೆ. ನಂತರ ಹತ್ತಿರವಿದ್ದ ಆಂಜನೇಯನ ದೇವಾಲಯದ ಸುತ್ತಾ ಎತ್ತುಗಳನ್ನು ಸುತ್ತಿಸಿ ಪೂಜೆಯೊಂದಿಗೆ ಸಾಮೂಹಿಕ ಎತ್ತುಗಳೊಂದಿಗೆ ಊರಿನ ಸುತ್ತಾ ಮೆರವಣಿಗೆ ಹೋಗಿ, ನಂತರ ಎತ್ತಿನೊಂದಿಗೆ ಮನೆಗೆ ಬರುತ್ತಾರೆ. ಎತ್ತು ಮನೆಯ ಅಂಗಳಕ್ಕೆ ಬಂದಾಗ ಮನೆಯ ಹೆಣ್ಣುಮಕ್ಕಳು ಓಕಳಿ ತಟ್ಟೆಯೊಂದಿಗೆ ದೀಪವನ್ನು ಹಚ್ಚಿ ಆರತಿ ಬೆಳಗುತ್ತಾರೆ. ಎತ್ತುಗಳನ್ನು ಹಿಡಿದವನು ಆರತಿ ಬೆಳಗಿದವರಿಗೆ ೫೦ ರೂ ಅಥವಾ ೧೦೦ ರೂ ಹಣವನ್ನು ಕೊಡುತ್ತಾನೆ. ನಂತರ ಓಕಳಿಯನ್ನು ರಸ್ತೆಗೆ ಚಲ್ಲುತ್ತಾರೆ. ಆ ದಿನ ಎತ್ತುಗಳನ್ನು ಮನೆಯೊಳಗಿನಿಂದ ಕೊಟ್ಟಿಗೆಗೆ ಕರೆದೊಯ್ಯುತ್ತಾರೆ. ಎತ್ತುಗಳು ಮನೆಯೊಳಗೆ ಪ್ರವೇಶಿಸುವಾಗ ಬಲಗಾಲನ್ನು ಇಡಬೇಕೆಂದು ಸಜ್ಜನ ಗಾಣಿಗರಲ್ಲಿ ನಂಬಿಕೆಯಿದೆ. ಆ ದಿನ ಎತ್ತುಗಳು ಮನೆಯೊಳಗೆ ಪ್ರವೇಶಿಸಿದಾಗ ಸಗಣಿ ಹಾಕುವುದು ಹಾಗೂ ಗಂಜಳ ಚಲ್ಲಿದಲ್ಲಿ ಕುಟುಂಬಕ್ಕೆ ಒಳ್ಳೆಯದಾಗುತ್ತದೆಂಬ ನಂಬಿಕೆ ಸಜ್ಜನ ಗಾಣಿಗರಲ್ಲಿದೆ. ಆ ದಿನ ಜೋಳದಿಂದ ಹಾಗೂ ಅಕ್ಕಿಯ ಅನ್ನವನ್ನು ಎತ್ತುಗಳಿಗೆ ತಿನ್ನಲು ಇಡುತ್ತಾರೆ. ಅಲ್ಲದೆ ಮನೆಯಲ್ಲಿ ಹೋಳಿಗೆ ಅಡಿಗೆ ಮಾಡಿ ಊಟಮಾಡುತ್ತಾರೆ. ಆದಿನ ಹೊಸ ವಸ್ತ್ರಗಳನ್ನು ಉಟ್ಟು ಅತ್ಯಂತ ಸಂಭ್ರಮದಿಂದ ಹಬ್ಬ ಆಚರಿಸುತ್ತಾರೆ. ಈ ಹಬ್ಬದಲ್ಲಿ ಐಯ್ಯನವರು ಈ ಎತ್ತುಗಳ ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆ.

ಈ ಬಸವ ಜಯಂತಿಯು ರಾಜಸಿದ್ಧಿಯ ಯೋಗ ಎಂದು ಆ ದಿವಸ ಎಲ್ಲರೂ ಒಡವೆ ವಸ್ತುಗಳನ್ನು ಪಡೆಯುತ್ತಾರೆ. ಸಾಮೂಹಿಕ ವಿವಾಹ, ಗೃಹ ಪ್ರವೇಶ, ಗೃಹ ಕಟ್ಟಡಕ್ಕೆ ಪೂರ್ವದಲ್ಲಿ ಸೈಟಿನ ಈಶಾನ್ಯ

ದಿಕ್ಕಿಗೆ ಸ್ವಲ್ಪ ನೆಲ ತೋಡಿಸಿ ಅದರೊಳಗೆ ಮೂರು ಕಲ್ಲುಗಳನ್ನಿಟ್ಟು ಪೂಜೆ ಮಾಡುತ್ತಾರೆ. ಆ ದಿನ ಮನೆಕಟ್ಟುವ ಕೆಲಸಗಾರನಿಗೆ ಹೊಸ ಬಟ್ಟೆಯನ್ನು ಅಥವಾ ಟವಲ್‌ನ್ನು ಕೊಡುತ್ತಾರೆ. ಮುತ್ತೈದೆಯರು ಐದು ಜನಸೇರಿ ಈ ಪೂಜೆಯನ್ನು ಮಾಡುತ್ತಾರೆ. ಈ ದಿವಸದಂದು ಮನೆಗೆ ಹೊಸ ಬಾಗಿಲು ಇಡುವ ಕಾರ್ಯವನ್ನು ಮಾಡುತ್ತಾರೆ. ಈ ಕಾರ್ಯದಲ್ಲಿ ಬಾಗಿಲ ಪೂಜೆಯೊಂದಿಗೆ ಬಡಗಿಗೆ ಹೊಸ ಬಟ್ಟೆ ಅಥವಾ ಟವಲನ್ನು ಕೊಡುತ್ತಾರೆ. ಈ ಬಸವ ಜಯಂತಿಯ ದಿನದಂದು ವಿವಾಹ ಮಾಡಿಕೊಳ್ಳುವವರು ಉಂಟು. ಒಟ್ಟಾರೆ ಈ ದಿನದ ಆಚರಣೆಯು ಶುಭ ಸಂಕೇತವಾಗಿದೆ.

**ಬಸವಣ್ಣನವರ ವಚನಗಳು**

೦೧. ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ
ಮುನಿಯ ಬೇಡೆ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇತರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮ ದೇವರ ಒಲಿಸುವ ಪರಿ !

೦೨. ಮೃತ್ಯು ಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿಸಲ್ಲುವವರು ಅಲ್ಲಿಯೂ ಸಲ್ಲುವರು
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ
ಕೂಡಲ ಸಂಗಮ ದೇವಾ !

೦೩. ದಯವಿಲ್ಲದಾ ಧರ್ಮವಾವುದಯ್ಯ ?
ದಯವಿರಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯ
ಕೂಡಲ ಸಂಗಯ್ಯ ನಂತಲ್ಲಿದೊಲ್ಲನಯ್ಯ

೦೪. ಎಮ್ಮವರಿಗೆ ಸಾವಿಲ್ಲ, ಎಮ್ಮವರು ಸಾವನರಿಯರು
ಸಾವೆಂಬುದು ಸ್ವಾಯವಲ್ಲ
ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ
ಆಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯುಂಟೇ
ಕೂಡಲ ಸಂಗಮದೇವ !

೦೫. ಉಳ್ಳವರು ಶಿವಾಲಯವ ಮಾಡಿವರು;
ನಾನೇನ ಮಾಡಲಯ್ಯ ಬಡವನು!
ಎನ್ನ ಕಾಲೇಕಂಭ, ದೇಹವೇ ದೇಗುಲ

ಶಿರವೇ ಹೊನ್ನ ಕಳಶವಯ್ಯ!
ಕೂಡಲಸಂಗಮದೇವ ಕೇಳಯ್ಯ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

೦೬. ಛಲಬೇಕು ಶರಣಂಗೆ, 'ಪರಧನವನೊಲ್ಲೆ'ನೆಂಬ,
ಛಲಬೇಕು ಶರಣಂಗೆ 'ಪರಸತಿಯನೊಲ್ಲೆ'ನೆಂಬ
ಛಲಬೇಕು ಶರಣಂಗೆ 'ಪರದೈವವನೊಲ್ಲ'ನೆಂಬ
ಛಲಬೇಕು ಶರಣಂಗೆ 'ಲಿಂಗ ಜಂಗಮ ಒಂದೇ' ಎಂಬ
ಛಲಬೇಕು ಶರಣಂಗೆ 'ಪ್ರಸಾದ ದಿಟವೆಂಬ' ;
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮ ದೇವ

೦೭. ನುಡಿದರೆ ಮುತ್ತಿನ ಹಾರದಂತಿರಬೇಕು;
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಪಟಿಕದ ಸಲಾಕೆಯಂತಿರಬೇಕು;
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನ ಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯ?

೦೮. ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ;
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲ ಸಂಗಮದೇವ

೦೯. ಶರಣ ನಿದ್ರೆಗೈದ್ದೆರೆ ಜಪ ಕಾಣಿರೊ
ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರೋ!
ಶರಣ ನುಡಿದದೆ ಶಿವತತ್ವ ಕಾಣಿರೋ
ಕೂಡಲ ಸಂಗಮನ ಶರಣರ ಕಾಯಕವೇ ಕೈಲಾಸ ಕಾಣಿರೋ!

೧೦. ಮೌನದಲುಂಬುದು ಆಚಾರವಲ್ಲ;
ಲಿಂಗಾರ್ಪಿತವ ಮಾಡಿದ ಬಳಿಕ
ತುತ್ತಿಗೊಮ್ಮೆ ''ಶಿವಶರಣೆ''ನ್ನು ತಿರಬೇಕು
ಕರಣ ವ್ಯಕ್ತಿಗಳಡಗುವುವು
ಕೂಡಲಸಂಗನ ನೆನೆಯುತ್ತ ಉಡರೆ

## ಸ್ವರ್ಣಗೌರಿ ವ್ರತ

ಹಿಂದೂಗಳಿಗೆ ವರ್ಷವಿಡೀ ಹಬ್ಬಗಳಿವೆ ಎಂದು ಹೇಳಿದರೆ ತಪ್ಪಾಗಲಾರದು. ನಾವು ಪಂಚಾಂಗವನ್ನು ತೆರೆದು ನೋಡಿದಾಗ ಅದರಲ್ಲಿ ಒಂದು ದಿನವೂ ವಿಶೇಷತೆ ಇಲ್ಲದೆ ಇರುವುದು ನಮ್ಮ ಗಮನಕ್ಕೆ ಬರುವುದು ಕಡಿಮೆ. ಹಬ್ಬಗಳನ್ನು ಮತ್ತು ವ್ರತಗಳನ್ನು ಆಚರಿಸುವುದರಿಂದ ಮನಸ್ಸಿಗೆ ಆನಂದವುಂಟಾಗುವುದಲ್ಲದೆ ಮನಃ ಶಾಂತಿ, ನೆಮ್ಮದಿ ಮತ್ತು ಮುಖ್ಯವಾಗಿ ಬಂಧು ಬಳಗದವರಲ್ಲಿ ಪ್ರೀತಿ ಸ್ನೇಹ ಮತ್ತು ಬಾಂಧವ್ಯ ಹೆಚ್ಚುವುದು. ಆದ್ದರಿಂದಲೆ ಋಷಿಮುನಿಗಳು ದೇವತೆಗಳ ಅನುಗ್ರಹದಿಂದ ಪೂಜೆ ಮತ್ತು ವ್ರತಗಳನ್ನು ಪಡೆದುಕೊಂಡು ತಾವು ಆಚರಣೆ ಮಾಡಿ ತಮ್ಮ ಶಿಷ್ಯವೃಂದದವರಿಗೂ ಉಪದೇಶಿಸಿ ಅದನ್ನು ಲೋಕಕ್ಕೆ ಪ್ರಚಾರ ಮಾಡಿದ್ದಾರೆ.

ತ್ರೇತಾಯುಗ ಮತ್ತು ದ್ವಾಪರಯುಗದಲ್ಲಿ ಶ್ರೀರಾಮ ಮತ್ತು ಧರ್ಮರಾಯನು ಪೂಜೆ ಮತ್ತು ವ್ರತಗಳನ್ನು ಮಾಡಿರುವ ವಿಷಯಗಳನ್ನು ನಾವು ರಾಮಾಯಣ ಮತ್ತು ಮಹಾಭಾರತದಲ್ಲಿ ಕಾಣಬಹುದು.

ಪ್ರತಿವರ್ಷ ಗಣೇಶನ ಜೊತೆಗೆ ಬರುವ ಸ್ವರ್ಣಗೌರಿ ಹಬ್ಬ ಮುತ್ತೈದೆಯರಿಗೆಲ್ಲಾ ಸಕಲ ಸೌಭಾಗ್ಯ ನೀಡುವ ಹಬ್ಬವಾಗಿದೆ. ಕೆಲವು ಸಜ್ಜನ ಗಾಣಿಗರಲ್ಲಿ ಗೌರಿಹಬ್ಬದ ದಿವಸ ನಾಗರಪಂಚಮಿಯನ್ನು ಆಚರಿಸುತ್ತಾರೆ. ಅಂದರೆ ಆದಿನ ಮನೆಯಲ್ಲಿ ತಳಿರುತೋರಣಗಳನ್ನು ಕಟ್ಟಿ ಮನೆಯಲ್ಲಿರುವ ದೇವರುಗಳನ್ನು ಪೂಜಿಸಿ ನಂತರ ಹೊಲದಲ್ಲಿರುವ ಹುತ್ತಕ್ಕೆ ಐದು ಹುಡಿಗಳನ್ನಿಟ್ಟು ಹುತ್ತಕ್ಕೆ ಹೊಸ ಬಟ್ಟೆಯನ್ನು ಹಾಕಿ ಹತ್ತಿಯಿಂದ ಅರಿಶಿಣ, ಕುಂಕುಮ ಹಾಗೂ ಪತ್ರೆಯಿಂದ ತಯಾರಿಸಿದ ಕಂಕಣವನ್ನು ಹುತ್ತಕ್ಕೆ ಹಾಕುತ್ತಾರೆ. ಜೊತೆಗೆ ಅಲ್ಲಿ ಹೋದವರಿಗೆಲ್ಲ ಬಲಗೈಗೆ ಕಂಕಣವನ್ನು ಕಟ್ಟಿ ಹುತ್ತ ಪೂಜಿಸಿ ಅಲ್ಲಿದ್ದವರೆಲ್ಲಾ ಹಾಲನ್ನು ಹುತ್ತಕ್ಕೆ ಬಿಡುತ್ತಾರೆ. ಜೊತೆಗೆ ಅಲ್ಲಿ ಬಂದಿರುವ ಮುತ್ತೈದೆಯರಿಗೆ ಚಿಗಳಿ, ಟಮಟ, ಎಲೆ, ಅಡಿಕೆ, ಬಾಳೆಹಣ್ಣನ್ನು ಹೊಂದಿರುವ ಉಡಿಯನ್ನು ನೀರಿಯರ ಸೆರಗಿನೊಳಗೆ ಹಾಕುತ್ತಾರೆ. ನಂತರ ಮನೆಯ ಹೆಣ್ಣು ಮಕ್ಕಳು ಕಾಯನ್ನು ಒಡೆದು ಕರ್ಪೂರ ಬೆಳಗುತ್ತಾರೆ. ಕಡೆಗೆ ಒಂದು ಉಡಿಯನ್ನು ಹುತ್ತದೊಳಗೆ ಹಾಕುತ್ತಾರೆ.

## ಗಂಗಾ ಪೂಜೆ

ಆದಿನ ಹುತ್ತದ ಪೂಜೆ ನಂತರ ಬೋರ್‌ವೆಲ್ ಪೂಜೆಯನ್ನು ಮಾಡಿ ಅಲ್ಲಿಂದ ಒಂದು ಕೊಡ ನೀರನ್ನು ಕೊಡಕ್ಕೆ ತುಂಬಿ ಅದನ್ನು ವಿಶೇಷವಾಗಿ ಪೂಜಿಸಿ ಮನೆಯ ಸೊಸೆಯೊಬ್ಬರಿಗೆ ಹೊರಿಸಿಕೊಂಡು ಮನೆಗೆ ಬರುತ್ತಾರೆ. ಕೆಲವರು ಹುತ್ತದ ಮತ್ತು ಗಂಗಾ ಪೂಜೆ ನಂತರ ಅಲ್ಲಿಗೆ ತೆಗೆದುಕೊಂಡು ಹೋದ ಊಟವನ್ನು ಅಲ್ಲಿದ್ದವರೆಲ್ಲರಿಗೂ ಊಟ ಬಡಿಸುತ್ತಾರೆ. ನಂತರ ಗಂಗೆಯನ್ನು ಹೊತ್ತು ಮನೆಗೆ ಬರುತ್ತಾರೆ. ಗೌರಿ ಹಬ್ಬದಂದು ಪುಟ್ಟ ಪುಟ್ಟ ಮಕ್ಕಳು, ಕುಮಾರಿಯರು ಮತ್ತು ಮುತ್ತೈದೆಯರು ಸೇರಿ ಆಚರಿಸುವ ಈ ಗೌರಿಹಬ್ಬ ಭಾದ್ರಪದ ಶುದ್ಧ ತದಿಗೆ ದಿನ (ಒಮ್ಮೊಮ್ಮೆ ಗೌರಿ ಗಣೇಶ ಒಟ್ಟಿಗೆ ಬರಬಹುದು.) ಗಣೇಶ ಹಬ್ಬದ ರೀತಿಯಲ್ಲಿ ಅದ್ದೂರಿಯಾಗಿ ಆಚರಿಸದಿದ್ದರೂ ಸರಳವಾಗಿ ಭಕ್ತಿಯಿಂದ ಆಚರಿಸುವರು. ಈಗೌರಿ ಹಬ್ಬ ಕರ್ನಾಟಕದಲ್ಲಿ ದಕ್ಷಿಣದ ಕಡೆ ಅಂದರೆ ಮಲೆನಾಡು ಪ್ರದೇಶಗಳಲ್ಲಿ ಹೆಚ್ಚು ಆಚರಿಸುವುದುಂಟು.

ಸ್ವರ್ಣಗೌರಿ ಪೂಜೆ ಕುರಿತು ಚಂದ್ರಪ್ರಭ ಎಂಬ ರಾಜನು ಬೇಟೆಯಾಡಲು ಅರಣ್ಯಕ್ಕೆ ಹೋದಾಗ ಅಲ್ಲಿ ಒಂದು ರಮಣೀಯವಾದ ಸರೋವರದ ಬಳಿ ಅನೇಕ ಅಪ್ಸರೆಯರು ನಿಯಮದಿಂದ ಸ್ವರ್ಣಗೌರಿ ಪೂಜೆಯನ್ನು ಮಾಡುತ್ತಿರುವುದನ್ನು ಕಾಣುತ್ತಾನೆ. ಪೂಜೆಯ ನಂತರ ಆ ರಾಜನು ಈ ವ್ರತದ ಬಗ್ಗೆ ತನಗೆ ವಿಸ್ತಾರವಾಗಿ ತಿಳಿಸೆಂದು ಕೇಳಲು ಆ ಅಪ್ಸರೆಯರು ವ್ರತದ ಬಗ್ಗೆ ತಿಳಿಸುವರು. ಈ ಪೂಜೆಯಿಂದ ಪುತ್ರಪೌತ್ರಾಭಿವೃದ್ಧಿಯುಂಟಾಗುವುದೆಂದು ಮತ್ತು ಈ ವ್ರತವು ಭಾದ್ರಪದ ಶುದ್ಧ ತದಿಗೆ ದಿನ ಆಚರಿಸಬೇಕೆಂದು ತಿಳಿಸಿ ೧೬ ಗಂಟು ಹಾಕಿದ ದಾರವನ್ನು ಕೊಡುತ್ತಾರೆ. ರಾಜನು ಅರಮನೆಗೆ ಬಂದ ನಂತರ ತನ್ನ ಇಬ್ಬರು ಪತ್ನಿಯರಿಗೆ ಆ ದಾರವನ್ನು ಕೊಡಲು, ಮೊದಲನೆ ಪತ್ನಿ ಆ ದಾರವನ್ನು ತಿರಸ್ಕರಿಸಿ ಒಣಗಿದ ಗಿಡದ ಮೇಲೆ ಎಸೆದಳು. ಆ ಗಿಡವು ದಾರದ ಮಹಿಮೆಯಿಂದ ತಕ್ಷಣ ಚಿಗುರಿ ಬೆಳೆಯತೊಡಗಿತು. ಅದನ್ನು ಕಂಡ ಕಿರಿಯ ಪತ್ನಿಯು ಆ ದಾರವನ್ನು ಧರಿಸಿ ರಾಜನು ಹೇಳಿದ ಕ್ರಮದಲ್ಲಿ ಸ್ವರ್ಣಗೌರಿ ವ್ರತವನ್ನು ಮಾಡಿದಳು. ನಂತರ ಅವರಿಗೆ ಪುತ್ರ ಸೌಭಾಗ್ಯವುಂಟಾಗಿ ಸತಿಪತಿಯರು ಶಿವಲೋಕವನ್ನು ಹೊಂದಿ ಮುಕ್ತಿಯನ್ನು ಪಡೆದರೆಂಬ ವಿಷಯ ಸ್ಕಂದ ಪುರಾಣದಿಂದ ತಿಳಿಯುತ್ತದೆ.

ಈ ಸ್ವರ್ಣಗೌರಿ ಹಬ್ಬದಲ್ಲಿ ಸಜ್ಜನ ಗಾಣಿಗರಲ್ಲಿ ಬಾಗಿನ ಕೊಡುವುದು ವಿಶೇಷ. ಬಾಗಿನವೆಂದರೆ ಗೌರವ ಪೂರ್ವಕವಾಗಿ ಕೊಡುವ ದಾನ ಅಥವಾ ಸತ್ಕಾರವೆಂದು ಕರೆಯುತ್ತಾರೆ. ಮದುವೆಯಾದ ಹೆಣ್ಣು ಮಕ್ಕಳಿಗೆ ಗೌರಿ ಹಬ್ಬದಂದು ಕೊಡುವ ಉಡುಗೊರೆ ಈ ಬಾಗಿನವಾಗಿದೆ. ಈ ಬಾಗಿನವನ್ನು ಸಹೋದರಿಯರಿಗೆ ಸಹೋದರ ಕೊಡಬೇಕು. ಈ ಬಾಗಿನದಲ್ಲಿ ಅಂದರೆ ಮೊರದಲ್ಲಿ ಅರಿಶಿನ, ಕುಂಕುಮ, ಹೂವು, ಹಣ್ಣು, ತೆಂಗಿನಕಾಯಿ, ಅಕ್ಕಿ, ಬೇಳೆ, ಬೆಲ್ಲ, ಸೀರೆ, ಕುಪ್ಪಸ, ಬಳೆ, ಬಿಚ್ಚೋಲೆ, ಗೌರಿದಾರ, ಕಾಲುಂಗುರ, ಕಿವಿಯೋಲೆ, ಕಾಡಿಗೆಯನ್ನು ಇಟ್ಟು ಮತ್ತೊಂದು ಮರದಿಂದ ಅದನ್ನು ಮುಚ್ಚಿ ತವರು ಮನೆಯವರು ಮಗಳಿಗೆ ಕಳಿಸುತ್ತಾರೆ. ಈಗ ಸಮಯದ ಒತ್ತಡದಿಂದಾಗಿ ಇದರ ಬದಲು ಹಣವನ್ನು ಕಳಿಸುವ ಪದ್ಧತಿ ರೂಢಿಯಲ್ಲಿದೆ. ಈ ಬಾಗಿನ ಪಡೆಯುವುದರಿಂದ ಮುತ್ತೈದೆಯರ ಸಕಲ ಸೌಭಾಗ್ಯವನ್ನು ಪಡೆಯುತ್ತಾರೆಂಬ ನಂಬಿಕೆಯಿದೆ. ನಮ್ಮ ಹೆಣ್ಣು ಮಕ್ಕಳು ಮದುವೆಯಾಗಿ ಮೊದಲನೆ ವರ್ಷದಲ್ಲಿ ಹದಿನಾರು ಜೊತೆ ಬಾಗಿನ ನೀಡಬೇಕೆಂಬ ಪದ್ಧತಿಯಿದೆ. ಗೌರಿಪೂಜೆಯಾದ ನಂತರ ಸುಮಂಗಲಿಯರೆಲ್ಲಾ ಗೌರಿ ಬಾಗಿನವನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವರು. ಪುಟ್ಟ ಪುಟ್ಟ ಮಕ್ಕಳು ಸಹ ಈ ಬಾಗಿನವನ್ನು ಕೊಡುವರು ಇದರಲ್ಲಿ ಬಣ್ಣ ಬಣ್ಣದ ಬಳೆ, ಸರ, ಹಣೆಬೊಟ್ಟುಗಳನ್ನು ಇಟ್ಟಿರುತ್ತಾರೆ. ಈ ಬಾಗಿನವನ್ನು ಕೊಡುವ ಒಳ ಅರ್ಥ ಪ್ರತಿಯೊಬ್ಬರಲ್ಲಿಯೂ ಹಂಚಿಕೆಯ ಭಾವನೆಯುಂಟಾಗಲಿ ಎಂದು ಗೌರಿ ಪೂಜೆಗೆ ಮೊದಲು ಗಣಪತಿ ಪೂಜೆ ನಂತರ ಗಂಗಾಪೂಜೆಯಾದ ಮೇಲೆ ಅರಿಶಿನ ಅಥವಾ ಮಣ್ಣಿನಿಂದ ಮಾಡಿದ ಗೌರಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ಅದರ ಪೂಜೆಯನ್ನು ಮಾಡಬೇಕು. ಸಜ್ಜನಗಾಣಿಗರಲ್ಲಿ ಗೌರಿಯನ್ನು ಕೂಡಿಸಿ ಪೂಜೆ ಮಾಡುವ ಪದ್ಧತಿ ಎಲ್ಲರ ಮನೆಗಳಲ್ಲೂ ಇರುವುದಿಲ್ಲ. ಆದ್ದರಿಂದ ಸುಮಂಗಳೆಯರು ಗೌರಿಯನ್ನು ಕೂಡಿಸಿದವರ ಮನೆಗೆ ಹೋಗಿ ಪೂಜಿಸಿ ಬರುವರು. ಗೌರಿಯನ್ನು ಹಿಂದೆಲ್ಲಾ ೨೧ ದಿವಸದವರೆಗೂ ಇಟ್ಟು ಪೂಜಿಸುತ್ತಿದ್ದರು. ಆದರೆ ಕಾಲ ಬದಲಾವಣೆಯಾದಂತೆ

ಹಾಗೂ ಕೆಲಸದೊತ್ತಡ ಜಾಸ್ತಿಯಾದಂತೆಲ್ಲಾ ಈಗ ಗೌರಿಯನ್ನು ಕೂರಿಸಿದ ದಿನ ಅಥವಾ ಮಾರನೇ ದಿನವೇ ನದಿಗೆ, ಕೆರೆಗೆ ವಿಸರ್ಜಿಸುವ ಪದ್ಧತಿ ರೂಢಿಯಲ್ಲಿದೆ. ನಾವು ಯಾವುದೇ ಪೂಜೆ ಅಥವಾ ವ್ರತಗಳನ್ನು ಅದರ ಅರ್ಥತಿಳಿದು ಮಾಡಿದರೆ ಫಲ ಹೆಚ್ಚು ಎಂದು ಹೇಳಬಹುದು (ಕರ್ಮವೀರ ದಿ.೧೬.೦೯.೨೦೦೭ ಪು.೧೩).

ಸುಮಂಗಳೆಯರು ಈ ವ್ರತವನ್ನು ನಿಯಮ ನಿಷ್ಠೆಯಿಂದ ಆಚರಿಸಿದರೆ ಸಂತಾನ ಭಾಗ್ಯ ವಿವಾಹವಾಗದ ಹೆಣ್ಣು ಮಕ್ಕಳು ಆಚರಿಸಿದರೆ ಕಂಕಣ ಭಾಗ್ಯ ದೊರೆಯುತ್ತದೆ. ಅಥವಾ ಕನ್ನಿಕೆಯರು ಆಚರಿಸಿದರೆ ವಿದ್ಯಾಭ್ಯಾಸ ದೊರೆಯುತ್ತದೆ ಎಂದು ನಂಬಿಕೆಯಿದೆ.

ಈಗಿನ ಆಧುನಿಕ ಯುಗದಲ್ಲಿ ಗೌರಿ ಗಣೇಶನ ಮೂರ್ತಿಗಳನ್ನು ರಸಾಯನಿಕ ಬಣ್ಣಗಳನ್ನು ಬಳಸಿ ತಯಾರಿಸಿ ಮಾರುಕಟ್ಟೆಯಲ್ಲಿ ಮಾರುತ್ತಾರೆ. ಆದರೆ ಬಣ್ಣರಹಿತವಾದ ಗೌರಿ ಗಣೇಶ ಮೂರ್ತಿಗಳೇ ಪೂಜೆಗೆ ಶ್ರೇಷ್ಠ ಹಾಗೂ ವಿಸರ್ಜಿಸಿದ ನಂತರ ನೀರುಸಹ ಮಲಿನಗೊಳ್ಳದೆ ಪರಿಸರ ಮಾಲಿನ್ಯವನ್ನು ತಡೆಗಟ್ಟಿದಂತಾಗುತ್ತದೆ.

ಸ್ವರ್ಣಗೌರಿ ಹಬ್ಬದ ದಿನ ಈ ಕೆಳಗಿನ ಶ್ಲೋಕವನ್ನು ೧೦೮ ಬಾರಿ ಶ್ರದ್ಧಾಭಕ್ತಿಯಿಂದ ಜಪಿಸಿದರೆ ಹೆಚ್ಚಿನ ಫಲ ಸಿಗುವುದು.

''ಸರ್ವ ಮಂಗಳ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಿಕೆ

ಶರಣ್ಯೇತ್ರ್ಯಾಂಬಿಕೆ ಗೌರಿ ನಾರಾಯಣೆ ನಮೋಸ್ತುತೆ''

**ಗಣೇಶ ಚತುರ್ಥಿ**

ಶ್ರಾವಣ ಉರುಳಿ ಭಾದ್ರಪದ ಮಾಸವು ಬರಲು ಅದರಲ್ಲಿ ಅತಿ ಪ್ರಸಿದ್ಧ ಸಂಪ್ರದಾಯವು ಬರುವುದು. ಅದೇ ಗಣೇಶೋತ್ಸವ. ಗಣಪತಿಯು ಜಾತಿ, ಮತ, ಪಂಥವನ್ನು ಮೀರಿ ಬೆಳೆದಿದ್ದಾನೆ. ಅಂದರೆ ಗಣಪತಿ ವಿಶಿಷ್ಟ ಜಾತಿಗೆ ಮಾತ್ರ ದೇವತೆಯೆನಿಸದೆ ಹಿಂದೂ ಧರ್ಮವನ್ನು ನಂಬುವ ಎಲ್ಲರೂ ಸಮಾನವಾಗಿ ಪೂಜಿಸುವ ದೇವತೆಯಾಗಿದ್ದಾನೆ. ಇದಕ್ಕೆ ಪ್ರಮುಖ ಕಾರಣವೆಂದರೆ ಹಿಂದೆ ಆರ್ಯರು ಹಾಗೂ ದ್ರಾವಿಡರ ನಡುವೆ ಅನೇಕ ವೈರುಧ್ಯಗಳಿದ್ದವು. ಆದರೆ ವಿನಾಯಕ ಆರ್ಯ ಹಾಗೂ (ದ್ರಾವಿಡ) ಸಂಸ್ಕೃತಿಗಳ ಸಂಘರ್ಷ ಕರಗಿ ಒಂದಾಗಿ ಇಳಿದ ಎರಕವೆಂದು ಹೇಳಬಹುದು. ಈ ಪಂಗಡಗಳ ಮುಖಂಡರು ಪರಸ್ಪರ ಏಕತೆಯನ್ನು ಐಕ್ಯತರಲು ಪ್ರಯತ್ನಿಸಿರುವುದು ಪುರಾಣಗಳಿಂದ ತಿಳಿದು ಬರುತ್ತದೆ. ಅದರ ಪ್ರಯತ್ನದ ಫಲವೇ ಅವರು ಕಲ್ಪಿಸಿದ ಸಂಯೋಗ ದೇವತೆ, ಅವರ ವಿಚಾರದಂತೆ ಶಿವ ಪಾರ್ವತಿಯರ ಪ್ರೀತಿಯ ಪುತ್ರನಾದ ಗಣಪತಿಯೇ ಸಂಯೋಗ ದೇವತೆ. ಆರ್ಯರು ತಮ್ಮ ವೈದಿಕ ದೇವತೆಗಳ ಗುಣಗಳನ್ನು ದ್ರಾವಿಡರು ಶಿವಾಚಾರ್ಯರ ಸೂಚನೆಗಳನ್ನು ಈ ಮಾನಸ ಪುತ್ರನಲ್ಲಿ ಸೇರಿಸಿ, ಓಂಕಾರ ಸ್ವರೂಪಿಯನ್ನಾಗಿ ಮಾಡಿ ಎಲ್ಲ ಶುಭ ಕಾರ್ಯಗಳ ಆರಂಭ ಪೂಜೆಯನ್ನು ಸಲ್ಲಿಸುವ ಸಾರವನ್ನು ವಿನಾಯಕನಿಗೆ ಕೊಟ್ಟರು ಅಂದಿನಿಂದ ವಿಘ್ನೇಶ್ವರ ಎರಡು ಜನಾಂಗಕ್ಕೆ ದೇವರಾದನು.

ಗಣೇಶನು ಶಿವ, ವಿಷ್ಣು ಮುಂತಾದ ದೇವತೆಗಳಿಗಿಂತಲೂ ಹೆಚ್ಚು ಜನಪ್ರಿಯವಾದ ದೇವರಾಗಿದ್ದಾನೆ. ಜನ ಜೀವನದ ಪ್ರತಿಯೊಂದು ಪ್ರಾರಂಭದ ಕಾರ್ಯಗಳಾದ ವಿದ್ಯಾಭ್ಯಾಸ, ವಿವಾಹ, ಉಪನಯನ, ಗೃಹ ಪ್ರವೇಶ ಇತ್ಯಾದಿಗಳಲ್ಲಿ ಪ್ರಥಮ ಪೂಜೆ ಈ ಗಣಪನಿಗೆ ಸಲ್ಲುತ್ತದೆ. ಇಷ್ಟೆ ಅಲ್ಲದೆ ಮಿಕ್ಕ ದೇವತಾ ಕಾರ್ಯಗಳನ್ನು ಮಾಡುವಾಗಲೂ ನಿರ್ವಿಘ್ನತಾಸಿದ್ಧಿಗಾಗಿ ಪ್ರಾರಂಭದ ಪೂಜೆ ವಿಘ್ನೇಶ್ವರನಿಗೆ ಮೀಸಲು, ಗಣಪನಿಗೆ, ವಿನಾಯಕ, ಗಜಮುಖ, ಸಿದ್ಧಿವಿನಾಯಕ, ಏಕದಂತ, ವಕ್ರತುಂಡ, ಲಂಬೋದರ, ಮೋಷಕವಾಹನ ಮುಂತಾದ ಹೊಸರೂಪಗಳಿವೆ. ಪ್ರತಿಯೊಂದು ಹೆಸರು ಒಂದೊಂದು ಗುಣಲಕ್ಷಣವನ್ನು ಸೂಚಿಸುತ್ತದೆ.

ಸ್ಕಂದ ಪುರಾಣದಂತೆ ಪಾರ್ವತಿಯು ತನ್ನ ಕೈಕೊಳೆಯಿಂದ ಮೂರ್ತಿಯನ್ನು ಮಾಡಿ ಬಾಗಿಲು ಕಾಯಲು ನಿಲ್ಲಿಸಿ ಒಳಗೆ ಸ್ನಾನಕ್ಕೆ ಹೋದಳು. ವಿಷಯ ತಿಳಿಯದ ಶಿವನು ಹೊರಗಿನಿಂದ ಮನೆಗೆ ಬಂದಾಗ ಬಾಗಿಲು ಕಾಯುತ್ತಿದ್ದ ಆ ವಿನಾಯಕನು ಶಿವನನ್ನೇ ತಡೆದನು. ಕುಪಿತನಾದ ಶಿವನು ಅವನ ಶಿರಚ್ಛೆದನ ಮಾಡಿದನು ಪಾರ್ವತಿಯ ಬೇಡಿಕೆಯಂತೆ ಶಿವನು ಗಣಗಳನ್ನು ಕಳಿಸಿ ಆನೆಯೊಂದರ ಶಿರತಂದು ಜೋಡಿಸಿದಾಗ ಗಜಾನನನಾದನು (ಕರ್ಮವೀರ ನವೆಂಬರ್ ೧೬, ೨೦೦೭, ಪುಟ.೦೮).

ಸಜ್ಜನ ಗಾಣೆರಲ್ಲಿಯೂ ಗಣೇಶ ಚತುರ್ಥಿಯಂದು ಗಣೇಶ ಪೂಜೆಯನ್ನು ವಿಶೇಷವಾಗಿ ಮಾಡುತ್ತಾರೆ. ಗಣೇಶನ ಮಣ್ಣಿನ ಮೂರ್ತಿಯನ್ನು ತಂದು ಮನೆಯಲ್ಲಿ ಇಟ್ಟು ಪೂಜಿಸುತ್ತಾರೆ. ಪ್ರಸಾದಕ್ಕೋಸ್ಕರ ಕಡಬು, ಪಾಯಸ, ಅವಲಕ್ಕಿ, ತಿಂಡಿ ಹೀಗೆ ದಿನದ ಮೂರು ಹೊತ್ತಿನಲ್ಲಿ ಪೂಜೆಯೊಂದಿಗೆ ವಿಶೇಷ ಪ್ರಸಾದ ಎಡೆ ಮಾಡುತ್ತಾರೆ. ಮೂರು ದಿವಸ ಅಥವಾ ಐದು ದಿವಸದಲ್ಲಿ ಕೊನೆಯ ಪೂಜೆ ಸಲ್ಲಿಸಿ ಕುಟುಂಬದ ಎಲ್ಲಾ ಸದಸ್ಯರು ಹೋಗಿ ನೀರಿನಲ್ಲಿ ಬಿಟ್ಟುಬರುತ್ತಾರೆ.

**ಮಹಾನವಮಿ**

ಈ ಹಬ್ಬವು ಹಬ್ಬಗಳಲ್ಲಿಯೇ ಅತ್ಯಂತ ಪ್ರಮುಖ ಹಾಗೂ ಪವಿತ್ರವಾದುದಾಗಿದೆ. ಮಹಾನವಮಿ ಬರುವುದು ಅಶ್ವೀಜ ಶುದ್ಧದಲ್ಲಿ. ಈ ಹಬ್ಬವನ್ನು ನಾವು ದಸರಾ, ನವರಾತ್ರಿ, ಮಹಾನವಮಿ, ವಿಜಯದಶಮಿ, ನಾಡ ಹಬ್ಬವೆಂದು ವಿವಿಧ ರೀತಿಯಲ್ಲಿ ಕರೆಯುತ್ತೇವೆ. ಬನ್ನಿಯ ಹಬ್ಬವನ್ನು ಕುರಿತು ಈ ರೀತಿಯಾದ ಹಿನ್ನೆಲೆ ಇದೆ.

ಪಾಂಡವರು ಪಗಡೆಯಾಡಿ ಧರ್ಮಜ ಜೂಜು ಆಡಿಸೋತು ವನವಾಸಕ್ಕೆ ಹೋಗಬೇಕಾಯಿತು. ಹೋಗುವ ಮುಂಚೆ ತಮ್ಮ ಎಲ್ಲಾ ಶಸ್ತ್ರಾಸ್ತ್ರಗಳನ್ನು ಬನ್ನಿಗಿಡದಲ್ಲಿ ಇಟ್ಟು ಹೋಗುವರು. ಈ ಬನ್ನಿಯ ಗಿಡದಲ್ಲಿ ಶ್ರೀ ಬನ್ನಿಮಹಾಂಕಾಳಿದೇವಿ ಇರುತ್ತಾಳೆ. ಆಕೆ ಆ ಶಸ್ತ್ರಾಸ್ತ್ರಗಳ ರಕ್ಷಕಳಾಗಿರುತ್ತಾಳೆ ಎಂದು ಜನರಲ್ಲಿ ನಂಬಿಕೆಯಿದೆ ಈ ರೀತಿಯಾಗಿ ಹಾಡಿದ್ದಾರೆ.

ಬನ್ನಿಯ ಗಿಡದಾಗ ಬಾಣ ಇಟ್ಟೇವಿ ತಾಯಿ
ಯಾರು ಬಂದರೂ ಕೊಡಬೇಡ || ಹಡದಮ್ಮ
ಅರ್ಜುನ ಬಂದರ ಕೊಡಬೇಕ.

ಹೀಗೆ ಬನ್ನಿ ಮಹಾಂಕಾಳಿಯನ್ನು ಕುರಿತು ಪಾಂಡವರು ಪ್ರಾರ್ಥಿಸುವರು. ಮುಂದೆ ಪಾಂಡವರು ತಮ್ಮ ವನವಾಸ ಮುಗಿಸಿ ಮರಳಿ ತಾವು ತಮ್ಮ ಆಯುಧಗಳನ್ನಿಟ್ಟಿದ್ದ ಬನ್ನಿಯ ಗಿಡಕ್ಕೆ ಬಂದು ಬನ್ನಿ ಮಹಾಂಕಾಳಿಯನ್ನು ಪೂಜಿಸಿ ತಮ್ಮ ಆಯುಧಗಳನ್ನು ಪಡೆದು ದಿಗ್ವಿಜಯ ಸಾಧಿಸಿದ ದಿನವೇ ವಿಜಯದಶಮಿಯ ದಿನವೆಂದು ಕರೆದರು. ಅಂದಿನಿಂದ ಇಂದಿನವರೆಗೂ ಪಾಂಡವರ ವನವಾಸದ ಹಿನ್ನೆಲೆಯಲ್ಲಿ ವಿಜಯದಶಮಿ ಆಚರಿಸುತ್ತಾ ಬಂದಿರುವರು.

ಈ ಹಬ್ಬವನ್ನು ಮಹಾಲಯ ಅಮವಾಸ್ಯೆಯಿಂದ ಹಿಡಿದು ವಿಜಯದಶಮಿಯವರೆಗೆ ಆಚರಿಸುತ್ತಾರೆ. ಈ ಹಬ್ಬ ಸಮೀಪಿಸುತ್ತಿದ್ದಂತೆಯೇ ಅಮವಾಸ್ಯೆಯ ಮುನ್ನವೇ ಹಬ್ಬದ ತಯಾರಿ ನಡೆಯುತ್ತದೆ. ಈ ಹಬ್ಬಕ್ಕೆ ಮನೆಯ ಹೆಣ್ಣುಮಕ್ಕಳನ್ನು ಗಂಡನ ಮನೆಯಿಂದ ಕರೆಯಿಸಿಕೊಳ್ಳುವರು. ಮನೆಯನ್ನೆಲ್ಲ ಸುಣ್ಣ ಬಣ್ಣಗಳಿಂದ ಸಾರಿಸಿ ಹಾಸಿಗೆ ಹೊದಿಕೆ ಬಟ್ಟೆಗಳನ್ನೆಲ್ಲಾ ತೊಳೆದು ಮಡಿಗೊಳಿಸುವರು. ಅಂದಿನ ದಿನ ಹೊಲದಲ್ಲಿಯ ಕಪ್ಪು ಮಣ್ಣನ್ನು ತಂದು ಐದು ವಿಧದ ಕಾಳುಗಳನ್ನು ಗೋಧಿ, ಜೋಳ, ಕಡಲೆ, ಕುಸುಬಿ, ಅಗಸಿ ಮಣ್ಣಿನಲ್ಲಿ ಬೆರಸಿ ಬಿದಿರಿನ ಬುಟ್ಟಿ ಇಲ್ಲವೆ ಮಣ್ಣಿನ ಪಾತ್ರೆಯೊಳಗೆ (ಪರ್ರ್ಯಾಣದೊಳಗೆ) ಕಾಳು ಬೆರೆಸಿದ ಮಣ್ಣನ್ನು ಹಾಕಿ ದೇವರ ಜಗಲಿಯಲ್ಲಿ ಪ್ರತಿಷ್ಠಾಪಿಸುತ್ತಾರೆ. ಇದಕ್ಕೆ 'ಘಟಸ್ಥಾಪನೆ' ಎನ್ನುವರು. ಇದಕ್ಕೆ ಒಂಬತ್ತು ದಿನಗಳವರೆಗೆ ನೀರುಣಿಸುತ್ತಾ ನಿತ್ಯ ದೀಪದ ಪಣತಿಯಿಂದ ಬೆಳಕನ್ನು ಮಾಡಿ, ದೀಪ ಆರದಂತೆ ನೋಡಿಕೊಳ್ಳುವರು.

ಸಜ್ಜನ ಗಾಣಿಗರಲ್ಲಿ ನವರಾತ್ರಿಯವರೆಗೆ ಈಶ್ವರ ದೇವಸ್ಥಾನವನ್ನು ಸುಣ್ಣ ಬಣ್ಣಗಳಿಂದ ಶುದ್ಧಗೊಳಿಸಿ ಐದು ದಿವಸ ಅಥವಾ ಒಂಬತ್ತು ದಿವಸ ಈಶ್ವರ ದೇವಸ್ಥಾನದಲ್ಲಿ ಎಣ್ಣೆ ದೀಪವನ್ನು ಹಚ್ಚುತ್ತಾರೆ. ಅದು ಒಂಬತ್ತು ದಿನಗಳ ಕಾಲ ಅಥವಾ ಐದು ದಿನಗಳ ಕಾಲ ಆರದ ಹಾಗೆ ನೋಡಿಕೊಳ್ಳಬೇಕು. ಅದೇ ರೀತಿ ಆಂಜನೇಯ ದೇವಸ್ಥಾನಗಳಲ್ಲಿ ನವರಾತ್ರಿ ಉತ್ಸವಕೋಸ್ಕರ ಗ್ರಾಮ ದೇವತೆಗಳನ್ನು ಕೂರಿಸುವ ಪದ್ಧತಿ ಇದೆ. ಇಲ್ಲಿಯೂ ಎಣ್ಣೆ ದೀಪ ನೋಡಿಕೊಳ್ಳುವ ಪರಿಪಾಟವಿದೆ.

ಸಜ್ಜನ ಗಾಣಿಗರಲ್ಲಿ ಅದರಲ್ಲಿಯೂ ತುಪ್ಪದವರಲ್ಲಿ ನವರಾತ್ರಿಯ ಹಬ್ಬದಂದು ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಉಳಿದ ಪಂಗಡದವರು ದೀಪಾವಳಿಯಲ್ಲಿ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ.

**ಹಿರಿಯರ ಹಬ್ಬದ ಆಚರಣೆ**

ನವರಾತ್ರಿಯು ಒಂಬತ್ತು ದಿನದ ನಂತರ ಬರುವುದೇ ವಿಜಯದಶಮಿ. ಆ ದಿವಸ ಆಯುಧ ಪೂಜೆ ನಡೆಯುತ್ತದೆ. ಕೊಡ್ಲಿ, ಕುಡುಗೋಲು, ಸಲಿಕೆ, ಗುದ್ದಲಿ, ಭರ್ಚಿ, ಬಂದೂಕು, ಖಡ್ಗ, ಕತ್ತಿಗಳನ್ನೆಲ್ಲಾ ತೊಳೆದು ಸ್ವಚ್ಛಗೊಳಿಸಿ ಮನೆಯ ಒಂದು ಮೂಲೆಯಲ್ಲಿಟ್ಟು ಆಯುಧ ಪೂಜೆ ಮಾಡುತ್ತಾರೆ. ಸಜ್ಜನ ಗಾಣಿಗರಲ್ಲಿ, ತುಪ್ಪದವರಲ್ಲಿ ನವರಾತ್ರಿಯ ಹಬ್ಬದಂದೇ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಮನೆಯ ದೇವಸ್ಥಾನದ ಗರ್ಭಗುಡಿಯೊಳಗೆ ಹೊಸ ಸೀರೆ ಮತ್ತು ರವಿಕೆ, ಹೊಸ ಪಂಚೆ, ಟವಲ್ ಹಾಗೂ ಶರ್ಟ್

ಬಟ್ಟೆಯನ್ನು ಗದ್ದಿಗೆಗೆ ಏರಿಸಿ ಅಥವಾ ಹಾಕಿ ಹಿರಿಯರು ಸೇವಿಸುತ್ತಿದ್ದ ವಸ್ತುಗಳನ್ನೆಲ್ಲಾ ಅವತ್ತಿನ ದಿವಸ ತಂದು ಗದ್ದಿಗೆಯ ಮೇಲೆ ಇಡುತ್ತಾರೆ. ಆ ದಿವಸ ಹಬ್ಬದ ಪೂಜೆಗೆ ವಿಶೇಷವಾಗಿ ಮನೆಯ ಐಯ್ಯವನವರನ್ನು ಕರೆಸಿ ಹಿರಿಯರ ಗದ್ದಿಗೆ ಪೂಜೆ ಮಾಡಿಸುತ್ತಾರೆ. ನಂತರ ತಾವು ಕೂಡ ಹಿರಿಯರ ಗದ್ದಿಗೆಯನ್ನು ಮನೆಯವರೆಲ್ಲರೂ ಪೂಜಿಸುತ್ತಾರೆ. ಗದ್ದಿಗೆಯಲ್ಲಿ ಐದು ಹುಡಿಗಳನ್ನು ಇಟ್ಟಿರುತ್ತಾರೆ. ಅಂದಿನ ಹಿರಿಯರ ಹಬ್ಬಕ್ಕೆ ನೆಲ ಸಾರಿಸಿ ನೆಲದ ಮೇಲೆ ಸಗಣಿ ಇದ್ದು ಅದರ ಮೇಲೆ ಎಣ್ಣೆ ದೀಪವನ್ನಿಟ್ಟು ದೀಪ ಬೆಳಗಿಸುತ್ತಾರೆ. ಆ ಹಬ್ಬದ ದೀಪವು ಬೆಳಗಿನ ಬನ್ನಿ ಪೂಜೆಯಾಗುವವರೆಗೂ ಆರದ ಹಾಗೆ ಉರಿಯುತ್ತಿರಬೇಕು. ಜೊತೆಗೆ ತಾವು ಮಾಡಿದ ಅಡಿಗೆಯ ಪೂಜಿಸಿ ಹಿರಿಯರ ಗದ್ದಿಗೆಯ ಮುಂದೆ ಎರಡು ಬಾಳೆ ಎಲೆಗಳನ್ನು ಹಾಕಿ ಅದರಲ್ಲಿ ಅಡಿಗೆಯನ್ನು  ಬಡಿಸುತ್ತಾರೆ.

ಆ ದಿವಸ ರಾತ್ರಿ ಮನೆಯಲ್ಲಿ ಸಂಭ್ರಮದ ಪೂಜೆ ಆಚರಿಸುತ್ತಾರೆ. ಜೊತೆಗೆ ಮನೆಗೆ ಸಂಬಂಧಿಸಿದ ಎಲ್ಲಾ ಸದಸ್ಯರು ಆ ದಿನಸ ಹಿರಿಯರ ಎಡೆಯನ್ನು ಊಟ ಮಾಡಬೇಕು. ಇಲ್ಲಿ ಅಕ್ಕ ತಂಗಿಯರಿಗೆ ಗಂಡನಿಗೆ ಅವರ ಮಕ್ಕಳಿಗೆ ಹಿರಿಯರ ಎಡೆಯ ಊಟದಲ್ಲಿ ಅವಕಾಶವಿಲ್ಲ. ಅವರೇನಿದ್ದರು ಹಿರಿಯರ ಎಡೆಯನ್ನು ಹೊರತುಪಡಿಸಿ ಮನೆಯಲ್ಲಿ ತಯಾರಿಸಿದ ಹೋಳಿಗೆ, ಪಾಯಸ, ಅನ್ನಸಾರು, ಪಲ್ಲೆ, ಕೋಸುಂಬರಿ, ಹಪ್ಪಳ, ಉಪ್ಪಿನಕಾಯಿ, ಗರ್ಭಗುಡಿಯ ಹೊರತುಪಡಿಸಿ ಬಡಿಸುತ್ತಾರೆ. ಅಂದು ಮನೆಯ ಸದಸ್ಯರೊಂದಿಗೆ ನೆಂಟರು ಹಾಗೂ ಊರಿನಲ್ಲಿ ಕೆಲವು ಮನೆಯವರನ್ನು ವಿಶೇಷವಾಗಿ ಊಟಕ್ಕೆ ಆಹ್ವಾನಿಸುತ್ತಾರೆ. ಆ ದಿವಸ ಈಶ್ವರ ದೇವಸ್ಥಾನದಲ್ಲಿ ವಿಶೇಷ ಪೂಜೆ. ಜೊತೆಗೆ ಹಿರಿಯರ ಸಮಾಧಿಗಳನ್ನು ಆ ದಿವಸ ರಾತ್ರಿ ವಿಶೇಷವಾಗಿ ಪೂಜಿಸುತ್ತಾರೆ. ಊಟವಾದ ಬಳಿಕ ಆ ದಿನವೇ ಲಕ್ಷ್ಮೀ ಪೂಜೆಯನ್ನು ಕೂರಿಸುತ್ತಾರೆ.

**ಲಕ್ಷ್ಮೀ ಪೂಜೆ**

ತುಪ್ಪದವರಲ್ಲಿ ಹಿರಿಯರ ಹಬ್ಬದ ನಂತರ ಲಕ್ಷ್ಮೀ ಪೂಜೆಯನ್ನು ಮಾಡುತ್ತಾರೆ. ಒಂದು ತಟ್ಟೆಯಲ್ಲಿ ತುಂಬಿದ ಚಂಬನ್ನಿಟ್ಟು ಅಥವಾ ಚಿಕ್ಕ ಕೊಡವನ್ನಿಟ್ಟು ಅದರಲ್ಲಿ ಚಿಲ್ಲರೆ ಹಣವನ್ನು ಹಾಕುತ್ತಾರೆ. ಐದು ಎಲೆಗಳನ್ನು ಕೊಡದ ಕಂಟಕ್ಕೆ ಇಟ್ಟು ಅದರ ಮೇಲೆ ಒಂದು ತೆಂಗಿನ ಕಾಯನ್ನಿಟ್ಟು ಅದಕ್ಕೆ ಲಕ್ಷ್ಮಿಯ ಬೆಳ್ಳಿಯ ಅಥವಾ ಬಂಗಾರದ ಮೂರ್ತಿಯನ್ನು ಇಟ್ಟು ಅದಕ್ಕೆ ಕುಪ್ಪಸವನ್ನು ತೊಡಿಸುತ್ತಾರೆ. ಜೊತೆಗೆ ೆರಡು ದೀಪಗಳನ್ನು ಹಚ್ಚುತ್ತಾರೆ. ಜೊತೆಗೆ ಸೆಗಣಿ ನೆಲದ ಮೇಲೆ ಇಟ್ಟು ಅದರ ಮೇಲೆ ಎಣ್ಣೆ ದೀಪವನ್ನು ಅಂದು ಉರಿಸುತ್ತಾರೆ. ಅಂದು ಕುಂಕುಮ, ಅರಿಷಿಣದಿಂದ ಹೋಳಿಗೆಮಾಡಿ, ಲಕ್ಷ್ಮಿಗೆ ಪೂಜೆಯೊಂದಿಗೆ ಆರತಿ ಬೆಳಗುತ್ತಾರೆ. ಲಕ್ಷ್ಮಿಯ ಮುಂದೆ ಆ ದಿವಸ ಐದು ದಿನಸಿನ ಹಣ್ಣನ್ನು ಇಡುತ್ತಾರೆ. ಜೊತೆಗೆ ಹೊಸಪೈರಿನಿಂದ ಬಂದ ಹಣವನ್ನು ಅಂದು ವಿಶೇಷವಾಗಿ ಲಕ್ಷ್ಮಿಯ ಮುಂದಿಟ್ಟು ಪೂಜಿಸುತ್ತಾರೆ. ಮನೆಯ ಎಲ್ಲರೂ ಊದಿನ ಕಡ್ಡಿಬೆಳಗಿ ಲಕ್ಷ್ಮಿಗೆ ಅಕ್ಷತೆಯನ್ನು ಹಾಕಿ ಪೂಜಿಸುವರು. ಲಕ್ಷ್ಮಿ ಪೂಜೆ ಮಾಡುವಾಗ ಮನೆಯ ಮಕ್ಕಳು ಹಾಗೂ ಹಿರಿಯರೆಲ್ಲರೂ ಲಕ್ಷ್ಮೀ ಪೂಜೆ ಮುಗಿಯುವರೆಗೂ ಅದರ ಮುಂದೆ ಕುಳಿತಿರುತ್ತಾರೆ. ಇಲ್ಲಿಯೂ

ಹಿರಿಯರ ದೀಪ ಆರದಂತೆ ಆ ದಿವಸ ಹೇಗೆ ನೋಡಿಕೊಳ್ಳುತ್ತಾರೆಯೋ ಅದೇ ರೀತಿ ಲಕ್ಷ್ಮಿಯ ಮುಂದಿನ ಎಣ್ಣೆದೀಪವು ಬೆಳಗಿನವರೆಗೆ ಆರದಂತೆ ಉರಿಯಬೇಕಾಗುತ್ತದೆ.

ಮೂರನೆ ದಿವಸ ಬೆಳಿಗ್ಗೆಯೇ ಮನೆಯಲ್ಲಿ ಯಾರಾದರೊಬ್ಬರು ಸ್ನಾನಮಾಡಿ ವಿಶೇಷವಾಗಿ ಬನ್ನಿಮರಕ್ಕೆ ಹೋಗಿ ಅಲ್ಲಿ ಅದಕ್ಕೆ ಪೂಜೆ ಸಲ್ಲಿಸಿ, ಅಲ್ಲಿಂದ ಬನ್ನಿ ಪತ್ರೆಯನ್ನು ಮನೆಗೆ ತಂದು ಗರ್ಭಗುಡಿಯಲ್ಲಿನ ದೇವರಿಗೆ ಪೂಜೆ ಮಾಡುತ್ತಾರೆ. ಆದಿನ ಬನ್ನಿ ಪತ್ರೆಯೊಂದಿಗೆ ದೇವರ ಪೂಜೆ ಇರುತ್ತದೆ. ಜೊತೆಗೆ ಆ ದಿವಸ ರಾತ್ರಿ ಹಿರಿಯರು ಗದ್ದಿಗೆಯನ್ನು ಹಾಗೂ ಲಕ್ಷ್ಮಿಯನ್ನು ಬನ್ನಿ ಪತ್ರೆಯಿಂದ ಪೂಜಿಸಿದ ನಂತರ ಹಿರಿಯರ ಗದ್ದಿಗೆಯನ್ನು ಲಕ್ಷ್ಮಿಯನ್ನು ತೆಗೆಯುತ್ತಾರೆ. ಇಲ್ಲಿ ಗದ್ದಿಗೆಯ ಮೇಲಿಟ್ಟ ವಸ್ತುಗಳನ್ನು ಹಾಗೂ ಪ್ರಸಾದವನ್ನು ಆದಿವಸ ರಾತ್ರಿ ಸತ್ತ ಹಿರಿಯರು ಬಂದು ಸ್ವೀಕರಿಸುತ್ತಾರೆ ಅಥವಾ ಸಂತುಸ್ಟಗೊಳ್ಳುತ್ತಾರೆ, ಎಂಬ ನಂಬಿಕೆ ಸಜ್ಜನ ಗಾಣಿಗರಲ್ಲಿದೆ. ಬೆಳಿಗ್ಗೆ ಬನ್ನಿ ಪೂಜೆಯೊಂದಿಗೆ ಹಿರಿಯರಿಗೆ ಇಟ್ಟಿದ್ದ ಉಡಿಯನ್ನು ಗಂಡು ಮಕ್ಕಳಿಗೆ, ಸೊಸೆಯರಿಗೆ ಹಂಚುತ್ತಾರೆ. ಹಾಗೂ ಅವರು ಉಪಯೋಗಿಸಿದ ವಸ್ತುಗಳು ಮಂದರೆ ಬೀಡಿ ಸಿಗರೇಟ್ ಮೊದಲಾದವುಗಳನ್ನು ಆ ಮನೆಯ ಗಂಡು ಮಕ್ಕಳು ಅಥವಾ ಅವರ ಮಕ್ಕಳು ಉಪಯೋಗಿಸಬಹುದಾಗಿದೆ.

ಈ ವಿಜಯದಶಮಿಯ ದಿನದಂದು ಚಿತ್ರದುರ್ಗದಲ್ಲಿ ಶ್ರೀ ಶಿವಮೂರ್ತಿ ಮುರುಘ ರಾಜೇಂದ್ರ ಶರಣರು ವಿಶೇಷವಾಗಿ ದಸರಾ ಉತ್ಸವವನ್ನು ಹಮ್ಮಿಕೊಳ್ಳುವರು. ಅಂದು ನಾಡಿನ ಎಲ್ಲಾ ಕಡೆಯ ಕಲಾವಿದರನ್ನು ಕರೆಸಿ ಕಲಾ ಪ್ರದರ್ಶಿಸುವರು. ಈ ಉತ್ಸವದಲ್ಲಿ ವಿಶೇಷವಾಗಿ ಪಾಲ್ಗೊಂಡು ತಮ್ಮ ಪ್ರದರ್ಶನವನ್ನು ತೋರಿಸುವುದು ಒಂದು ವಿಶೇಷವಾಗಿರುತ್ತದೆ.

ಈ ಉತ್ಸವದಲ್ಲಿ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು ವಿಶೇಷವಾಗಿ ಈ ಉತ್ಸವದೊಂದಿಗೆ, ಚಿತ್ರದುರ್ಗದ ಕೋಟೆಯೊಳಗೆ ಹಿಡಿಂಬೇಶ್ವರ, ಏಕನಾಥೇಶ್ವರ ದೇವಾಲಯದ ಹತ್ತಿರ ಹೋಗಿ ಬನ್ನಿಯನ್ನು ಮುಡಿದು ಪುನಃ ಮುರುಘ ಮಠಕ್ಕೆ ಶರಣರು ಹಿಂದಿರುಗುತ್ತಾರೆ. ಇದನ್ನು ನೋಡಲು ಸುತ್ತ ಮುತ್ತಲಿನ ಹಳ್ಳಿಯವರೆಲ್ಲರೂ ವಿಶೇಷವಾಗಿ ಬರುತ್ತಾರೆ.

ಈ ದಿವಸವೇ ಸಜ್ಜನ ಗಾಣಿಗರಲ್ಲಿ ವಿಶೇಷವಾಗಿ ತಮ್ಮ ಹೊಲದಲ್ಲಿರುವ ಬನ್ನಿ ಮರಕ್ಕೆ ಸೀರೆ ಮತ್ತು ರವಿಕೆಯೊಂದಿಗೆ ಪೂಜಿಸಿ ಆ ಪೂಜೆಯಲ್ಲಿ ಪಾಲ್ಗೊಂಡವರಿಗೆಲ್ಲಾ ಊಟವನ್ನು ಹಾಕುತ್ತಾರೆ. ಅಲ್ಲಿಗೆ ಬಂದ ಮುತ್ತೈದೆಯರಿಗೆಲ್ಲಾ ವಿಶೇಷ ಉಡಿದುಂಬಿ ಬನ್ನಿಮರದ ಪೂಜೆಯೊಂದಿಗೆ ಊಟಕ್ಕೆ ಹಾಕುತ್ತಾರೆ.

**ದೀಪದಿಂದ ದೀಪಹಚ್ಚೆ ದೀಪಾವಳಿ**

ಚಿತ್ರದುರ್ಗ ಜಿಲ್ಲೆಯ ಸಜ್ಜನ ಗಾಣಿಗರಲ್ಲಿ ಎಲ್ಲರೂ ಈ ಹಬ್ಬವನ್ನು ಆಚರಿಸುವುದಿಲ್ಲ. ಕೆಲವರಲ್ಲಿ ಮಾತ್ರ ಈ ಹಬ್ಬವನ್ನು ಆಚರಿಸುತ್ತಾರೆ.

ದೀಪಗಳ ಹಬ್ಬ ದೀಪಾವಳಿ, ಕತ್ತಲೆಯಿಂದ ಬೆಳಕಿನೆಡೆಗೆ, ಅಜ್ಞಾನದಿಂದ ಸುಜ್ಞಾನದೆಡೆಗೆ ಹೋಗುವ ದಿವ್ಯ ಸಂದೇಶವನ್ನು ನೀಡುವ ಹಬ್ಬ. ಜ್ಞಾನ ಜ್ಯೋತಿಯನ್ನು ಬೆಳಗಿಸಿ ಮನದ ಕತ್ತಲೆಯನ್ನು ಕಳೆಯುವ

ಹಬ್ಬ. ದೀಪಾವಳಿಗೆ ಹಟ್ಟಿ ಹಬ್ಬ, ನೀರು ತುಂಬುವ ಹಬ್ಬ ಎಂದು ಕರೆಯಲಾಗುವುದುಂಟು. ದೇಶದ ಬಹುತೇಕ ಕಡೆಗಳಲ್ಲಿ ಸಂತೋಷ, ಸಂಭ್ರಮ, ಉತ್ಸಾಹ, ಉಲ್ಲಾಸದಿಂದ ಆಚರಿಸುವ ಹಬ್ಬ ದೀಪಾವಳಿ. ನಮ್ಮ ಗ್ರಾಮೀಣರಿಗೆ ಜೀವನೋತ್ಸಾಹವನ್ನು ನೆಮ್ಮದಿ ಸಂತೋಷವನ್ನು ತಂದುಕೊಡುವ ಹಬ್ಬ. ಕಣ್ಣಾಯಿಸಿದಷ್ಟು ಕಾಣುವ ಹಚ್ಚ ಹಸಿರಿನಿಂದ ಕೂಡಿದ ಬೆಳೆ, ಕೆರೆ ಕಟ್ಟೆಗಳಲ್ಲಿ ತುಂಬಿ ಹರಿಯುವ ನೀರು ನೋಡಲು ಮನಮೋಹಕ. ಈ ಪ್ರಕೃತಿ ಸೌಂದರ್ಯದ ಹಿನ್ನೆಲೆಯಲ್ಲಿ ದೀಪಾವಳಿಯನ್ನು ವೈಭೋಗಕ್ಕೆ ಹೋಲಿಸಿ ಭೂಲೋಕಕ್ಕೂ ಇಂದ್ರನ ಅಮರಾವತಿಗೂ ಇರುವ ಸಾದೃಶ್ಯವನ್ನು ಅಭಿವ್ಯಕ್ತಿಗೊಳಿಸಿದ್ದಾರೆ.

ಹೊಳೆಯಲ್ಲಿ ನೀರು ತುಂಬಿ, ಹೊಲದಲ್ಲಿ ಬೆಳೆ ತುಂಬಿ ಊರೂರಿನ ಗುಡಿ ಮನೆತುಂಬಿ, ಜನತುಂಬಿ ದೀವಳಿಗೆ ಬರಲಿ ದಿನ ಬರಲಿ, (ಜನಪದ ನವೆಂಬರ್ ೨೦೦೭ ಪು ೨೧) ಎಂದು ದೀವಳಿಗೆಯ ಆಗಮನವನ್ನು ಹೃದಯತುಂಬಿ ಸ್ವಾಗತಿಸಿದ್ದಾರೆ. ಪಾಂಡವರು ತಮ್ಮ ಅಜ್ಞಾತವಾಸ ಮುಗಿಸಿ 'ವಿಜಯ ದಶಮಿ'ಯಾದ ನಂತರ ದಕ್ಷಿಣ ಭಾರತವನ್ನು ಬಿಟ್ಟು ಉತ್ತರಕ್ಕೆ ಹಸ್ತಿನಾವತಿಯನ್ನು ಸೇರುವರೆಂದು ಪೌರಾಣಿಕತೆಯಿಂದ ತಿಳಿದು ಬರುತ್ತದೆ. ಈ ಘಟನೆಯನ್ನು ನೆನಪಿಸಿಕೊಳ್ಳುವ ದೃಷ್ಟಿಯಿಂದ ನಮ್ಮ ಜನಪದರು ಪ್ರತಿಪದೆಯ ದಿವಸ ಸಗಣಿಯಿಂದ ಪಾಂಡವರನ್ನು ಮಾಡಿ ಅವರನ್ನು ಊರಲ್ಲಿ ಸಂತೋಷದಿಂದ ಬರಮಾಡಿಕೊಳ್ಳುವರು. ಆಗ ಪ್ರತಿಯೊಬ್ಬರ ಮನೆಯಲ್ಲಿಯೂ ಹಟ್ಟಿಗಳಲ್ಲಿ ಪಾಂಡವರನ್ನು ಕಲ್ಪಿಸಿಕೊಳ್ಳುತ್ತಾರೆ. ತಮ್ಮದೇ ರೀತಿಯಲ್ಲಿ ಹೀಗೆ ಅಭಿವ್ಯಕ್ತಿಗೊಳಿಸಿದ್ದಾರೆ.

ಹಾಸುಗಲ್ಲಿನ ಮೇಲೆ ಹಾದು ಹೋದವರ್‍ಯಾರ
ಪಾದ ಮುಡ್ಯಾವ ಪರಿಪರಿ || ಪಾಂಡೋರ

ಹಾದು ಹೋಗ್ಯಾರ ಜಳಕಕೆ. ಎಂದಿದ್ದಾರೆ. ಪಾಂಡವರು ಊರುಸೇರಿದ ಮೇಲೆ ಹಾಯ್ದುಹೋಗಲು ಪರಿಪರಿಯಾಗಿ ಹೆಜ್ಜೆಗಳು ಮೂಡಿದವು. ಈ ಸಂದರ್ಭವನ್ನು ಸ್ಮರಿಸಿಕೊಳ್ಳಲು ಮತ್ತು ರೈತರು ತಮ್ಮ ಮನೆ ಹಟ್ಟಿಯ ತುಂಬೆಲ್ಲ ಹೆಜ್ಜೆಗಳನ್ನು ಮೂಡಿಸುವ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದ್ದಾರೆ. ಮತ್ತೊಂದು ಕಥೆಯ ಪ್ರಕಾರ ಪಾಂಡವರು ತಮ್ಮ ವರುಷದ ಅಜ್ಞಾತವಾಸ ಮುಗಿಸಿ ಕೌರವರಿಂದ ಬಯ್ಯಲ್ಪಟ್ಟು ಗೋವುಗಳನ್ನು ಗೆದ್ದು ಅಂದೇ ಎಲ್ಲರೂ ವಿರಾಟ ರಾಜನಲ್ಲಿ ಕಾಣಿಸಿಕೊಂಡ ಐಕ್ಯತೆಯ ಸಂಕೇತಕ್ಕಾಗಿ ಪಾಂಡವರು ಎಂದು ಸಂಗತಿಯನ್ನಿಟ್ಟು ಪೂಜಿಸುವರು. ಈ ಕಾರಣದಿಂದ ದೀಪಾವಳಿ ಹಬ್ಬದ ಸಂದರ್ಭದಲ್ಲಿ ದನಗಳು-ದನದಕೊಟ್ಟಿಗೆ ಮೊದಲಾದವನ್ನು ಭಕ್ತಿಯಿಂದ ಪೂಜಿಸುವ ಸಂಪ್ರದಾಯ ಶತಶತಮಾನಗಳಿಂದ ನಡೆದುಕೊಂಡು ಬಂದಿದೆ.

ದಂತ ಕಥೆಯೊಂದರ ಪ್ರಕಾರ ಹಿಂದೆ ಹೈಮ ಎಂಬ ಅರಸನಿಗೆ ಒಬ್ಬ ಮಗನಿದ್ದ ಮಗನ ಮದುವೆಯಾದ ನಾಲ್ಕನೇ ದಿನವೇ ಸರ್ಪದೋಷದಿಂದ ಆತನು ಮರಣ ಹೊಂದಿದ. ಆತನ ಹೆಂಡತಿ ಗಂಡನ ಅಕಾಲ ಮರಣದಿಂದ ಕಂಗಾಲಾದಳು. ಕಣ್ಣೀರ ಕೋಡಿ ಹರಿಯಿತು. ಯಮದೂತರು ಅವಳ ದುಃಖವನ್ನು ನೋಡಲಾರದೆ ಯಮರಾಜನಲ್ಲಿ ವಿನಂತಿಸಿಕೊಂಡಾಗ ಯಮರಾಜ 'ದೀವಳಿಗೆ ಹಬ್ಬದೊಳಗೆ

ಧನತ್ರಯೋದಶಿಯಿಂದ ಐದು ದಿವಸಗಳವರೆಗೆ ಯಾರ ಮನೆಯಲ್ಲಿ ಸಾಲು ದೀಪಗಳು ಬೆಳಗುವವೋ ಅಂಥವರಿಗೆ ಅಪಮೃತ್ಯವಿಲ್ಲ'ವೆಂದು ಹೇಳುವ ಕಾರಣ ಹಬ್ಬದ ಸಂದರ್ಭದ ದೀಪಗಳನ್ನು ಹಚ್ಚುವ ರೂಢಿ ಬೆಳೆದು ಬಂದಿದೆ ಎಂದು ಹೇಳುತ್ತಾರೆ.

ಜೈನರು ಮಹಾವೀರನ ದಿವ್ಯಜ್ಯೋತಿ ಮಾಯವಾದ ದಿನವೆಂದು ತಿಳಿದು ನಾಲ್ಕು ದಿನಗಳವರೆಗೆ ಆಚರಿಸುತ್ತಾರೆ. ಭೌಗೋಳಿಕವಾಗಿ ದೀಪಾವಳಿ ಸಂದರ್ಭದಲ್ಲಿ ಸೂರ್ಯನ ಉತ್ತರಾಯಣ ಬರಲೆಂದು ಆಶಿಸಿ ಪೂಜಿಸುವ ರೂಢಿಯೂ ಇದೆ. ಈ ವೇಳೆಯಲ್ಲಿ ಮುಂಗಾರು ಬೆಳೆಯ ಧಾನ್ಯಗಳ ಆಗಮನ, ಹಿಂಗಾರು ಬಿತ್ತನೆಗೆ ಹದವನ್ನು ತಂದುಕೊಟ್ಟು ನಾಟಿ ಹಾಕಿದ ಎಳೆಯ ಪೈರಿಗೆ ಜೀವರಸವನ್ನು ಎರೆಯುತ್ತಿರುವ ಈ ಹಬ್ಬದ ಸಂಕ್ರಮಣ ಕಾಲವು ಅನ್ನದೇವರ ಅವತಾರ ಕಾಲವೆಂದೇ ಕರೆಯಬಹುದು.

ಅಶ್ವಯುಜ ಬಹುಳ ದ್ವಾದಶಿಯಿಂದ ಎಂಟು ದಿನದವರೆಗೆ, ಕೆಲವು ಕಡೆ ಐದು ದಿನ ಮತ್ತೆ ಕೆಲವು ಕಡೆ ಮೂರುದಿನದವರೆಗೆ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ರಾಮನು ತನ್ನ ತಂದೆ ದಶರಥನ ಅಣತಿಯಂತೆ ಹದಿನಾಲ್ಕು ವರ್ಷ ವನವಾಸವನ್ನು ಮುಗಿಸಿಕೊಂಡು ರಾವಣನನ್ನು ಸಂಹರಿಸಿ ಸೀತೆಯೊಂದಿಗೆ ಅಯೋಧ್ಯೆಗೆ ಹಿಂದಿರುಗಿದಾಗ ಅಯ್ಯೊಧ್ಯೆಯಲ್ಲಿ ಸಂತೋಷ ಸಂಭ್ರಮದಿಂದ ಮನೆ ಮನೆಗಳಲ್ಲಿ ದೀಪವನ್ನು ಬೆಳಗಿಸಿ ಹಬ್ಬವನ್ನು ಆಚರಿಸಿದರಂತೆ. ಅದೇ ದೀಪಾವಳಿ ಎಂದು ಕರೆಯುತ್ತಾರೆ.

ಧನತ್ರಯೋದಶಿ ದೀಪ ಆರಾಧನೆಯ ಆರಂಭದ ದಿನ, ಈ ದಿನವನ್ನು ನೀರು ತುಂಬುವ ದಿನವೆಂದು ಕರೆಯುತ್ತಾರೆ. ಅಂದು ಮನೆಯಲ್ಲಿರುವ ನೀರು ತುಂಬುವ ಪಾತ್ರೆಗಳಾದ ಬಿಂದಿಗೆ, ಗುಂಡಿಗೆಗಳನ್ನು ತೊಳೆದು ಅವುಗಳಲ್ಲಿ ನೀರು ತುಂಬಿಡುತ್ತಾರೆ. ಅದಕ್ಕೆ ಪೂಜೆ ನೈವೇದ್ಯ ಮಾಡುತ್ತಾರೆ. ಈ ಹಬ್ಬದಲ್ಲಿ ದೀಪಗಳ ಜೊತೆಗೆ ಪಟಾಕಿ ಹೊಡೆಯುವುದು ವಿಶೇಷವಾಗಿ ಕಂಡುಬರುತ್ತದೆ.

**ಲಕ್ಷ್ಮೀಪೂಜೆ**

ಸಜ್ಜನ ಗಾಣಿಗರಲ್ಲಿ ಕೆಲವರು ಮಹಾನವಮಿ ದಿನದಂದು ಅಂದರೆ ಆಯುಧ ಪೂಜೆ ದಿವಸದಂದು ಲಕ್ಷ್ಮಿಪೂಜೆ ಮಾಡಿದರೆ ಮತ್ತೆ ಕೆಲವರು ದೀಪಾವಳಿಯಲ್ಲಿ ಲಕ್ಷ್ಮೀಪೂಜೆ ಆಚರಿಸುತ್ತಾರೆ.

ಲಕ್ಷ್ಮಿ ಭಕ್ತರ ಇಷ್ಟಾರ್ಥಗಳನ್ನು ಕರುಣಿಸುವ ಕಾಮಧೇನು ಕಲ್ಪವೃಕ್ಷ ಎಂಬ ನಂಬಿಕೆ. ನಮ್ಮ ರೈತರು ಲಕ್ಷ್ಮಿಯನ್ನು ಭತ್ತದ ಬೆಳೆ ಹಾಗೂ ಕೃಷಿಯ ದೇವತೆಯಾಗಿ ಪೂಜಿಸುತ್ತಾರೆ. ಆಕೆಯನ್ನು ಕರಿಶೀಣಿ ''ಗೊಬ್ಬರವನ್ನು ಉಳ್ಳವಳು'' ಎಂದು ಕರೆಯುತ್ತಾರೆ. ಅಂದರೆ ಭೂಮಿ ಬೆಳೆ ಮತ್ತು ಪ್ರಾಣಿಗಳಿಗೆ ಫಲತ್ವವನ್ನು ಕೊಡುವ ದೇವತೆ ಎಂದರ್ಥ. ಆಕೆ ಹಸು, ಕುದುರೆ, ಸಂತಾನ, ಆರೋಗ್ಯ, ಐಶ್ವರ್ಯ, ಚಿನ್ನ ಮತ್ತು ಕೀರ್ತಿಗಳನ್ನು ದಯಪಾಲಿಸುವಳು. ಅಲ್ಲದೆ ಲಕ್ಷ್ಮೀ ಸಂಪತ್ತಿನ ಅಧಿದೇವತೆ ಭಕ್ತರ ಮನೆಗೆ ಪ್ರವೇಶಿಸುತ್ತಾಳೆಂಬ ನಂಬಿಕೆ ಹಿಂದೂ ಸಜ್ಜನ ಗಾಣಿಗರಲ್ಲಿದೆ. ಅಂದು ಯಾರು ಲಕ್ಷ್ಮಿಯನ್ನು ಭಕ್ತಿಯಿಂದ ಪೂಜಿಸುತ್ತಾರೋ ಅಂಥವರಿಗೆ ಸುಖ, ಶಾಂತಿ, ಸಂಪತ್ತನ್ನು ನೀಡುವಳೆಂಬ ಪ್ರತೀತಿ. ವ್ಯಾಪಾರಸ್ಥರು ತಮ್ಮ ಲೆಕ್ಕದ ಪುಸ್ತಕ ಮತ್ತು ತೂಕದ ಸಾಮಾನುಗಳನ್ನು ಪೂಜಿಸುತ್ತಾರೆ. ಜೊತೆಗೆ ಯಾವುದಾದರೂ ಒಂದು ಹೊಸ

ವಸ್ತುವನ್ನು ಸಾಮಾನ್ಯವಾಗಿ ಚಿನ್ನ, ಬೆಳ್ಳಿಯಿಂದ ಮಾಡಿದ ವಸ್ತುಗಳನ್ನು ತರುವ ಸಂಪ್ರದಾಯ. ಆ ದಿನ ಕೊಂಡು ತರುವುದುಂಟು. ಈ ರೀತಿ ಕೊಂಡು ತರುವುದರಿಂದ ಒಳ್ಳೆಯದಾಗುತ್ತದೆಂಬ ನಂಬಿಕೆ ಇದೆ. ಲಕ್ಷ್ಮಿ, ಧಾನ್ಯಲಕ್ಷ್ಮಿ, ಸಿರಿಲಕ್ಷ್ಮಿ, ಭಾಗ್ಯಲಕ್ಷ್ಮಿ ಆಕೆಯನ್ನು ಮನೆಯಲ್ಲಿ ಶಾಶ್ವತವಾಗಿ ನೆಲೆಸುವಂತೆ ಭಕ್ತಿಯಿಂದ ಆರಾಧಿಸುತ್ತಾರೆ.

**ಬಲೀಂದ್ರ ಪೂಜೆ**

ಬಲಿಪಾಡ್ಯಮಿ ದಿನ ಬಲಿಚಕ್ರವರ್ತಿಯ ದಾನಗುಣಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಲೋಕಕಲ್ಯಾಣಕ್ಕಾಗಿ ತನ್ನನ್ನೇ ಅರ್ಪಿಸಿಕೊಂಡ ಬಲೀಂದ್ರನ ಉದಾರತೆ ತ್ಯಾಗವನ್ನು ಮೆಚ್ಚಿ ವಿಶಿಷ್ಟವಾದ ಸ್ಥಾನ ನೀಡಿ ಗೌರವಿಸಿದ್ದಾರೆ. ಅಂದು ಗೋವಿನ ಸಗಣಿಯಲ್ಲಿ ಬಲೀಂದ್ರನ ಮೂರ್ತಿಯನ್ನು ಮಾಡಿ ಹೊಲಗದ್ದೆಗಳಲ್ಲಿ ಬೆಳೆದ ಹೂವು ತೆನೆಗಳನ್ನಿಟ್ಟು ಭಕ್ತಿಯಿಂದ ಪೂಜಿಸುತ್ತಾರೆ. ಸೂರ್ಯ ಚಂದ್ರರಿರುವ ತನಕ ಬಲೀಂದ್ರನ ಕೀರ್ತಿ, ನೆನಪು ಜನರ ಹೃದಯ ಸಿಂಹಾಸನದಲ್ಲಿ ಶಾಶ್ವತವಾಗಿರಲೆಂದು ಮನದುಂಬಿ ಹಾರೈಸಿದ್ದಾರೆ. ಇದಕ್ಕೆ ಸಾಂಕೇತಿಕವಾಗ ಬಲೀಂದ್ರನ ಜೊತೆಯಲ್ಲಿಯೇ ಸೂರ್ಯ, ಚಂದ್ರರನ್ನು ಪೂಜಿಸುತ್ತಾರೆ.

ಈ ಮೂರು ದಿನಗಳೂ ಸಂಜೆ ವೇಳೆ ದನಕರುಗಳು ಮನೆ ಸೇರುವ ವೇಳೆಗೆ ಮನೆ ಮುಂದೆ ಸಾಲಾಗಿ ಎಣ್ಣೆ ದೀಪಗಳನ್ನು ಸಾಲಾಗಿ ಹಚ್ಚುತ್ತಾರೆ. ದನಗಳು ಹಚ್ಚಹಸಿರನ್ನು ಮನಸಾರೆ ಮೇದು ಮೈತುಂಬಿಕೊಂಡು ಮನೆಗೆ ಬರುವ ದೃಶ್ಯ ಕಣ್ಮನಗಳಿಗೆ ಮುದ ನೀಡುತ್ತದೆ. ಇಂಥ ದನಗಳನ್ನು ನೋಡಿಯೇ ಇರಬೇಕು 'ದೀವಳ್ಗೇಲಿ ದನ ಕೆಣಕಬೇಡ ಬೇಸಿಗೇಲಿಬೆಂಕಿ ಕೆಣಕಬೇಡ' ಎಂದಿರಬೇಕು.

ಈ ಹಬ್ಬದಲ್ಲಿ ಎತ್ತುಗಳ ಮೈತೊಳೆದು ವಿಶೇಷ ಪೂಜೆ ಮಾಡುತ್ತಾರೆ. ಯುವಕನೊಬ್ಬ ತನ್ನ ಮನೆಯ ಹೋರಿಗಳ ಬಗ್ಗೆ ಅಭಿಮಾನದಿಂದ ತನ್ನ ಗೆಳೆಯನಿಗೆ

ಕರಿಯತ್ತು ಕಾಳಿಂಗ ಬಿಳಿಯತ್ತು ಮಾಲಿಂಗ

ಸರದಾರ ನನ್ನೆತ್ತು ಸಾರಂಗ || ಬರುವಾಗ

ಮನೆಯ ಮಾಳಿಗೆಲ್ಲ ನಡಗ್ಯಾವು || ಎಂದು ಹೇಳುತ್ತಾರೆ.

ಬಲಿಯು ಏಳು ಸಮುದ್ರದಾಚೆ ದೋಣಿಯಲ್ಲಿ ನೂಕಲ್ಪಟ್ಟಿದ್ದರೂ ವರ್ಷಕ್ಕೊಮ್ಮೆ ತಾನು ಆಳಿದ ಸೀಮೆಯನ್ನು ನೋಡುವುದಕ್ಕಾಗಿ ದೀಪಾವಳಿಯಂದು ಬಂದು ಹೋಗುವನೆಂದು, ಆತನಿಗೋಸ್ಕರ ಹೊಸ ಅವಲಕ್ಕಿಯ ನೈವೇದ್ಯ ಸಲ್ಲಿಸಲಾಗುವುದೆಂದು ಹೇಳಲಾಗಿದೆ. ಕೆಲವು ಕಡೆ ದೀಪಾವಳಿಯಂದು ತಮ್ಮ ಹೊಲಗಳ ಬದುಗಳಲ್ಲಿ ಸಾಲು ದೀಪಗಳನ್ನು ಇರಿಸಿ ಬಲೀಂದ್ರ ಕಂಬವನ್ನು ನಿಲ್ಲಿಸಿ ಅವುಗಳ ಮೇಲೆ ದೀಪವನ್ನು ಕಟ್ಟುತ್ತಾರೆ. ಪ್ರತಿದಿನ ಕಾರ್ತಿಕಮಾಸ ಮುಗಿಯುವವರೆಗೂ ಗ್ರಾಮ ದೇವರ ಗುಡಿಯ ಒಂದು ಕಂಬಕ್ಕೆ ಎಣ್ಣೆ ದೀಪಕಟ್ಟುತ್ತಾರೆ. ಗ್ರಾಮಗಳಲ್ಲಿ ಸರದಿ ಪ್ರಕಾರ ಪೂಜೆ ಸಲ್ಲಿಸುತ್ತಾರೆ. ಇದು ಭಾವೈಕ್ಯತೆಯ ಸಂಕೇತವೂ ಹೌದು.

ದೀಪಾವಳಿ ಹಬ್ಬದಲ್ಲಿ ಹೆಣ್ಣು ಮಕ್ಕಳಿಗೆ ತಾಯಂದಿರಿಗೆ ಹೊಸದಾಗಿ ಮದುವೆಯಾದ ಅಳಿಯಂದಿರಿಗೆ ವಿಶೇಷ ಆಹ್ವಾನ. ಮನೆಯಲ್ಲಿ ಹಬ್ಬದ ಸಡಗರ. ಈ ಸಂತೋಷದ ಸಂದರ್ಭದಲ್ಲಿ ತವರಿಗೆ ಕರೆಸಿಕೊಳ್ಳುವುದನ್ನು ಮರೆಯಬೇಡ ಎಂದು ತಂಗಿಯೊಬ್ಬಳು ಅಣ್ಣನಿಗೆ,

ಕಾರುಣ್ಣುಮೆ ಹಬ್ಬಕ ಕರೆಲಾಕ ಮರೀಬ್ಯಾಡ

ಕಾಲ ಬಾಡೀಗೆ ಕೊಡಬೇಡಾ ನನ್ನಣ್ಣ

ಹೊನ್ನ ದೀಪಾವಳಿಗೆ ಮರಿಬ್ಯಾಡ

ಎಂದು ನೆನೆಪು ಮಾಡಿಕೊಳ್ಳುತ್ತಾರೆ. ಹೆಣ್ಣು ಮಕ್ಕಳಿಗೆ ಗೌರಿ, ದೀಪಾವಳಿ ಹಬ್ಬಗಳು ಬಹು ಮುಖ್ಯವಾದವು. ಈ ಹಬ್ಬಗಳನ್ನು ತವರು ಮನೆಯಲ್ಲಿ ಆಚರಿಸುವುದೆಂದರೆ ಅವರಿಗೆ ಬಲು ಹಿಗ್ಗು ಮನೆ ಮಕ್ಕಳಿಗೆಲ್ಲಾ ಬಣ್ಣ ಬಣ್ಣದ ಹೊಸ ಬಟ್ಟೆ, ಸಂಭ್ರಮದಿಂದ ಓಡಾಡುವ ದೃಶ್ಯ ಮನಮೋಹಕ. ಎಲ್ಲರ ಮನೆಯಲ್ಲಿಯೂ ಸಿಹಿಊಟ. ಮುಕ್ತ ಮನಸ್ಸಿನಿಂದ ಅತಿಥಿಗಳ ಸತ್ಕಾರ ಇವೆಲ್ಲ ಅವರ ಸಂತೃಪ್ತ ಜೀವನಕ್ಕೆ ಹಿಡಿದ ಕನ್ನಡಿ.

ದೀಪಾವಳಿ ಸಂದರ್ಭದಲ್ಲಿ ದಿನ ನಿತ್ಯ ತಮ್ಮ ಕೃಷಿ ಚಟುವಟಿಕೆಗಳಲ್ಲಿ ನೆರವಾಗುವ ದನಗಳನ್ನು ಪೂಜಿಸುವುದರ ಮೂಲಕ ತಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ. ಹುಲ್ಲಿನಿಂದ ಏಳು ಹೆಡೆಯ ಆಕಾರದ ವಿನ್ಯಾಸಮಾಡಿ ಅದರೊಳಗೆ ದೀಪವನ್ನಿಟ್ಟು ಹಸುಗಳಿಗೆ ಬೆಳಗುತ್ತಾರೆ. ಈ ಆಚರಣೆಗೆ ಆಣೆಪೀಣೆ ಎಂದು ಕರೆಯುತ್ತಾರೆ.

ಹೀಗೆ ಬೆಳಕಿನ ಹಬ್ಬ ದೀಪಾವಳಿಯನ್ನು ಮನೆ ಮಂದಿಎಲ್ಲಾ ಸೇರಿ ಸಂತೋಷ ಸಂಭ್ರಮದಿಂದ ಆಚರಿಸುತ್ತಾರೆ. ಇದರಿಂದ ದೇಹ ಮತ್ತು ಮನಸ್ಸಿಗೆ ಸುಖಶಾಂತಿ ಲಭಿಸಿ ಅತ್ಮೋನ್ನತಿ ದೊರೆತು, ನರಕಾಸುರರಂತಹ ದುಷ್ಟಶಕ್ತಿಗಳ ದಮನವಾಗಿ ಬಲೀಂದ್ರನಂಥ, ಗಂಧ ತ್ಯಾಗ ಜೀವನ ನಮ್ಮಲ್ಲಿ ಬೆಳೆದು ಎಲ್ಲರೂ ಸುಸಂಸ್ಕೃತರಾಗಿ ಬಾಳೋಣ. ದೀಪಾವಳಿಯನ್ನು ಸಂತೋಷದಿಂದ ಆಚರಿಸುವುದರ ಮೂಲಕ ನಮ್ಮ ಮನಸ್ಸಿನಲ್ಲಿರುವ ಅಜ್ಞಾನದಿಂದ ಕತ್ತಲೆಯನ್ನು ಓಡಿಸಿ ಬೆಳಕನ್ನು ಸ್ವಾಗತಿಸೋಣ.

**ಕಾರ್ತಿಕದ ಆಚರಣೆ**

ಸಜ್ಜನ ಗಾಣಿಗರು ಕಾರ್ತಿಕ ಮಾಸದ ತಿಂಗಳಲ್ಲಿ ಯಾವುದಾದರೂ ಶನಿವಾರದಂದು ಅಥವಾ ಬೇರೆ ದಿವಸಗಳಲ್ಲಿಯೂ ಕುಟುಂಬದವರೆಲ್ಲಾ ಸೇರಿ ಕಾರ್ತಿಕದ ದಿನವನ್ನು ನಿಗದಿ ಪಡಿಸಿಕೊಳ್ಳುತ್ತಾರೆ. ಕಾರ್ತಿಕದ ದಿವಸ ಮನೆಯಲ್ಲಿ ವಿಶೇಷ ಪೂಜೆ ಮತ್ತು ಅಡಿಗೆಯನ್ನು ಮಾಡುತ್ತಾರೆ. ನಂತರ ಮನೆಯವರು ಬೇರೆ ಕುಲಬಾಂಧವರನ್ನು ಕಾರ್ತಿಕಕ್ಕೆ ಕರೆಯುವುದುಂಟು. ಕುಲಬಾಂಧವರು ಹಾಗೂ ಕುಟುಂಬದ ಎಲ್ಲಾಸದಸ್ಯರು ಆಂಜನೇಯನ ದೇವಸ್ಥಾನಕ್ಕೆ ಹೋಗಿ ಮೊದಲು ಪೂಜಿಸುತ್ತಾರೆ. ನಂತರ ಈಶ್ವರ ದೇವರು ಹಾಗೂ ಗ್ರಾಮ ದೇವತೆ ಚೌಡಮ್ಮನನ್ನು ಪೂಜಿಸುತ್ತಾರೆ. ಈ ದೇವತೆಗೆ ಮೂರು ವರ್ಷಕ್ಕೊಮ್ಮೆ ಜಾತ್ರೆ ಆಚರಿಸುತ್ತಾರೆ.

ನಂತರ ಮಂಡಕ್ಕಿ, ಬೆಲ್ಲ, ಕಾಯಿ ಬಾಳೇಹಣ್ಣು ಇವುಗಳನ್ನೆಲ್ಲಾ ಬೆರೆಸಿ ಪ್ರಸಾದ ತಯಾರಿಸುತ್ತಾರೆ. ಜೊತೆಗೆ ಬಂದವರಿಗೆಲ್ಲಾ ಪ್ರಸಾದವನ್ನು ವಿತರಣೆ ಮಾಡಲಾಗುತ್ತದೆ. ನಂತರ ಮನೆಗೆ ಬಂದು ಎಲ್ಲರೂ ವಿಶೇಷವಾಗಿ ಮಾಡಿದ ಅಡಿಗೆಯನ್ನು ಊಟ ಮಾಡುತ್ತಾರೆ.

ಕಾರ್ತೀಕದಂದು ಆಂಜನೇಯ ದೇವರಿಗೆ ವಿಶೇಷವಾಗಿ ಕುಂಕುಮ ಪೂಜೆ, ಎಲೆ ಪೂಜೆಯನ್ನು ಸಹ ಮಾಡಿಸುತ್ತಾರೆ. ಎಣ್ಣೆ ದೀಪಗಳನ್ನು ಅಂದು ಬೆಳಗಿಸುತ್ತಾರೆ. ಜೊತೆಗೆ ಆ ದಿವಸ ಕಾರ್ತಿಕದ ಸಂಭ್ರಮದೊಂದಿಗೆ ಮಕ್ಕಳು ಪಟಾಕಿಯನ್ನು ಹೊಡೆಯುತ್ತಾರೆ.

ಕಾರ್ತಿಕ ಮಾಸದಂದು ದೇವರಿಗೆ ನಡೆದು ಕೊಳ್ಳುವರು. ವಿವಾಹ ಕಾರ್ಯವನ್ನು ವಿಶೇಷವಾಗಿ ಮಾಡಿಕೊಳ್ಳುತ್ತಾರೆ. ಹಾಗೂ ಸತಿ-ಪತಿಯರಾಗುವ ವಾಡಿಕೆ ಇದೆ. ಕಾರ್ತಿಕ ಮಾಸದಲ್ಲಿ ದೇವರಿಗೆ ವಿಶೇಷವಾಗಿ ಕುಂಕುಮ ಮತ್ತು ಎಲೆ ಪೂಜೆಗಳು ನಡೆಯುತ್ತವೆ. ಮತ್ತೆ ಕೆಲವರು ಅನ್ನವನ್ನು ತಯಾರಿಸಿ ಪೂಜಾರಿಯ ಕೈಗೆ ಕೊಟ್ಟು ಅನ್ನವನ್ನು ದೇವರ ವಿಗ್ರಹಕ್ಕೆ ಹಚ್ಚುತ್ತಾರೆ. ಈ ಪೂಜೆ ನಂತರ ವಿಶೇಷವಾಗಿ ದೇವರಿಗೆ ನಡೆದುಕೊಳ್ಳುವರು. ಹೂವಿನ ಪ್ರಸಾದ ಮತ್ತು ಹರಕೆಗಳನ್ನು ಮುಟ್ಟಿಸುವ ವಾಡಿಕೆಯು ಸಜ್ಜನ ಗಾಣಿಗ ಜನಾಂಗದಲ್ಲಿದೆ.

**ಶಿವರಾತ್ರಿ ಹಬ್ಬ**

ಮಾಘಮಾಸದ ಕೃಷ್ಣಪಕ್ಷದಲ್ಲಿ ಬರುವ ಚತುರ್ದಶಿಗೆ ಶಿವರಾತ್ರಿ ಎಂದು ಹೆಸರು. ಈ ಮಹಾಶಿವರಾತ್ರಿ ಹಬ್ಬ ಸಜ್ಜನ ಗಾಣಿಗ ಸಮುದಾಯದವರಿಗೆ ಪುಣ್ಯದಿನವೆಂದರೆ ತಪ್ಪಾಗಲಾರದು. ಶಿವರಾತ್ರಿಯಲ್ಲಿ ಶಿವನಾಮ ಸ್ಮರಣೆ ಮಾಡುತ್ತಾ ಜಾಗರಣೆ ಮಾಡಿದರೆ ಸಹಸ್ರ ವರ್ಷಗಳವರೆಗೆ ತಪಸ್ಸು ಮಾಡಿದ ಫಲವು ಶಿದ್ಧಿಯಾಗುವುದೆಂದೂ ಮಹಾಶಿವರಾತ್ರಿಯಲ್ಲಿ ಶಿವಭಕ್ತರು ಒಳ್ಳೆಯ ಭಕ್ತಿಯಿಂದ ಶಿವಭಜನೆ ಮಾಡುತ್ತಾ ಶುದ್ಧೋದಕದಿಂದ ಸ್ನಾನಮಾಡಿ ಶಿವನನ್ನು ಧೂಪ-ದೀಪ ನೈವೇದ್ಯಗಳಿಂದ ಪೂಜಿಸಿಸುತ್ತಾರೆ. ಪವಿತ್ರವಾದ ಗಂಗಾನದಿಯಲ್ಲಿ ಮಿಂದು ಕಾಶೀ ವಿಶ್ವೇಶ್ವರನ ದರ್ಶನದಿಂದ ಲಭಿಸುವ ಪುಣ್ಯ ಫಲವು ದೊರಕುತ್ತದೆಯೆಂದು ಪುಣ್ಯಕ್ಕೆ ಸರಿಸಮಾನ ಯಾವುದೂ ಇಲ್ಲವೆಂದು ಸ್ಕಂದ ಪುರಾಣದಲ್ಲಿ ಹೇಳಿರುವುದರಿಂದ ಈ ಸಮುದಾಯವು ಹಂಪಿ ಕ್ಷೇತ್ರವಾದ ತುಂಗಭದ್ರೆಯಲ್ಲಿ ಸ್ನಾನವನ್ನು ಮಾಡಿ ಶ್ರೀ ವಿರೂಪಾಕ್ಷೇಶ್ವರನ ದರ್ಶನವನ್ನು ಅಂದು ಕೆಲವರು ಮಾಡುತ್ತಾರೆ. ಆದಿನ ವಿಶೇಷ ಪೂಜೆ ಏರ್ಪಡಿಸುತ್ತಾರೆ.

ಗಾಣಿಗ ಸಮುದಾಯದ ಪ್ರಮುಖ ದೈವಗಳಾದ ಬಸವೇಶ್ವರ ಎಂಬ ಲಿಂಗಗಳು ಪರಮೇಶ್ವರನ ಪ್ರತಿರೂಪವೆಂದು ಭಾವಿಸಿ ಸಮುದಾಯದ ಕುಟುಂಬಗಳು ಶಿವರಾತ್ರಿ ದಿನ ದೇವಸ್ಥಾನಕ್ಕೆ ಕುಂಕುಮ, ಅರಿಶಿಣ, ವಿಭೂತಿ, ಹೂವು, ಕಾಯಿ, ಕರ್ಪೂರ ದೀಪ ಧೂಪಗಳಿಂದ ಆರತಿಗಳಿಂದ ಪೂಜೆ ಸಲ್ಲಿಸಿ ಶಿವನ ದರ್ಶನಕ್ಕೆ ಪಾತ್ರರಾಗುತ್ತಾರೆ. ಅಂದು ರಾತ್ರಿ ಮನೆಗಳಲ್ಲಿ ಜಾಗರಣೆ ಹಾಗೂ ಮಂಗಳಾರತಿ ಪದಗಳನ್ನು ಹಾಡುತ್ತಾ ಶಿವನಾಮ ಸ್ಮರಣೆಯನ್ನು ಮಾಡುತ್ತಾ ಈ ಹಬ್ಬವನ್ನು ಆಚರಿಸುತ್ತಾರೆ.

ಶಿವರಾತ್ರಿಯ ಪರ್ವಕಾಲದಲ್ಲಿ ಉಪವಾಸಮಾಡಿ, ಅಂದು ಜಾಗರಣೆಮಾಡಿ, ಲೋಕ ರಕ್ಷಕನಾದ ಶಿವನನ್ನು ಸ್ಮರಿಸಿ ಶಿವ ಶಿವ ಎಂದು ಜಯಘೋಷಮಾಡಿ ಬಿಲ್ವಪತ್ರಿಯಿಂದ ಶಿವನನ್ನು ಪೂಜಿಸಿದರೆ ಜನ್ಮ ಜನ್ಮಾಂತರದ ಪಾಪಗಳು ನಶಿಸಿ ಹೋಗಿ ಸಹಸ್ರಕೋಟಿ ಪುಣ್ಯವು ಲಭಿಸುತ್ತದೆಂದು ಸೂತ ಪುರಾಣಿಕರು ಶಿವರಾತ್ರಿಯ ಮಹಿಮೆಯನ್ನು ಅಖಂಡವಾಗಿ ಹೊಗಳಿ ಹಾಡಿದ್ದಾರೆ. ವಶಿಷ್ಟ, ಗಾರ್ಗಿ, ವಿಶ್ವಾಮಿತ್ರರಂಥ ಮಹಾಯೋಗಿಗಳು ಕೂಡ ಶಿವರಾತ್ರಿ ವ್ರತವನ್ನು ಆಚರಿಸಿ ಪುಣ್ಯಶಾಲಿಗಳಾಗಿ ಹೋಗಿದ್ದಾರೆ. ಆದ್ದರಿಂದಲೇ ಸ್ಕಂದ ಪುರಾಣದಲ್ಲಿ ಶಿವದರ್ಶನ ಪಡೆಯುತ್ತಿರುವ ಶಿವಭಕ್ತರಿಗೆ ಸದಾ ಸ್ವರ್ಗದ ಬಾಗಿಲು ತೆರೆದಿರುತ್ತದೆ ಎಂದು ಹೇಳಲಾಗಿದೆ. ಬೇಡರ ಕಣ್ಣಪ್ಪನ ಮುಗ್ದ ಭಕ್ತಿಗೆ ಶಿವನು ಮೆಚ್ಚಿ ಶಿವರಾತ್ರಿಯ ದಿನ ಆತನಿಗೆ ದರ್ಶನ ಕೊಟ್ಟ ಈ ಪುಣ್ಯ ಕಥೆಯು ಶಿವರಾತ್ರಿಯ ಕಥೆಯೆಂದು ಬಹು ಪ್ರಸಿದ್ಧಿಯನ್ನು ಪಡೆದಿದೆ.

ಬೇಡರ ಕಣ್ಣಪ್ಪನ ಭಕ್ತಿಯ ಮಹತ್ವವನ್ನು ಕೊಂಡಾಡಿ ಜಗತ್ ಕರ್ತನಾದ ಶಿವನೊಬ್ಬನೇ ಅಖಿಲಾಂಡ ಕೋಟಿ ಬ್ರಹ್ಮಾಂಡವನ್ನು ರಕ್ಷಿಸತಕ್ಕವನೆಂದು ಮತ್ತು ಈ ಶಿವರಾತ್ರಿಗೆ ಅನ್ವಯಿಸುತ್ತದೆ. ಇದರಲ್ಲಿ ಶಿವನಿಗೆ ಪ್ರಧಾನ ಪಾತ್ರಕೊಟ್ಟು ಆರಾಧಿಸುವ ಪ್ರವೃತ್ತಿಯನ್ನು ಕಾಣಬಹುದಾಗಿದೆ. ಮನೆಯಲ್ಲಿ ಭಜನೆ, ಕೀರ್ತನೆ, ಜಾಗರಣೆ, ಉಪವಾಸದ ಮೂಲಕ ಶಿವರಾತ್ರಿ ಹಬ್ಬವನ್ನು ಆಚರಿಸುತ್ತಾರೆ.

ಶಿವ ಮತ್ತು ಬಸವಣ್ಣನ ದೇವಾಲಯವನ್ನು ಅಂದು ಸುಣ್ಣ ಬಣ್ಣಗಳಿಂದ ಬಳಿದು ಮಾವಿನ ತೋರಣವನ್ನು ಕಟ್ಟುತ್ತಾರೆ. ಲಿಂಗಾಯತ ಸಮುದಾಯದವರೆಲ್ಲರೂ ದೇವಸ್ಥಾನಕ್ಕೆ ಬಂದು ವಿಶೇಷವಾಗಿ ಐದು ಅಥವಾ ಒಂಬತ್ತು ಪೂಜೆಗಳನ್ನು ನೆರವೇರಿಸುತ್ತಾರೆ. ಇಂದು ವಿಶೇಷವಾಗಿ ರಾತ್ರಿಯ ವೇಳೆಯಲ್ಲಿ ನಡೆಯುವ ಪೂಜೆಯಾಗಿರುತ್ತದೆ. ಮೊದಲು ಅರಳೆಣ್ಣೆಯಿಂದ ಲಿಂಗವನ್ನು, ಬಸವಣ್ಣನನ್ನು ತಿಕ್ಕಿ ತೊಳೆದು, ಪಂಚಾಮೃತದಿಂದ ಲಿಂಗ ಮತ್ತು ಬಸವಣ್ಣನನ್ನು ತಿಕ್ಕಿ ತೊಳೆಯುತ್ತಾರೆ. ಅದು ವಿಶೇಷವಾಗಿ ಬಿಲ್ವಪತ್ರಿಯಿಂದ ಶಿವನನ್ನು ವಿಶೇಷವಾಗಿ ಪೂಜಿಸುತ್ತಾರೆ. ಐದು ಪೂಜೆಗಳ ತರುವಾಯ ದೇವಾಲಯದಲ್ಲಿ ಬಂದ ಭಕ್ತಾದಿಗಳು ಕಾಯಿ ಮತ್ತು ಹಣ್ಣುಗಳನ್ನು ವಿಶೇಷವಾಗಿ ಪೂಜೆಗೆಂದು ತಂದಿರುತ್ತಾರೆ. ಪೂಜೆಯ ನಂತರ ಹಣ್ಣುಗಳನ್ನು ಎಲ್ಲಾ ಸೇರಿಸಿ ದೇವರ ಪ್ರಸಾದ ಮಾಡುತ್ತಾರೆ. ಜೊತೆಗೆ ಆ ರಾತ್ರಿ ಪ್ರಸಾದ ರೂಪದಲ್ಲಿ ಪುಳಿಯೊಗರೆಯನ್ನು ಭಕ್ತರಿಗೆ ಕೊಡುತ್ತಾರೆ.

ಶಿವರಾತ್ರಿಯಂದು ಯಾರೂ ಮನೆಯಲ್ಲಿಯೂ ಊಟ ಮಾಡಿರುವುದಿಲ್ಲ. ವಿಶೇಷವಾಗಿ ತಿಂಡಿಗಳನ್ನು ಮಾಡಿರುತ್ತಾರೆ. ಹಾಗೂ ಶಿವನನ್ನು ಶ್ರದ್ಧಾ ಭಕ್ತಿಯಿಂದ ಪೂಜಿಸುವುದರೊಂದಿಗೆ ಇಡೀ ರಾತ್ರಿ ಕಾಲಕಳೆಯುತ್ತಾರೆ. ರಾತ್ರಿಯೆಲ್ಲಾ ಶಿವ ಭಜನೆ ಮತ್ತು ಕೀರ್ತನೆಗಳನ್ನು ಹಾಡುತ್ತಾರೆ. ಶಿವರಾತ್ರಿಯಂದು ಇಡೀ ರಾತ್ರಿಯೆಲ್ಲಾ ಶಿವ ಭಜನೆ, ಕೀರ್ತನೆ ಶಿವ ಪೂಜೆಯನ್ನು ಮಾಡುವುದರಿಂದ ತಮಗೆ ಒಳ್ಳೆಯದಾಗುತ್ತದೆ, ಎಂಬ ಭಾವನೆ ಲಿಂಗಾಯತರಲ್ಲಿದೆ. ಶಿವಪೂಜೆ, ಶಿವದರ್ಶನ ಮೊದಲಾದವುಗಳು ಶಿವರಾತ್ರಿಯಂದು ನಡೆಯುತ್ತವೆ. ಈ ರಾತ್ರಿ ಯಾರೂ ಮಲಗುವುದಿಲ್ಲ.

**ಒಕ್ಕಲು ಪೂಜೆ**

ಸಜ್ಜನ ಗಾಣಿಗರು ಬಹುದೇವತಾರಾಧಕರು. ಪ್ರಕೃತಿಯನ್ನು ಪೂಜಿಸುವುದು ಮತ್ತು ಗಿಡಮರಗಳನ್ನು ಪೂಜಿಸುತ್ತಾರೆ. ಕರ್ತವ್ಯದಲ್ಲಿ ದೇವರನ್ನು ಕಾಣುವವರು. ಸಜ್ಜನ ಗಾಣಿಗರು ಹಿಂದೆ ಗಾಣದಲ್ಲಿ ದೇವತೆಯನ್ನು ಕಂಡವರು (ಗಾಣ ದೇವತೆ) ಮೊದಲು ಗಾಣವನ್ನು ಪೂಜಿಸಿ ಎಣ್ಣೆ ತೆಗೆಯುವ ಕಾರ್ಯವನ್ನು ನಿಷ್ಠೆಯಿಂದ ಮಾಡುತ್ತಿದ್ದರು.

ಇಂದಿನ ದಿನಗಳಲ್ಲಿ ಸಜ್ಜನ ಗಾಣಿಗರಲ್ಲಿ ಕೃಷಿ, ವ್ಯವಸಾಯ ಅಥವಾ ಒಕ್ಕಲುತನವನ್ನು ನಂಬಿ ಜೀವನವನ್ನು ನಡೆಸುತ್ತಿದ್ದಾರೆ. ವರ್ಷದ ಪ್ರಾರಂಭದಲ್ಲಿ ಹಾಗೂ ಬೀಜ ಒತ್ತುವಾಗ ಎತ್ತುಗಳನ್ನು ವ್ಯವಸಾಯಕ್ಕೆ ತಂದಿದ್ದು ವಸ್ತುಗಳಿಗೆ ಹಾಗೂ ಮೂರು ಚಿಕ್ಕ ಕಲ್ಲುಗಳನ್ನಿಟ್ಟು ಪೂಜಿಸುತ್ತಾರೆ. ಇದನ್ನು ಒಕ್ಕಲು ಪೂಜೆ ಎನ್ನುತ್ತಾರೆ. ಈ ಪೂಜೆಯನ್ನು ಮಾಡಿ ಬೀಜವನ್ನು ನೆಲಕ್ಕೆ ಬಿತ್ತಿದರೆ ಉತ್ತಮ ಬೆಳೆ ಬರುತ್ತದೆ ಎಂಬ ಭಾವನೆ ಸಜ್ಜನ ಗಾಣಿಗರಲ್ಲಿದೆ.

ತೆಂಗಿನ ಗಿಡ, ಅಡಿಕೆ ಗಿಡಗಳನ್ನು ಮೊದಲು ಹೊಲದಲ್ಲಿ ನೆಡುವಾಗ ಮೊದಲು ನೆಡುವ ಗಿಡಕ್ಕೆ ಪೂಜೆಯನ್ನು ಮಾಡಿ ನಂತರ ಉಳಿದ ಗಿಡಗಳನ್ನು (ಸಸಿಗಳನ್ನು) ನೆಡುವ ಪದ್ಧತಿ ಇವರಲ್ಲಿದೆ.

**ಕಾಳು ರಾಶಿ ಪೂಜೆ**

ಕಣದಲ್ಲಿ ಕಾಳನ್ನು ತುಳಿಸಿ ಅಥವಾ ಮಂತ್ರದಿಂದ ಕಾಳನ್ನು ಬಿಡಿಸಿ ಕಣದ ಮಡಲ್ಲಿ ಜೋಳ, ರಾಗಿ, ಮೆಕ್ಕೆಜೋಳ, ಮುಂತಾದ ದವಸಗಳ ರಾಶಿಮಾಡಿ ಅದರ ತುದಿಗೆ ಸಿಪ್ಪೇ ತೆಂಗಿನಕಾಯಿಯನ್ನು ಇಡುತ್ತಾರೆ. ಹಾಗೂ ರಾಶಿಯ ಸುತ್ತಾ ಈಚಲು ಪೊರಕೆಯಿಂದ ರಾಶಿಯ ಸುತ್ತ ಗೆರೆಯನ್ನು ಹಾಕುತ್ತಾರೆ. ನಂತರ ಪೊರಕೆ ಮಿಂದ ರಾಶಿಯಿಂದ ಮೂರು ಭಾಗವನ್ನು ಮಾಡಿ ಒಂದೊಂದು ಭಾಗದಲ್ಲಿ ಓಂ ಎಂದು ಬರೆಯುತ್ತಾರೆ. ನಂತರ ನೀರು, ವಿಭೂತಿ, ಕುಂಕುಮ, ಅರಿಶಿಣ, ಹೂವನ್ನು ಕಾಳಿನ ರಾಶಿಯಮೇಲೆ ಹಾಕುತ್ತಾರೆ. ನಂತರ ಕಣದಲ್ಲಿ ಮೂರು ಚಿಕ್ಕ ಗುಪ್ಪೆಗಳ ಕಾಳನ್ನು ಹಾಕುತ್ತಾರೆ. ಈ ಕಾಳನ್ನು ಮನೆಯ ಮಗಳಿಗೆ ಕೊಡಬೇಕೆನ್ನುವ ಪದ್ಧತಿ ಇದೆ. ಕಣದಿಂದ ಕಾಳೆತ್ತುವ ಮುಂಚೆ, ಮನೆಯ ಜಂಗಮನಿಗೆ, ಆಯಗಾರಗೆ ಅಂದರೆ ಕಮ್ಮಾರ, ಕುಂಬಾರ, ಮಡಿವಾಳ, ನೀರಗಂಟಿ ಅಥವಾ ತಳವಾರ, ಬಡಗಿ, ಕ್ಷೌರಿಕ ಇವರೆಲ್ಲರೂ ಸಜ್ಜನಗಾಣಿಗರಿಗೆ ವರ್ಷವಿಡೀ ಸೇವೆ ಮಾಡಬೇಕಾಗುತ್ತದೆ. ಇದರ ಪ್ರತಿಫಲಕ್ಕೆ ರಾಶಿ ಪೂಜೆಯಂದು ಆಯಾಗಾರರಿಗೆಲ್ಲರಿಗೂ ಕಾಳನ್ನು ದಾನ ಮಾಡುತ್ತಾರೆ. ಹಾಗೂ ಕೆಲಸಕ್ಕೆ ಬಂದ ಕೂಲಿಕಾರರಿಗೂ ಅಂದಿನ ದಿವಸ ಕಾಳನ್ನು ದಾನ ಕೊಡುತ್ತಾರೆ. ಈ ರಾಶಿ ಪೂಜೆ ಮಾಡುವುದರಿಂದ ದವಸ ದಾನ್ಯಗಳು ಹೆಚ್ಚುತ್ತವೆ ಎಂಬ ಭಾವನೆ ಸಜ್ಜನ ಗಾಣಿಗರಲ್ಲಿದೆ.

ಅಯಾಗಾರ ಪದ್ಧತಿ ಸಜ್ಜನ ಗಾಣಿಗರಲ್ಲಿ ಇಂದಿಗೂ ಅಸ್ತಿತ್ವದಲ್ಲಿದೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿ ಕ್ಷೌರಿಕ, ಮಡಿವಾಳ, ಕಮ್ಮಾರ, ಬಡಗಿ ಇವರು ವರ್ಷವಿಡೀ ರೈತರಿಗೆ ತಮ್ಮ ಸೇವೆಯನ್ನು ಸಲ್ಲಿಸಿ ಆ ಸೇವೆಗೆ

ಬದಲಾಗಿ ಕಾಳು-ರಾಶಿ ಮಾಡುವಾಗ ಕಾಳು-ಸ್ವೀಕರಿಸುತ್ತಾರೆ. ಇದನ್ನು ಅಯಾಗಾರ ಪದ್ಧತಿ ಎನ್ನುವರು. ಆಧುನಿಕ ದಿನಮಾನಗಳಲ್ಲಿ ದಣಿವು ಪ್ರಾಮುಖ್ಯವಾಗಿರುವುದರಿಂದ ವರ್ಷವಿಡೀ ಮಾಡಿದ ಸೇವೆಗೆ ಹಣದ ರೂಪದಲ್ಲಿ ಹಣವನ್ನು ಸ್ವೀಕರಿಸುತ್ತಾರೆ.

**ಬನ್ನಿ ಮರದ ಪೂಜೆ**

ಹೊಲದ ಬೆಳೆಯನ್ನು ಕಟಾವು ಮಾಡುವ ಮೊದಲು ಹೊಲದಲ್ಲಿ ಬೆಳೆದಿರಬಹುದಾದ ಬನ್ನಿ ಮರಕ್ಕೆ ಸೀರೆ ಮತ್ತು ರವಿಕೆ ತೊಡಿಸಿ ಬಾಳೆಯ ಎಲೆಯ ಮೇಲೆ ಬಾಳೇಹಣ್ಣು, ಚಿಗಳಿ, ಟಮಟ, ಎಲೆ ಅಡಿಕೆಯನ್ನು ಊಟ ಮಾಡುತ್ತಾರೆ. ಬನ್ನಿ ಮರದ ಕೆಳಗೆ ಮೂರು ಅಥವಾ ಐದು ಕಲ್ಲುಗಳನ್ನು ಇಟ್ಟು ಪೂಜಿಸುತ್ತಾರೆ. ಬಹಳ ತಲೆಮಾರುಗಳಿಂದಲೂ ಆ ಕಲ್ಲುಗಳನ್ನು ಪೂಜಿಸುತ್ತಾ ಬಂದಿದ್ದಾರೆ. ಐದು ಉಂಡಿಗಳಲ್ಲಿ ಒಂದು ಉಂಡಿಯನ್ನು ಬನ್ನಿಮರಕ್ಕೆ ಬಿಟ್ಟು ಉಳಿದ ಉಂಡಿಗಳನ್ನು ಅಲ್ಲಿ ಬಂದಿರುವ ಸದಸ್ಯರಿಗೆ ಕೊಡುತ್ತಾರೆ. ಅದರಲ್ಲಿಯೂ ಹೆಚ್ಚಾಗಿ ಮುತ್ತೈದೆ ಮಹಿಳೆಯರಿಗೆ ಕೊಡುವ ಪದ್ಧತಿ ಹೆಚ್ಚು. ಬನ್ನಿ ಮರದ ಪೂಜೆಯ ದಿವಸವನ್ನು ಹೊಲದ ಬೆಳೆಯ ಕೊಯ್ಲನ್ನು ಮೊದಲು ಮಾಡಿ ನಂತರ ದಿನದಿಂದ ಬೆಳೆಯನ್ನು ಸಂಪೂರ್ಣ ಕೊಯ್ಲು ಮಾಡುತ್ತಾರೆ. ಈ ದಿವಸ ಈ ಪೂಜೆಯಲ್ಲಿ ಪಾಲ್ಗೊಂಡ ಎಲ್ಲರಿಗೂ ಸಿಹಿ ಅಡಿಗೆಯನ್ನು ಊಟ ಮಾಡಲು ಬಡಿಸುತ್ತಾರೆ. ಎಡೆಗೆ ವಿಶೇಷವಾಗಿ ಹೋಳಿಗೆ ಎಡೆಯನ್ನು ಮಾಡಿರುತ್ತಾರೆ. ಈ ಪೂಜೆಯಿಂದ ಹೊಲದಲ್ಲಿ ಬೆಳೆ ಹುಲುಸಾಗಿ ಹೆಚ್ಚಳವಾಗುತ್ತದೆ ಎಂಬ ಭಾವನೆ ಇವರಲ್ಲಿದೆ.

**ಜಾತ್ರೆಗಳು**

ಚಿತ್ರದುರ್ಗದ ಗಾಣಿಗರಲ್ಲಿ ಸಾಮಾನ್ಯವಾಗಿ ಅವರವರ ಮನೆದೇವರ ಜಾತ್ರೆಗಳಲ್ಲಿ ಪಾಲ್ಗೊಳ್ಳುತ್ತಾರೆ. ಸಜ್ಜನ ಗಾಣಿಗರಲ್ಲಿ ತುಪ್ಪದವರು ವಿಶೇಷವಾಗಿ ನಡೆದುಕೊಳ್ಳುವ ದೇವರು ಹಾಗೂ ಜಾತ್ರೆ ಎಂದರೆ ಶ್ರೀ ಮಾವಿನಹಳ್ಳಿ ಬಸವೇಶ್ವರ ದೇವಸ್ಥಾನದ ಜಾತ್ರೆ. ಇದು ಬೀಮಸಮುದ್ರದ ಕೆರೆಯ ದಡದಲ್ಲಿ ನಿರ್ಮಾಣವಾಗಿದೆ. ವರ್ಷದಲ್ಲಿ ಒಂದು ಬಾರೀ ಈ ಜಾತ್ರೆಯು ನಡೆಯುತ್ತದೆ. ಈ ದೇವರಿಗೆ ಮತ್ತೊಂದು ಹೆಸರು ಗಿಣ್ಣದ ದೇವರು ಎಂದೂ ಕೂಡ ಕರೆಯುತ್ತಾರೆ.

ಈ ಬಸವಣ್ಣನ ಮೂರ್ತಿ ಬಲಕ್ಕೆ ವಾಲಿಕೊಂಡಿದೆ. ಇದಕ್ಕೆ ಒಂದು ಐತಿಹಾಸಿಕ ಕಥೆಯೂ ಸಹ ಉಂಟು. ಸಜ್ಜನ ಗಾಣಿಗರು, ವಿಶೇಷವಾಗಿ ಪಶುಪಾಲನೆಯನ್ನು ಮಾಡುವವರಾಗಿದ್ದೂ, ಸಜ್ಜನ ಗಾಣಿಗರ ಒಂದು ಕುಟುಂಬಕ್ಕೆ ಸೇರಿದ ಏಳು ದನಗಳು ಬಂಜೆತನದಿಂದ ಕರು ಹಾಕದ ಕಾರಣದಿಂದ ಮಾವಿನಹಳ್ಳಿ ಬಸವೇಶ್ವರನಿಗೆ ಹರಕೆಮಾಡಿಕೊಂಡರಂತೆ ನಮ್ಮ ಕುಟುಂಬದ ಏಳು ದನಗಳು ಗರ್ಭಧರಿಸಿ ಕರುಹಾಕಿದಲ್ಲಿ ಪ್ರತಿ ಎಮ್ಮೆಯ ಗಿಣ್ಣದ ಹಾಲು ಕರೆದು ಗಿಣ್ಣನ್ನು ಪ್ರಸಾದವಾಗಿ ನಿನಗೆ ಕಳಿಸುತ್ತೇನೆ ಎಂದು ಹರಕೆ ಮಾಡಿಕೊಂಡರಂತೆ, ಅದರಂತೆ ಎಮ್ಮೆಗಳು ಒಂದೊಂದಾಗಿ ಗರ್ಭದರಿಸಿ ಕರು ಹಾಕ ಹತ್ತಿದವು. ತಮ್ಮ ಹರಕೆಯ ಪ್ರಕಾರ ಆರು ಎಮ್ಮೆಯ ಗಿಣ್ಣನ್ನು ಮಾವಿನಳ್ಳಿ ಬಸವೇಶ್ವರನಿಗೆ ಪ್ರಸಾದದ ರೂಪದಲ್ಲಿ

ಮುಟ್ಟಿಸಿದರಂತೆ. ಇನ್ನೂ ಒಂದು ಎಮ್ಮೆಯ ಗಿಣ್ಣವನ್ನುಕಳಿಸದ ಕಾರಣದಿಂದ ಆ ಗಿಣ್ಣವಿಗೋಸ್ಕರ ಬಸವಣ್ಣ ಮೂರ್ತಿ ಬಲಗಡೆಗೆ ವಾಲಿಕೊಂಡು ಕಾಯುತ್ತಿದೆಯೆಂದು ಹಿರಿಯರು ಮಾವಿನಳ್ಳಿ ಬಸವೇಶ್ವರನ ಬಗ್ಗೆ ತಿಳಿಸುತ್ತಾರೆ. ಇಂದು ಸಹ ತುಪ್ಪದವರಲ್ಲಿ ಯಾರು ಮನೆಯಲ್ಲಿ ಹಸು ಮತ್ತು ಎಮ್ಮೆಗಳು ಕರುಹಾಕಿದರು ಮೊದಲು ಮಾವಿನಳ್ಳಿ ಬಸವೇಶ್ವರನಿಗೆ ಗಿಣ್ಣದ ಎಡೆಯನ್ನು ಕಳಿಸಿದ ಮೇಲೆಯೇ ನಂತರ ಮನೆಯವರೆಲ್ಲಾ ತಿನ್ನುತ್ತಾರೆ. ಈ ಬಸವೇಶ್ವರನನ್ನು ಗಿಣ್ಣದ ದೇವರು ಎಂದು ಕರೆಯುತ್ತಾರೆ. ವರ್ಷದ ೩೬೫ ದಿವಸವೂ ಸಹ ಇಲ್ಲಿ ಗಿಣ್ಣವು ಈ ದೇವರಿಗೆ ಬರುತ್ತಿರುತ್ತದೆ.

ಈ ಮಾವಿನಳ್ಳ ಬಸವೇಶ್ವರನಿಗೆ, ನಡೆದು ಕೊಳ್ಳುವ ಕುಲದವರು ಇವತ್ತಿಗೂ ಗಂಡಹೆಂಡತಿ ಜೊತೆ ಗೂಡಿ ದೇವಸ್ಥಾನಕ್ಕೆ ಹೋಗುವಂತಿಲ್ಲ. ಗಂಡ ಹೋದರೆ ಹೆಂಡತಿ ಮನೆಯಲ್ಲಿರುವಳು. ಹೆಂಡತಿ ಹೋದರೆ ಗಂಡ ಮನೆಯಲ್ಲಿರಬೇಕು. ಈ ದೇವರಿಗೆ ನಡೆದು ಕೊಳ್ಳುವವರು ಕಾಲ್ ಚೈನ್‌ನ್ನು ಧರಿಸುವ ಹಾಗಿಲ್ಲ. ಮಡಿಯಿಂದ ಈ ದೇವರಿಗೆ ನಡೆದುಕೊಳ್ಳಬೇಕು.

ಕುಲಬಾಂಧವರೆಲ್ಲಾ ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಆ ದಿವಸ ದಾಸೋಹ ಸೇವೆಯೂ ಸಹ ದೇವಸ್ಥಾನದಲ್ಲಿರುತ್ತದೆ. ಜಾತ್ರೆಯ ದಿವಸ ಸಾಯಂಕಾಲದ ವೇಳೆಗೆ ಹೂವಿನ ಹಾರವನ್ನು ಹರಾಜ್‌ಮಾಡುತ್ತಾರೆ. ಹೂವಿನ ಹಾರವನ್ನು ಹರಾಜ್‌ದಲ್ಲಿ ಪಡೆದರೆ ಕುಟುಂಬಕ್ಕೆ ಒಳ್ಳೆಯದಾಗುತ್ತದೆಂಬ ನಂಬಿಕೆ ತುಪ್ಪದವರಲ್ಲಿದೆ. ಈಗ ಹರಾಜ್‌ನಲ್ಲಿ ಹಾರ ಪಡೆದವರು ಹಣವನ್ನು ದೇವರ ಹೆಸರಿನಲ್ಲಿ ಮುಂದಿನ ಜಾತ್ರೆ ಬರುವುದೊಳಗಾಗಿ ಸಂದಾಯ ಮಾಡಬೇಕು. ನಂತರ ಬಸವಣ್ಣನ ಮೂರ್ತಿಯನ್ನು ತೇರಿನ ಒಳಭಾಗದಲ್ಲಿಟ್ಟು, ಸಂಜೆ ಸುಮಾರು ಆರು ಗಂಟೆಗೆ ತೇರನ್ನು ಜಾತ್ರೆಯಲ್ಲಿ ಸೇರಿದವರೆಲ್ಲಾ ಸೇರಿ ಎಳೆಯುತ್ತಾರೆ. ತೇರನ್ನು ಎಳೆಯುವಾಗ ತೇರಿಗೆ ಭಕ್ತಾಧಿಗಳು ಬಾಳೆಹಣ್ಣನ್ನು ತೂರುತ್ತಾರೆ ಮತ್ತು ಎಸೆಯುತ್ತಾರೆ. ಇಂದು ಕೂಡ ದನಗಳು ಕರುಹಾಕದಿದ್ದರೆ ಈ ದೇವರಿಗೆ ನಡೆದು ಕೊಂಡು ಗಿಣ್ಣ ಪ್ರಸಾದ ಮುಟ್ಟಿಸಿದರೆ ಹಸುಗಳು ಕರು ಹಾಕುತ್ತವೆ ಎಂಬ ನಂಬಿಕೆ ತುಪ್ಪದರಲ್ಲಿ ಮನೆ ಮಾಡಿ ಕೊಂಡಿದೆ.

ಈ ಮಾವಿನಳ್ಳಿ ಬಸವೇಶ್ವರನಿಗೆ ನಡೆದು ಕೊಳ್ಳುವ ಗಾಣಿಗರು ಬಸವಣ್ಣನಲ್ಲಿ ಹೂವಿನ ಪ್ರಸಾದವನ್ನು ಕೇಳುತ್ತಾರೆ. ದೇವರ ಬಲಭಾಗದ ಹೂವನ್ನು ಕೊಟ್ಟರೆ ತಾವು ಅಂದುಕೊಂಡ ಕೆಲಸಗಳು ಅಡೆತಡೆ ಇಲ್ಲದೆ ಆಗುತ್ತವೆ. ಎಡಭಾಗದ ಹೂವಿನ ಪ್ರಸಾದ ನೀಡಿದರೆ ತಾವು ಅಂದು ಕೊಂಡ ಕೆಲಸಗಳು ಆಗುವುದಿಲ್ಲ ಎಂಬ ನಂಬಿಕೆ ಗಾಣಿಗರಲ್ಲಿದೆ.

ಈ ಮಾವಿನಳ್ಳ ಬಸವೇಶ್ವರನಿಗೆ ಬೀಮಸಮುದ್ರದ ಸಾದ ಜನಾಂಗದವರು ನಡೆದು ಕೊಳ್ಳುವುದು ವಿಶೇಷವಾಗಿದೆ.

ಈ ದೇವಸ್ಥಾನಕ್ಕೆ ನಡೆದುಕೊಳ್ಳುವ ಭಕ್ತಾದಿಗಳು, ಜಾತ್ರೆಯಂದು ಸಾಮೂಹಿಕ ವಿವಾಹವನ್ನು ಮಾಡಿಕೊಂಡು ಸತಿ-ಪತಿಯರಾಗುವ ಉದಾಹರಣೆಗಳು ಉಂಟು. ಇಂದು ದೇವಸ್ಥಾನವು ದಾಸೋಹ, ಸಾಮೂಹಿಕ ವಿವಾಹಗಳ ಆಚರಣೆಗಳಿಗೂ ಹೆಸರುವಾಸಿಯಾಗಿದೆ.

**ನಾಯಕನಹಟ್ಟಿ ತಿಪ್ಪೇರುದ್ರ ಸ್ವಾಮಿಯ ಜಾತ್ರೆ**

ಚಿತ್ರದುರ್ಗ ಜಿಲ್ಲೆಯ ಚೆಳ್ಳಿಕೆರೆ ತಾಲ್ಲೂಕಿನಲ್ಲಿ ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿಯ ದೇವಾಲಯವಿದ್ದು, ವರ್ಷದ ಪ್ರತಿ ತಿಂಗಳಲ್ಲಿಯೂ ಕಲ್ಯಾಣ ಮಂಟಪದಲ್ಲಿ ವಿವಾಹಗಳು ಜರುಗುತ್ತಿರುತ್ತವೆ.

ಈ ದೇವಸ್ಥಾನದ ವಿಶೇಷವೆಂದರೆ ಕೇವಲ ಲಿಂಗಾಯತರು ಮತ್ತು ಗಾಣಿಗರು ಅಷ್ಟೇ ಈ ದೇವರಿಗೆ ನಡೆದು ಕೊಳ್ಳುತ್ತಿಲ್ಲ. ಎಲ್ಲಾ ಜನಾಂಗದವರು ಈ ದೇವಾಲಯಕ್ಕೆ ನಡೆದುಕೊಂಡು ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

ಶರಣ ಶ್ರೀ ನಾಯಕನಹಟ್ಟಿ ತಿಪ್ಪೇರುದ್ರ ಸ್ವಾಮಿಯವರು ನಾಯಕನ ಹಟ್ಟಿಯಲ್ಲಿ ಒಂದು ದೊಡ್ಡದಾದ ಕೆರೆಯನ್ನು ಕಟ್ಟಿಸಿದ್ದಾರೆ. ಈ ದೇವರಿಗೆ ಮನೆ ದೇವರನ್ನಾಗಿ ಮಾಡಿಕೊಂಡ ಭಕ್ತಾದಿಗಳು ತಮ್ಮ ಮಕ್ಕಳ ಜವಳವನ್ನು ದೇವಸ್ಥಾನದಲ್ಲಿ ತೆಗೆಸುವುದನ್ನು ಕಾಣುತ್ತೇವೆ.

ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ಯಾವುದೇ ಜಾತಿ ಬೇಧವಿಲ್ಲದೆ ಎಲ್ಲಾ ಜನಾಂಗದವರು ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಜಾತ್ರೆಯು ಮೂರು ಮತ್ತು ನಾಲ್ಕು ದಿವಸಗಳ ಕಾಲ ನಡೆಯುತ್ತಿದ್ದು ಹತ್ತಿರದ ಹಳ್ಳಿಯ ಜನ ದೇವರಿಗೆ ನಡೆದುಕೊಳ್ಳುವರು. ಎತ್ತಿನ ಗಾಡಿ ಕಟ್ಟಿಕೊಂಡು ಕುಟುಂಬದ ಸದಸ್ಯರೆಲ್ಲಾ ಹೋಗುತ್ತಾರೆ. ಹೋದ ದಿವಸದಿಂದ ಭಕ್ತಾದಿಗಳು ಸಿಹಿ ಸಿಹಿ ಅಡಿಗೆಯನ್ನು ಮಾಡಿಕೊಂಡು ಊಟ ಮಾಡುತ್ತಾರೆ. ಜಾತ್ರೆಯ ದಿನದಂದು ಎಲ್ಲಾ ಜಾತಿಯವರು ಸಿಹಿ ಅಡಿಗೆ ಹಾಗೂ ಸಸ್ಯಹಾರಿ ಆಹಾರವನ್ನೇ ಉಪಯೋಗಿಸುತ್ತಾರೆ.

ಜಾತ್ರೆಯ ದಿನದಂದು ಜಾತ್ರೆಗೆ ಹೋಗುವ ಭಕ್ತರಿಗೆ ಚಿತ್ರದುರ್ಗದಿಂದ ಬೇರೆ ಬೇರೆ ಪ್ರದೇಶಗಳಿಂದ ವಿಶೇಷ ಬಸ್ಸಿನ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ. ಜಾತ್ರೆಯ ದಿವಸ ತಿಪ್ಪೇರುದ್ರ ಸ್ವಾಮಿಯ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ತಂದು ದೊಡ್ಡದಾಗಿ ನಿರ್ಮಾಣಮಾಡಿರುವ ತೇರಿನಲ್ಲಿ ಕುಳ್ಳಿರಿಸುತ್ತಾರೆ. ಹಾಗೂ ತೇರಿಗೆ ಆ ದಿನದಂದು ವಿಶೇಷವಾಗಿ ಪೂಜಿಸುತ್ತಾರೆ. ಈ ಜಾತ್ರೆಗೆ ಲಕ್ಷಾಂತರ ಜನರು ಜಾತ್ರೆಗೆ ಸೇರುವುದುಂಟು. ಅಂದು ಸಂಜೆ ದೇವರ ಹಾರಗಳು ಹರಾಜ್ ಆಗುತ್ತವೆ. ಭಕ್ತಾದಿಗಳು ಹಾರವನ್ನು ಹಾರಾಜ್‌ನಲ್ಲಿ ಪಡೆಯುತ್ತಾರೆ. ಹಾರ ಹಾರಜ್‌ನಲ್ಲಿ ಪಡೆಯುವುದರಲ್ಲಿಯು ಸ್ಪರ್ಧೆ ಇರುತ್ತದೆ. ಇಲ್ಲಿ ಭಕ್ತಾದಿಗಳು ಗೌರವದ ಸಂಕೇತವಾಗಿ ಹಾರವನ್ನು ಪಡೆಯುತ್ತಾರೆ. ಮುಂದಿನ ಜಾತ್ರೆಯಂದು ಹಣವನ್ನು ದೇವಸ್ಥಾನದ ಆಡಳಿತ ಮಂಡಳಿಗೆ ಕೊಡಬೇಕಾಗುತ್ತದೆ. ತೇರನ್ನು ಎಲ್ಲಾ ಭಕ್ತಾದಿಗಳು ಸೇರಿ ಎಳೆಯುತ್ತಾರೆ. ತೇರು ಚಲಿಸುವಾಗ ಬಾಳೆ ಹಣ್ಣನ್ನು ಎಸೆಯುತ್ತಾರೆ. ಜಾತ್ರೆಗೆ ಬಂದ ನಾಯಕ ಜನಾಂಗ ಗೊಲ್ಲರು ಇವರೆಲ್ಲಾ ಮಾಂಸ ಆಹಾರಿಗಳಾಗಿದ್ದು, ಬೇಟೆಯನ್ನು ಕಡಿದು ದೇವಸ್ಥಾನದಿಂದ ದೂರ ಯಾವುದಾದರೂ ಒಂದು ತೋಟದಲ್ಲಿ ಮಾಂಸ ಆಹಾರ ಉಪಯೋಗಿಸಿ ತಮ್ಮ ಕುಲಬಾಂಧವರಿಗೂ ಮಾಂಸ ಆಹಾರ ಬಡಿಸುತ್ತಾರೆ. ಅದೇ ದಿವಸ ಚಿತ್ರದುರ್ಗ ತಾಲ್ಲೂಕ್‌ನ ಗೋನೂರು ಗ್ರಾಮದಲ್ಲಿಯೂ ತಿಪ್ಪೇರುದ್ರ ಸ್ವಾಮಿ ಜಾತ್ರೆ ಆಗುತ್ತದೆ. ಇಲ್ಲಿಯೂ ಸಹ ಜಾತ್ರೆಗೆ ವಿಶೇಷ ಜನ ಸೇರುತ್ತದೆ. ಇಲ್ಲಿಯು ತಿಪ್ಪೇರುದ್ರ ಸ್ವಾಮಿ, ಹೂ ಹರಾಜ್ ಹಾಗೂ ತೇರಿನಲ್ಲಿ ದೇವರಿಟ್ಟು

ಎಳೆಯುವುದು ವಿಶೇಷವಾಗಿದೆ ಈ ದೇವರ ಜಾತ್ರೆಯು ಏಕಕಾಲದಲ್ಲಿ ಗೋನೂರು ಮತ್ತು ನಾಯಕನ ಹಟ್ಟಿ ಎರಡರಲ್ಲಿ ನಡೆಯುತ್ತದೆ.

### ಗೃಹ ಪ್ರವೇಶ

ಗಾಣಿಗರಲ್ಲಿಯೂ ಗೃಹ ಪ್ರವೇಶ ಕಾರ್ಯಕ್ರಮವು ಸಾಮಾನ್ಯವಾಗುತ್ತಿದೆ. ಹೊಸಮನೆಯನ್ನು ಕಟ್ಟಿಸಿದ ಯಜಮಾನ ಹಾಗೂ ಹೆಂಡತಿಯು ಗೃಹ ಪ್ರವೇಶದ ದಿನಾಂಕವನ್ನು ನಿಗದಿ ಪಡಿಸಿ ಗೃಹ ಪ್ರವೇಶದ ಪತ್ರಿಕೆಗಳನ್ನು ಪ್ರಿಂಟ್ ಮಾಡಿಸಿ ಕುಲ ಸಂಬಂಧಿಗಳಿಗೆಲ್ಲಾ ಹಂಚುತ್ತಾರೆ.

ಗೃಹ ಪ್ರವೇಶದಂದು ಹೊಸ ಮನೆಗೆ ಮೊದಲು ಹಸು ಮತ್ತು ಕರುವನ್ನು ಪ್ರವೇಶ ಮಾಡಿಸುತ್ತಾರೆ. ಹಸು ಕರುವು ಹೊಸ ಮನೆಯಲ್ಲಿ ಸಗಣಿ ಗೋಮೂತ್ರವನ್ನು ಹಾಕಿದರೆ ಶುಭವೆಂದು ಕರೆಯುತ್ತಾರೆ. ಗೋಮೂತ್ರವನ್ನು ಹೊಸಮನೆಯ ಸುತ್ತ ಹಾಕುತ್ತಾರೆ. ಹಸು ಕರುವಿಗೆ ಅಂದು ಮಾಡಿದ ಪ್ರಸಾದವನ್ನು ಇಡುತ್ತಾರೆ. ಹಸು ಕರು ಹಿಡಿದು ತಂದವನಿಗೆ ಕಾಯಿ, ಹಣ್ಣು, ಹೊಸ ಬಟ್ಟೆಯನ್ನು ನೀಡುತ್ತಾರೆ.

ಕೆಲವರು ಈ ಕಾರ್ಯಕ್ರಮದ ಜೊತೆಗೆ ಸತ್ಯ ನಾರಾಯಣ ಪೂಜೆಯನ್ನು ಮಾಡಿಸುತ್ತಾರೆ. ಜಂಗಮರು ಗೃಹ ಪ್ರವೇಶದಲ್ಲಿ ಗಂಡ ಹೆಂಡತಿಯ ಕಂಕಣ ಕಟ್ಟುತ್ತಾರೆ. ಅಕ್ಕಿಯ ಮೂರು ಗುಂಪಿಗಳನ್ನು ಹಾಕಿಸಿ ಅದಕ್ಕೆ ಪೂಜೆ ಮಾಡಿ ಮನೆಯ ನಾಲ್ಕು ದಿಕ್ಕಿಗೂ ಕೈ ಅರಿಶಿಣವನ್ನು ಮಾಡಿಕೊಂಡು ಗೋಡೆಗೆ ಅಂಗೈಯಲ್ಲಾದ ಅರಿಶಿಣವನ್ನು ಹಚ್ಚುತ್ತಾರೆ. ಗೃಹ ಪ್ರವೇಶದ ಹಿನ್ನಲೆಯಲ್ಲಿ ಜಂಗಮರಿಗೆ ಹೊಸಬಟ್ಟೆ ದವಸ ದಾನ್ಯ, ಕಾಯಿ, ಬೆಲ್ಲ, ಬೇಳೆ, ದಕ್ಷಿಣೆ ಕೊಟ್ಟು ಗೌರವಿಸುತ್ತಾರೆ. ತವರು ಮನೆಯವರು ಗೃಹ ಪ್ರವೇಶದಂದು ಹೆಣ್ಣು ಮತ್ತು ಗಂಡಿಗೆ ಎರಡು ಜನಕ್ಕೂ ಹೊಸಬಟ್ಟೆ ಕೊಡುತ್ತಾರೆ. ಕುಲಬಾಂಧವರೂ ಸಹ ಗೃಹ ಪ್ರವೇಶದಂದು ಹೊಸಬಟ್ಟೆ ಉಡುಗೊರೆ ನೀಡುತ್ತಾರೆ. ಇಂದು ಸಾಮೂಹಿಕ ಭೋಜನ ಇರುತ್ತದೆ. ಇದು ಮನೆಕಟ್ಟಿಸಿದವರಿಗೆ ಸಂತೋಷವನ್ನು ನೀಡುತ್ತದೆ. ಗೃಹ ಪ್ರವೇಶದಂದು ವಸ್ತು ಮತ್ತು ಹಣದ ರೂಪದಲ್ಲಿ ಕಾಣಿಕೆ ಕೊಡುತ್ತಾರೆ.

• • •

## ಅಧ್ಯಾಯ : ಐದು

# ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಜೀವನ

೫.೧ ಆರ್ಥಿಕ ಜೀವನ

೫.೨. ಶೈಕ್ಷಣಿಕ ಪದ್ಧತಿ

೫.೩. ರಾಜಕೀಯ ಜೀವನ

## ಅಧ್ಯಾಯ : ಐದು

## ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಜೀವನ

### ೫. ೧. ಆರ್ಥಿಕ ಜೀವನ

ಮನುಷ್ಯನ ವಿಕಾಸದ ಇತಿಹಾಸವನ್ನು ಗಮನಿಸಿದಾಗ, ಅವನು ಆದಿ ಕಾಲದಿಂದ ಪ್ರಸ್ತುತ ಆಧುನಿಕ ಬದುಕಿನವರೆಗೂ ನಡೆದು ಬಂದ ದಾರಿಯನ್ನು ಅವಲೋಕಿಸಿದಾಗ ಕಾಲ ಕಾಲಕ್ಕೆ ಈತನಲ್ಲಾಗುವ ಬದಲಾವಣೆ, ವೈಜ್ಞಾನಿಕ ಅನ್ವೇಷಣೆಗಳು ಇವುಗಳೊಂದಿಗೆ ಆ ಮೂಲಕವಾಗಿ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕವಾಗಿ ಮಾನವ ಮುಂದುವರೆದ ಹಾಗೂ ಹಿಂದುಳಿದ ಹತ್ತು ಹಲವು ಮುಖಗಳು ಗೋಚರಿಸುತ್ತವೆ. ಇಡೀ ಭೂಗೋಳದಲ್ಲಿ ಯಾವುದೇ ಒಬ್ಬ ವ್ಯಕ್ತಿಯ ಅಥವಾ ಒಂದು ಸಮುದಾಯದ ಜೀವನ ವಾತ್ಸಲ್ಯವನ್ನು ನಿರ್ಧರಿಸುವಲ್ಲಿ ಮುಖ್ಯಪಾತ್ರ ಕೃಷಿ, ಪಶುಪಾಲನೆ, ಹೀಗೆ ಮನುಷ್ಯ ಒಂದೊಂದು ಹಂತ ತಲುಪಿ ಆತನ ಬದುಕಿನ ರೂಪುರೇಷಗಳು ಬದಲಾವಣೆಗೆ ಒಳಗಾದುದನ್ನು ಇತಿಹಾಸದ ಮೂಲಕ ತಿಳಿಯಬಹುದಾಗಿದೆ.

ಸಮುದಾಯ ಅನುಸರಿಸುತ್ತಿರುವ ಆರ್ಥಿಕ ಚಟುವಟಿಕೆಗಳು ಮಾನವನ ಶ್ರಮ, ಸಂಪತ್ತಿನ ಬಳಕೆ, ಸಂಪನ್ಮೂಲಗಳ ಪಾತ್ರ, ಜನಸಂಖ್ಯೆ ಶಿಕ್ಷಣದ ಪಾತ್ರ, ಪ್ರಭಾವ ಕೌಟುಂಬಿಕ ಜೀವನದಲ್ಲಿ ಆವರ್ತಗಳು, ಉದ್ಯೋಗಗಳ ಹಂಚಿಕೆಯಿಂದ ಬದಲಾಗುತ್ತಿರುವ ಸಮಾಜದಲ್ಲಿ ನಿರ್ಮಿಸಿಕೊಂಡಿರುವ ರೀತಿ, ನೀತಿ ತಿಳಿಯುವುದಾಗಿದೆ. ಹೀಗೆ ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕತೆ ಎಂಬುದು ತುಂಬಾ ಮಹತ್ವದ ಪಾತ್ರ ವಹಿಸುತ್ತದೆ. ಈ ಎಲ್ಲಾ ಬದಲಾವಣೆಗಳಿಂದ ಸಾಂಸ್ಕೃತಿಕ ಅಂಶಗಳಾದ ಸಾಮಾಜಿಕ, ರಾಜಕೀಯ, ಧಾರ್ಮಿಕ ರೀತಿ ನೀತಿಗಳಲ್ಲಿನ ಬದಲಾವಣೆಗಳು ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆಯೇ ನಿರ್ಧಾರವಾಗುತ್ತವೆ.

ಒಂದು ಸಮುದಾಯದ ಸರ್ವಾಂಗೀಣ ಆಶಯಗಳು ರೂಪುಗೊಳ್ಳುವುದು ಆರ್ಥಿಕವಾಗಿ ಆ ಸಮುದಾಯ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಆಧರಿಸಿರುತ್ತದೆ. ಭಾರತದಂತಹ ಸಂಪ್ರದಾಯಶೀಲ ಸಮಾಜದಲ್ಲಿ ಸಮುದಾಯವೊಂದರ ವರ್ತಮಾನದ ಸ್ಥಿತಿಗಳಿಗೆ ನಿನ್ನೆಗಳಲ್ಲಿ ಕಾರಣಗಳಿರುತ್ತವೆ. ಆದ್ದರಿಂದ ಸಮುದಾಯವೊಂದರ

ಈವತ್ತಿನ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲು ಅದರ ಆರ್ಥಿಕ ಚಟುವಟಿಕೆಗಳು ಚಾರಿತ್ರಿಕ ರೂಪಾಂತರಗಳನ್ನು ಅಧ್ಯಯನ ಮಾಡಬೇಕಾಗುತ್ತದೆ.

ಒಂದು ಸಮುದಾಯದ ಬದುಕಿನ ಎಲ್ಲಾ ವಿವರಗಳು ರೂಪುಗೊಳ್ಳುವುದು ಸಮುದಾಯ ಯಾವ ಬಗೆಯ ಉತ್ಪಾದನಾ ಚಟುವಟಿಕೆಯಲ್ಲಿ ಪಾಲ್ಗೊಂಡಿದೆ ಎಂಬುದನ್ನು ಅವಲಂಬಿಸಿದೆ. ಅಂದರೆ ಆರ್ಥಿಕ ಚಟುವಟಿಕೆಗಳು ಸಮುದಾಯವೊಂದರ ಬದುಕಿನ ಗಡಿಯನ್ನು ನಿರ್ದೇಶಿಸುತ್ತವೆ. ನಾವು ಇಂದುಗುರುತಿಸುವ ಪ್ರತಿಯೊಂದು ಸಾಂಸ್ಕೃತಿಕ ಘಟಕವು ತನ್ನ ಅನನ್ಯತೆಯನ್ನು ಉಳಿಸಿಕೊಂಡಿರುವುದು ತನ್ನ ಉತ್ಪಾದನಾ ಚಟುವಟಿಕೆಯ ಮೇಲೆಯೇ. ಒಂದು ಸಮುದಾಯದ ಅಧ್ಯಯನವೆಂದರೆ ಅದರ ಆರ್ಥಿಕ ಚಟುವಟಿಕೆಗಳ ರೂಪಾಂತರಗಳ ಅಧ್ಯಯನವೇ ಆಗಿದೆ.

ಸಮುದಾಯದ ಸಾಮಾಜಿಕ ಜೀವನ ನಿರ್ಧರಿಸುವಲ್ಲಿ ಆರ್ಥಿಕ ವ್ಯಕ್ತಿಗಳು ಮುಖ್ಯ ಪಾತ್ರವಹಿಸುತ್ತವೆ. ಗಾಣಿಗ ಸಮುದಾಯದ ಮೂಲ ಉದ್ಯೋಗವಾದ ಸೈನಿಕ ವೃತ್ತಿಯಿಂದ ಜೀವನ ನಿರ್ವಹಣೆಗೆಂದು ಅವಲಂಬಿಸಿದ ವೃತ್ತಿಯಾದ ಗಾಣದಿಂದ ಎಣ್ಣೆ ತೆಗೆದು ಮಾರುವುದಾಗಿದೆ. ಈ ಎಣ್ಣೆ ಮಾರುವ ಪ್ರಕ್ರಿಯೆ ಎಂದಿನಿಂದ ಪ್ರಾರಂಬಿಸಿರಬಹುದು ಎಂಬ ಪ್ರಶ್ನೆ ಮಾಡಿದಾಗ ಸೊಂಡೇಕೆರೆಯ ಹಿರಿಯ ನಾಗರೀಕ ಹಾಗೂ ಗಾಣಿಗ ಸಮುದಾಯದ ಸದಸ್ಯ ಹೇಳುವಂತೆ; ತಾಳಿಕೋಟೆ ಕದನದಿಂದ ನಂತರ ತಾಳಿಕೋಟೆಯಲ್ಲಿ ಆ ಸ್ಥಿತಿಯಲ್ಲಿ ಗಾಣಿಗರು ಅನುಭವಿಸಿದ ಕಷ್ಟಗಳನ್ನು ಸಹಿಸಲಾರದೆ ಭಾರತದ ವಿವಿಧ ಭಾಗಗಳಿಗೆ ಮತ್ತು ಕರ್ನಾಟಕದ ವಿವಿಧ ಭಾಗಗಳಿಗೆ ವಲಸೆ ಬಂದ ಜನರೇ ಗಾಣಿಗರಾಗಿದ್ದಾರೆ. ಇವರು ತಮ್ಮ ಜೀವನ ಅನುಕೂಲತೆಗೆ ತಕ್ಕಂತೆ ಜೀವನ ರೂಪಿಸಿಕೊಂಡಿದ್ದಾರೆ. ಇವರು ತಮ್ಮ ಹೊಟ್ಟೆ ಹೊರೆಯಲಿಕ್ಕೆ ಸಾಂಪ್ರದಾಯಿಕ ಗಾಣದಿಂದ ಎಣ್ಣೆ ತೆಗೆದು ಅದನ್ನು ಮಾರುಕಟ್ಟೆಯಲ್ಲಿ ಮಾರಿ ಇತರೆ ಗೃಹೋಪಯೋಗಿ ಆಹಾರ ಪದಾರ್ಥಗಳನ್ನು ಪಡೆದು ಜೀವನ ನಿರ್ವಹಣೆ ಮಾಡ ತೊಡಗಿದರು.

ಪಶುಗಳನ್ನು ಸಾಕಿ ತಮಗೆ ಪಶುಪಾಲನೆಯಿಂದ ಆರ್ಥಿಕ ಲಾಭವಿದೆ. ಎಂದು ತಿಳಿದು ಇವರ ಮುಂದಿನ ಹೆಜ್ಜೆಯಲ್ಲಿ ಪಶುಪಾಲನೆಯನ್ನು ಮಾಡ ತೊಡಗಿದರು.

ಇಂದು ಭಾರತದ ತುಂಬೆಲ್ಲಾ ಹರಡಿರುವ ಗಾಣಿಗರ ಮೂಲ ಉದ್ಯೋಗ ಗಾಣದಿಂದ ಎಣ್ಣೆ ತೆಗೆದು ಮಾರಾಟ, ವ್ಯವಸಾಯ ಮತ್ತು ಹೈನುಗಾರಿಕೆ. ಈ ಮೂರು ಉದ್ಯೋಗಗಳು ಇವರಲ್ಲಿ ಹೆಚ್ಚು ಪ್ರಚಲಿತಗಳಲ್ಲಿವೆ. ನಾಗರೀಕತೆಯು ಬೆಳೆದಂತೆ, ಈ ಸಮುದಾಯದ ಆರ್ಥಿಕ ಪರಿಸ್ಥಿತಿಯನ್ನು ಅಧ್ಯಯನ ಮಾಡುವುದು ಇಂದಿನ ಜರೂರತ್ತಾಗಿದೆ. ಏಕೆಂದರೆ ಒಂದು ಸಮುದಾಯದ ಅಡಿಪಾಯ ಎಂದರೆ ಅವರ ಆರ್ಥಿಕತೆ. ಅದರ ಮೇಲೆ ಇವರ ನೈಜ ಪರಿಸ್ಥಿತಿಯ ಸೌಧವನ್ನು ಅರಿಯಬೇಕಾಗಿದೆ. ಹಾಗಾಗಿ ಒಂದು ಸಮುದಾಯದ ಆರ್ಥಿಕ ಪರಿಸ್ಥಿತಿಯ ಅಧ್ಯಯನ ಆ ಸಮುದಾಯ ಇಂದು ಸಮಾಜದಲ್ಲಿ ಪಡೆದಿರುವ ಸ್ಥಾನಮಾನ ಒಟ್ಟಾರೆ ಪರಿಸ್ಥಿತಿಯನ್ನು ನಿರ್ದೇಶಿಸುತ್ತದೆ. ಈ ರೀತಿಯಾಗಿ ಅದಿಕಾಲದಿಂದ ಇಂದಿನವರೆಗೂ ಮಾಡಿಕೊಂಡು

ಬಂದಿರುವ ಉದ್ಯೋಗ ಇವರ ಹೊಟ್ಟೆ ತುಂಬಿಸಿದೆಯೇ? ಇವರ ವೃತ್ತಿಯಲ್ಲಾದ ಬದಲಾವಣೆಗಳೇನು? ಇದು ಇವರಿಗೆ ಸಮಾಜದಲ್ಲಿ ಗೌರವ ತಂದು ಕೊಟ್ಟೆದೆಯೇ? ಇವರ ಪರಿಸ್ಥಿತಿ ಸುಧಾರಿಸಿದೆಯೇ? ಹೀಗೆ ಹತ್ತು ಹಲವು ಪ್ರಶ್ನೆಗಳನ್ನಿಟ್ಟುಕೊಂಡು ಈ ಅಧ್ಯಯನ ವಿಶ್ಲೇಷಿಸಲಾಗಿದೆ.

ಗಾಣಿಗರು ಇಂದು ತಮ್ಮ ಸಮುದಾಯದಲ್ಲಿ ಹೊಸ ತಿರುವನ್ನು ಕಾಣತೊಡಗಿದ್ದಾರೆ. ಇವರಲ್ಲಿ ಚಿತ್ರದುರ್ಗ ಜಿಲ್ಲೆ ಕ್ಷೇತ್ರ ಕಾರ್ಯದಿಂದ ತಿಳಿದು ಬಂದ ಸಂಗತಿಯೆಂದರೆ ಸಜ್ಜನ ಗಾಣಿಗರು ತಮ್ಮ ಮೂಲ ವೃತ್ತಿಯನ್ನು ಬಿಟ್ಟು ೮೦ ರಷ್ಟು ಜನರು ವ್ಯವಸಾಯವನ್ನು ಅವಲಂಬಿಸಿಕೊಂಡು ಬದುಕುತ್ತಾರೆ. ಇವರು ಹೆಚ್ಚು ಗ್ರಾಮವಾಸಿಗಳಾಗಿದ್ದಾರೆ. ಇನ್ನೂಳಿದ ೨೦ ರಷ್ಟು ಜನರು ತಮ್ಮನ್ನು ವಿವಿಧ ವೃತ್ತಿಗಳು ಮತ್ತು ಸರಕಾರಿ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ನಗರಗಳಲ್ಲಿ ಹೆಚ್ಚಾಗಿ ವ್ಯವಸಾಯೇತರ ವೃತ್ತಿಯನ್ನು ಹೊಂದಿರುವವರು ಮಾತ್ರ ವಾಸ ಮಾಡುತ್ತಿದ್ದಾರೆ.

ಜ್ಯೋತಿ ಗಾಣಿಗರು ಹೆಚ್ಚಾಗಿ ವ್ಯಾಪಾರ ವೃತ್ತಿಯನ್ನು ಹೊಂದಿರುವುದರಿಂದ ಇವರಲ್ಲಿ ವ್ಯವಸಾಯಕ್ಕೆ ಸಂಬಂಧಿಸಿದ ಆಸ್ತಿಗಳು ಕಡಿಮೆ. ಇವರು ಎಣ್ಣೆ ವ್ಯಾಪಾರದೊಂದಿಗೆ ಕಿರಾಣಿ ಅಂಗಡಿಗಳನ್ನು ಹೆಚ್ಚಾಗಿ ಇಟ್ಟು ಕೊಂಡಿದ್ದು, ತಮ್ಮ ಮಕ್ಕಳ ಪ್ರಗತಿಗಾಗಿ ನಗರಗಳನ್ನು ಸೇರಿದ್ದಾರೆ.

ಕರೇಕುಲ ಗಾಣಿಗರು ಹೆಚ್ಚಾಗಿ ವ್ಯವಸಾಯದ ಜೊತೆಗೆ ಸೈನಿಕ ಶಕ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ಸೈನಿಕರು ಯಾವಾಗ ಬೇಕಾದರೂ ಮರಣ ಹೊಂದುವ ಸಾದ್ಯತೆಗಳಿವೆ. ಇದರಿಂದ ಇವರಲ್ಲಿ ವಿಧವಾಮರು ವಿವಾಹಕ್ಕೆ ಅವಕಾಶ ಕಲ್ಪಿಸಿಕೊಟ್ಟಿದಾರೆ.

ಸಜ್ಜನ ಗಾಣಿಗರು ಚಳ್ಳಿಕೆರೆ ತಾಲ್ಲೂಕಿನಲ್ಲಿ ಇಂದು ಎಣ್ಣೆ ಮಿಲ್‌ಗಳನ್ನು ಸ್ಥಾಪಿಸಿ, ಬಂಡವಾಳ ತೊಡಗಿಸಿ ಎಣ್ಣೆ ತೆಗೆದು ಹೊರ ರಾಜ್ಯಗಳಾದ ಆಂದ್ರ ಮತ್ತು ತಮಿಳುನಾಡಿಗೆ ಎಣ್ಣೆ ಕಳಿಸುತ್ತಿದ್ದಾರೆ. ಮತ್ತು ಅರ್ಥಿಕ ಲಾಭವನ್ನು ಪಡೆಯುತ್ತಿದ್ದಾರೆ.

**ಮೂಲ ಕಸುಬು**

ಗಾಣಿಗರಲ್ಲಿ ಮೂಲ ಕಸುಬು ಎಣ್ಣೆ. ಸಾಂಪ್ರದಾಯಕ ಗಾಣಗಳಿಂದ ಎಣ್ಣೆ ತೆಗೆದು ಜೀವಿಸುವುದಾಗಿತ್ತು. ಆದರೆ ಮಾರು ಕಟ್ಟೆಗಳು ಬೆಳೆದಂತೆ ಹಣಕ್ಕೋಸ್ಕರ ದುಡಿಮೆ ಇವರಲ್ಲಿ ಪ್ರಾರಂಭವಾಯಿತು.

ಚಿತ್ರದುರ್ಗದ ಸಜ್ಜನ ಗಾಣಿಗರಲ್ಲಿ ಮೂಲ ವೃತ್ತಿಗಳು ಇಂದು ಬದಲಾವಣೆಗೊಂಡಿದ್ದು ಎಣ್ಣೆ ತಯಾರಿಕೆ ಣ್ಣೆ ಮಾರಾಟದ ವೃತ್ತಿಗಳನ್ನು ಬಿಟ್ಟು ತಮಗೆ ಲಾಭ ಕೊಡುವ ವ್ಯಕ್ತಿಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಇವರಲ್ಲಿ ಹೆಚ್ಚು ಭಾಗ ವ್ಯವಸಾಯ ವೃತ್ತಿ ಅವಲಂಬಿಸಿಕೊಂಡು ಬದುಕುವರಾಗಿದ್ದಾರೆ. ಚಳ್ಳಿಕೆರೆಯ ಎಣ್ಣೆ ಮಿಲ್‌ಗಳು ಇಂದು ಅವರನ್ನು ಎಣ್ಣೆಯ ರಾಜರುಗಳನ್ನಾಗಿ ಪರಿವರ್ತಿಸಿವೆ. ಇನ್ನುಳಿದಂತೆ ವ್ಯವಸಾಯ ಬಿಟ್ಟ ೨೦% ಜನ ಇತರ ವೃತ್ತಿಗಳಲ್ಲಿ ಅಂದರೆ ವ್ಯವಸಾಯೇತರ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

## ವ್ಯಕ್ತಿ ಸಂಬಂಧದ ಪರಿಕರಗಳು ಹಾಗೂ ತಯಾರಿಕೆ

ಗಾಣಿಗರ ಮೂಲ ಉದ್ಯೋಗ ಎಣ್ಣೆ ತಯಾರು ಮಾಡಿ ಮಾರಾಟ ಮಾಡುವುದಾಗಿದೆ. ಹಾಗಾಗಿ ಇವರ ಉದ್ಯೋಗಕ್ಕೆ ಸಂಬಂಧಿಸಿರುವ ಸಲಕರಣೆಗಳನ್ನು ಇಲ್ಲಿ ಪರಿಚಯಿಸುತ್ತಾ, ಅವುಗಳ ತಯಾರಿಕೆಯನ್ನು ಕುರಿತು ತಿಳಿಸುವ ಪ್ರಯತ್ನ ಮಾಡಲಾಗಿದೆ. ಒಂದು ಸಮುದಾಯಕ್ಕೆ ಆ ಸಮುದಾಯವು ತನ್ನ ಕುಟುಂಬ ನಿರ್ವಹಣೆಗಾಗಿ ಅವಲಂಬಿಸಿರುವ ವೃತ್ತಿ ಹಾಗೂ ಆ ವೃತ್ತಿಗೆ ಅವಶ್ಯವಾಗಿರುವ ಸಲಕರಣೆಗಳು ಪೂಜನೀಯವಾಗಿರುತ್ತವೆ. ಕಾರಣ ಅವುಗಳಿಲ್ಲದೆ ಅವರ ಜೀವನ ಸಾಗುವುದು ಕಷ್ಟಕರವಾಗಿರುತ್ತದೆ. ಆದ್ದರಿಂದ ಅವರು ಈ ವಸ್ತುಗಳನ್ನು ದೇವರೆಂದು ಪ್ರಮುಖವಾಗಿ ಕಾಣುವುದು ಕಂಡು ಬರುತ್ತದೆ. ಗಾಣದಲ್ಲಿ ಗಾಣಿಗರು ದೇವತೆಯನ್ನು ಅಂದರೆ ಗಾಣ ದೇವತೆಯನ್ನು ಕಾಣುವವರಾಗಿದ್ದಾರೆ. ಗಾಣಿಗ ಸಮುದಾಯದವರು ಮುಖ್ಯವಾಗಿ ತಮ್ಮ ವೃತ್ತಿಯ ಅನುಕೂಲತೆಗಾಗಿ ಬಳಸುವ ಸಲಕರಣೆಗಳು ಎಂದರೆ;

೧. **ಅಗಳಿ:** ಡೊಂಕವನ್ನು ಕತ್ತರಿ ಕಟ್ಟಿಕೆಗೆ ಸೇರಿಸುವ ಸಾಧನ: ಕಟ್ಟಿಗೆಯ ಚಿಲುಕು.

೨. **ಬಳ್ಳಾ:** ಗಾಣದ ಕಲ್ಲಿನ ಮಧ್ಯಭಾಗ ಗಾಣದ ಕಲ್ಲಿನ ಮಧ್ಯದಲ್ಲಿ ೧.೫ ಅಡಿರಂಧ್ರ ಇರುತ್ತದೆ. ಅದರೊಂದಿಗೆ ಕಣೆ ಇಳಿಸಿರುತ್ತಾರೆ. ಗಾಣದ ಕ್ರಿಯೆ ಮುಗಿದನಂತರ ಇದರೊಳಗೆ ಎಣ್ಣೆ ಶೇಖರವಾಗುತ್ತದೆ.

೩. **ಕಣೆ:** ವರ್ತುಲಾಕಾರವಾಗಿರುವ ಕಟ್ಟಿಗೆಯ ತುಂಡು. ಇದು ತುಂಬಾ ಬಿರುಸಾಗಿರುತ್ತದೆ ೬. ೫ ಫೂಟ್ ಉದ್ದವಿರುತ್ತದೆ. ಇದರ ಹಿಂಭಾಗದಲ್ಲಿ ಕಬ್ಬಿಣದ ಗಾಲಿಯನ್ನು ಸಿಕ್ಕಿಸಿರುತ್ತಾರೆ. ಎಣ್ಣೆ ಕಾಳುಗಳನ್ನು ಕಣೆಯ ಸಹಾಯದಿಂದ ಅರೆಯುತ್ತಾರೆ.

೪. **ಕಣೆವು:** ನೋ 'ಕಣೆ'.

೫. **ಕತ್ತರಿ:** ಗಾಣದ ಭಾರವನ್ನು ಹೊರುವ ಚೌಕಾಕಾರದ ಕಟ್ಟಿಗೆಯ ಕೊರಡು. ಇದು ೫ ಫೂಟ್ ಉದ್ದವಿರುತ್ತದೆ. ೧ ಮಳಾ ಅಗಲವಿರುತ್ತದೆ. ಎತ್ತು ಮತ್ತು ಕಟ್ಟಿಗೆ ಇದನ್ನು ಸೇರಿಸಿರುತ್ತಾರೆ. ಕತ್ತರಿ ಕಟ್ಟಿಗೆ\ದಿಂಡು.

೬. **ಕತ್ತರಿ ಕಟ್ಟಿಗೆ\ದಿಂಡು:** ನೋ ಕತ್ತರಿ,

೭. **ಕರಿ:** ನೂಲಿನಿಂದ ಮಾಡಿರುವ ಸಾಧನ. ಗಾಣದ ಕ್ರಿಯೆ ಮುಗಿದ ನಂತರ ಎಣ್ಣೆ ಒರಳಿನಲ್ಲಿ ಶೇಖರವಾದಾಗ ಕರಿಯ ಸಹಾಯದಿಂದ ತೆಗೆಯುತ್ತಾರೆ.

೮. **ಕಲ್ ಅಂಗಡಿ ಕಲ್:** ಗಾಣದ ಕಲ್ಲು ಗಾಣದ ಕೆಳಭಾಗದ ತಾಳದ ಸುತ್ತಲೂ ಎಳೆಯುವ ಕಲ್ಲು.

೯. **ಬಡಿಕಲ್ಲು:** ಎಣ್ಣೆಕಾಳುಗಳನ್ನು ಬೇಳೆಯಾಗುವಂತೆ ಮಾಡಲು ಬಳಕೆಯಾಗುವ ಕಲ್ಲು. ಇದು ಬೀಸುವ ಕಲ್ಲಿನ ಆಕಾರದಂತಿದ್ದು ಗಾತ್ರದಲ್ಲಿ ಅದಕ್ಕಿಂತ ದೊಡ್ಡದಿರುತ್ತದೆ.

೧೦. **ಕುಸುಬಿ ಕಲ್ಲು:** ಕುಸುಬಿ ಒಡೆಯುವ ಕಲ್ಲು.

೧೧. **ಜಂಗಲ್ಲ/ದಿಂಡಕಲ್:** ಎಣ್ಣೆ ಕಾಳುಗಳು ನುರಿಯುವಂತೆ ಕತ್ತರಿ ಕಟ್ಟಿಗೆಯ ಮೇಲೆ ಭಾರ ಬೀಳು ಅಥವಾ ೧. ೫ ಕ್ವಿಂಟಲ್ ಭಾರವಾದ ಕಲ್ಲು. ಜಗ್ಗುವ ಕಲ್ಲು,

೧೨. **ಕಂಕೀಲ:** ನೊಗಕ್ಕೆ ಅಂಟಿಕೊಂಡಿರುವ ಕಟ್ಟಿಗೆಯ ತುಂಡುಗಳು (ಬೆಣೆ) ಗಾಣ ನಡೆಸಲು ಎತ್ತುಗಳ ಹೆಗಲಿಗೆ ಕೀಲನ್ನು ಹಾಕಿರುತ್ತಾರೆ.

೧೩. **ಕಾಳು:** ಧಾನ್ಯ,

೧೪. **ಒಣಗಾಳ:** ಎಣ್ಣೆ ಕಾಳುಗಳನ್ನು ಒಡೆಯುವ ಮೊದಲು ಒಣಗಿದ ಹದ ಮಾಡುವ ಕಾಳು

೧೫. **ನುಚಗಳು:** ಎಣ್ಣೆ ಕಾಳುಗಳನ್ನು ಒಡೆಯುವಾಗ ಬೇಳೆಯನ್ನಾಗಿ ಪರಿವರ್ತಿಸಿದ ಕಾಳು.

೧೬. **ಹಿಟಗಾಳ:** ಎಣ್ಣೆ ತೆಗೆಯಲು ಸಿದ್ಧವಾಗಿರುವ ಬೇಳೆ, ಇದಕ್ಕೆ ನೀರು ಹಚ್ಚಿ ಗಾಣದ ಕಲ್ಲಿನಲ್ಲಿ ಹಾಕುತ್ತಾರೆ.

೧೭. **ಕುರ್ಪಿ:** ಕೆತ್ತುವ ಸಾಧನ, ಹಿಂಡಿಯ ಅಕ್ಕಾ ಪಕ್ಕದ ಭಾಗಗಳನ್ನು ಕೆತ್ತಿ ಸಮ ಮಾಡಲು ಬಳಕೆಯಾಗುವ ಸಾಧನ ಕುರುಪಿ ಅಥವಾ ಕುರ್ಪಿ.

೧೮. **ಕೊಂಕಿ:** ನೋ ‘ಡೊಂಕಿ’

೧೯. **ಕೊಂಡಿಮರ:** ನೋ ‘ಡೊಂಕಿ’

೨೦. **ಗತ್ತಿ:** ನೋ ‘ಬಳ್ಳಾ’

೨೧. **‘ಗಾಣಬರಿ’:** ಗಾಣದ ಕ್ರಿಯೆ ನಡೆಯುವ ಆವರಣ\ಮೈದಾನ

೨೨. **ಗೊಬ್ಬಿ:** ನೋ ‘ಚಂಡಿಕಿ’

೨೩. **ಚಂಡಿಕಿ:** ಕಣೆಯ ಮೇಲ್ಭಾಗ ಬುಗುರಿಯಂತಿರುತ್ತದೆ. ಗಾಣದ ಕಲ್ಲಿನಲ್ಲಿ ಎಣ್ಣೆ ಶೇಖರಣೆಯಾದಾಗ ಕಣೆಯನ್ನು ಎತ್ತಲು ಇದನ್ನು ಉಪಯೋಗಿಸುತ್ತಾರೆ. ಚಂಡಕಿ ಮೇಲೆ ಹಗ್ಗ ಹಾಕಿ ಕಣೆ ಎತ್ತುತ್ತಾರೆ. ಗೊಬ್ಬಿ.

೨೪. **ಚಟ್ಟ:** ಎಣ್ಣೆ ಕಾಳುಗಳ ಬೀಜ ತೆಗೆದು ಒಣಗಿಸಿಟ್ಟ ಹೆಂಚು ೧ ವಿಧದ ಸಿಪ್ಪೆ, ಇದನ್ನು ಉರುವಲಿನಂತೆ ಬಳಸುತ್ತಾರೆ. ಕುಸುಬಿ ಚಟ್.

೨೫. **ಜಲ್ಲಿ:** ಬಿದಿರು ಸಿಂಧಿ ಮುಂತಾದವುಗಳಿಂದ ಮಾಡಿದ ದೊಡ್ಡ ಚುಟ್ಟಿ ಚಿತ್ರ. ಎಣ್ಣೆ ಕಾಳುಗಳನ್ನು ಹಾಗೂ ಚಟ್‌ವನ್ನು ಹಾಕಿಡಲು ಇದು ಬಳಕೆಯಾಗುತ್ತದೆ. ಇದಕ್ಕೆ ಎತ್ತುಗಳ ಸೆಗಣಿ ಹಚ್ಚಿ ಸಾರಿಸುತ್ತಾರೆ.

೨೬. **ಕುಸುಬಿ ಜಲ್ಲಿ:** ಕುಸುಬಿ ಹಾಕಿಡುವ ಜಲ್ಲಿ (೫೦ ಶೇರ್).

೨೭. **ಹಿಟಕಾಳು ಜಲ್ಲಿ:** ಹಿಟಕಾಳನ್ನು ಹಾಕಿಡುವ ಜಲ್ಲಿ.

**೨೮. ಡೊಂಕಿ:** ಕಣಿ ಮತ್ತು ಕತ್ತರಿ ಕಟ್ಟಿಗೆಯನ್ನು ಹಗ್ಗದ ಸಹಾಯದಿಂದ ಜೋಡಿಸುವ ವಕ್ರವಾಗಿರುವ ಮರದ ದುಂಡು (ಡೊಂಕು (ಡೊಂಕೆ)>ಡೊಂಕಿ) ಕೊಂಡಿಮರ.

**೨೯. ಚಟ್:** ಗಾಣದ ಎತ್ತಿನ ಮುಖಕ್ಕೆ ಹಾಕುವ ಗೋಣಿ ಚೀಲ, ಗಾಣದ ಕ್ರಿಯೆ ನಡೆಯುವಾಗ ಎತ್ತಿನ ಕಣ್ಣುಗಳು ತಿರುಗಬಾರದೆಂದು ಇದನ್ನು ಉಪಯೋಗಿಸುವರು.

**೩೦. ದುಪಟ್ಟಿ:** ಕುಸುಬಿ ಬೇಳೆ ಹಸನು ಮಾಡಲಿಕ್ಕೆ ಬಳಸುವ ಬಟ್ಟೆಯಿಂದ ಸಿದ್ಧ ಪಡಿಸಿದ ಸಾಧನ, ಹಿಟ್‌ಕಾಳಿಗೆ ನೀರು ಸಿಂಪಡಿಸಿ ದುಪ್ಪಟ್ಟಿಯಿಂದ ತಿಕ್ಕುತ್ತಾರೆ.

**೩೧. ನಗ:** ಬೇಸಾಯ ಮಾಡುವಾಗ ಎತ್ತು ಕೋಣ ಮೊದಲಾದವುಗಳ ಹೆಗಲ ಮೇಲೆ ಹೇರುವ ಮರದ ದಿಂಡು ನೊಗ ನಗಾ.

**೩೨. ಗಾಣದ ನಗಾ:** ಗಾಣದ ಎತ್ತಿಗೆ ಕಟ್ಟಿದ ನೊಗ

**ಬೆಣೆ ೧:** ಆಳದ ಹಗ್ಗವನ್ನು ಬಿಗಿಗೊಳಿಸಲು ಬಳಕೆಯಾಗುವ ಕಟ್ಟಿಗೆಯ ಸಾಧನ ೧. ೫ ಫೂಟ್ ಉದ್ದ ಇರುತ್ತದೆ.

**ಬೆಣೆ ೨:** ಗಾಣದ ಕಲ್ಲಿನ ಸುತ್ತಲು ಬಳಕೆಯಾಗುವ ಡೊಂಕಾಕಾರದ ಕಟ್ಟಿಗೆಯ ಸಾಧನ. ಕತ್ತರಿ ಕಟ್ಟಿಗೆ ಹಾಗೂ ಗಾಣದ ಕಲ್ಲನ್ನು ಸೇರಿಸಲು ಇದು ಬಳಕೆಯಾಗುತ್ತದೆ.

**ಬೆಣೆ** ೩. ಎಣ್ಣೆ (ಬರುವಾಗ) ಕಣಿ ಕೀಳಲು ಬಳೆಯಾಗುವ ಕಟ್ಟಿಗೆಯ ಸಾಧನ. ಈ ಬೆಣೆಗೆ ಹಗ್ಗಹಾಕಿ ಕಣಿ ಕೀಳುತ್ತಾರೆ. ಇದು ಎರಡು ಗೇಣ ಉದ್ದವಾಗಿದ್ದು ತುಂಬಾ ಬಿರುಸಾಗಿರುತ್ತದೆ.

**ಮರಾ:** ಎಣ್ಣೆ ಕಾಳುಗಳನ್ನು ಕೇರಲು ಹಸನು ಮಾಡಲು ಬಳಕೆಯಾಗುವ ಬಿದಿರಿನ ಸಾಧನ, ಗಾಣಿಗರ ಮೊರಗಳು ಸಾಮಾನ್ಯ ಮರಗಳಿಗಿಂತ ದೊಡ್ಡದಾಗಿರುತ್ತದೆ.

**ಮಾಲಗಂಬ:** ಕತ್ತರಿ ಕಟ್ಟಿಗೆಯನ್ನು ಆಳದ ಹಗ್ಗಕ್ಕೆ ಸೇರಿಸುವ ಕಟ್ಟಿಗೆಯ ತುಂಡು.

**ಮಾಲಿ:** 'ಆಳದ ಹಗ್ಗ'

**ಮಿಣೆ:** ಹೊಸದಪ್ಪ ಹಗ್ಗ

**ಜದಿ ಮಿಣೆ:** ಗಾಣದ ಕಲ್ಲಿನ ಸುತ್ತಲು ತಿರುಗುವ ದಪ್ಪ ಹಗ್ಗ.ಇದು ಕತ್ತರಿ ಕಟ್ಟಿನ ಸಮತೋಲನವನ್ನು ಕಾಪಾಡುತ್ತದೆ.

**ಸರಡಬ್ಬಿ:** ಗಾಣದ ಸುತ್ತಲೂ ಎತ್ತು ತಿರುಗುವಾಗ ಅದರ ಬಾಯಿಯ ಜೊಲ್ಲು ಗಾಣಬರಿಯಲ್ಲಿ ಬೀಳದಂತೆ ಎತ್ತುಗಳಿಗೆ ಹಾಕುವ ಡಬ್ಬಿ

**ಸರಪಳಿ:** ಕೊಂಡಿಗಳಿಂದ ಕೂಡಿದ ಲೊಹದ ಹಗ್ಗ, ನೊಗ ಹಾಗೂ ಕತ್ತರಿ ಕಟ್ಟಿಗೆಗೆ ಇದನ್ನು ಸೇರಿಸಿರುತ್ತಾರೆ.

**ಸಾಣ್ಗೆ ೧:** ಧಾನ್ಯಗಳನ್ನು ಹಸನು ಮಾಡಿಸುವುದಕ್ಕೆ ಬಳಸುವ ರಂದ್ರಗಳುಳ್ಳ ಸಾಧನ ಈ ಸಾಣಗೆ ಮಾಮೂಲು ಸಾಣಗೆಗಿಂತ ದೊಡ್ಡದಿರುತ್ತದೆ. ರಂಧ್ರಗಳು ದೊಡ್ಡದಿರುವುದರಿಂದ ದೊಡ್ಡಹಲ್ಲಿನ ಸಾಣಿಗೆ ಎಂದು ಕರೆಯುತ್ತಾರೆ.

**ಸಾಣ್ಗೆ ೨:** ಎಣ್ಣೆ ಕಾಳುಗಳ ಬೇಳೆಗಳನ್ನು ಹಸನು ಮಾಡಲು ಬಳಕೆಯಾಗುವ ಸಾಧನ.

**ಹಗ್ಗ:** ನೂಲನ್ನು ಹೊಸೆದು ತಯಾರಿಸಿದ ಹುರಿ.

**ಆಳಗ್ಗ:** ಡೊಂಕಿ ಕತ್ತರಿ ಕಟ್ಟಿಗೆ ಚಂಡಕಿಯನ್ನು ಸೇರಿಸುವ ದಪ್ಪನೆಯ ಹಗ್ಗ.

**ಚಿಪ್ಪು:** ಆಳಗ್ಗದ ಮುಂಭಾಗದ ಮಾಲಿ.

**ಬರಸಗ್ಗಾ:** ಎತ್ತು ಹಾಗೂ ಕತ್ತರಿ ಕಟ್ಟಿಗೆಯನ್ನು ಸೇರಿಸುವ ಹಗ್ಗ ಇದಕ್ಕೆ ಎಣ್ಣೆಯನ್ನು ಹಚ್ಚಿಸುತ್ತಾರೆ.

**ಹಾರಿ:** ಒಂದು ಬಗೆಯ ಕಬ್ಬಿಣದ ಉಪಕರಣ, ಇದು ೪ ಫೂಟ್ ಉದ್ದವಾಗಿದ್ದು, ತುದಿ ಚೂಪಾಗಿರುತ್ತಾರೆ, ಗಾಣದ ಕ್ರಿಯೆ ಮುಗಿದ ನಂತರ ಒರಳಿನಲ್ಲಿರುವ ಹಿಂಡಿಯನ್ನು ತೆಗೆಯಲು ಇದನ್ನು ಉಪಯೋಗಿಸುತ್ತಾರೆ.

**ಹಿಂಡಿ:** ಎಣ್ಣೆ ಕಾಳುಗಳಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಗಂಟದ ವಸ್ತು.

**ಕುಸುಬಿ ಹಿಂಡಿ:** ಕುಸುಬಿ ಗಾಣದ ಹಿಂಡಿ ಇದು ತುಂಬಾ ಬಿರುಸಾಗಿರುತ್ತದೆ.

**ಶೇಂಗಾ ಹಿಂಡಿ:** ಶೇಂಗಾ ಗಾಣದ ಹಿಂಡಿ ಇದು ತುಂಬಾ ಮೃದುವಾಗಿರುತ್ತದೆ. ದನಗಳಿಗೆ ಕಾಯಿಲೆಯಾದಾಗ ಈ ಹಿಂಡಿಗಳನ್ನು ಔಷಧದಂತೆ ಉಪಯೋಗಿಸುತ್ತಾರೆ.

**ಹಿಡಿಕೆಳ:** ಡೊಂಕಿಯನ್ನು ಹಿಡಿಯಲು, ಇಳಿಸಲು ಬಳಸುವ ಕಟ್ಟಿಗೆಯ ಸಾಧನ.

**ಹುಗಲ್:** ಕತ್ತರಿ ಕಟ್ಟಿಗೆಯ ತೂತು, ಇದರಲ್ಲಿ ಆಳಗ್ಗವನ.

**ಸಜ್ಜನ ಗಾಣಿಗರಲ್ಲಿ ಆರ್ಥಿಕವಾಗಿ ಹಿಂದುಳಿದಿರಲು ಕಾರಣಗಳು**

* ಬಡತನ
* ಕೃಷಿಯ ಹಿಂದುಳಿದಿರುವಿಕೆ
* ಮಿತಿ ಮೀರಿದ ಜನಸಂಖ್ಯೆ
* ಬಂಡವಾಳದ ಕೊರತೆ
* ಕೃಷಿಯ ಮೇಲೆ ವಿಪರೀತ ಅವಲಂಬನೆ
* ತಂತ್ರಜ್ಞಾನದ ಕೊರತೆ
* ಸಂಪನ್ಮೂಲಗಳ ಅರೆಬಳಕೆ
* ಹಣಕಾಸಿನ ಸೌಲಭ್ಯಗಳ ಕೊರತೆ

* ಉಳಿತಾಯ ಮನೋಭಾವನೆಯ ಅಭಾವ
* ಉದ್ಯಮ ಚುತುರತೆಯ ತೀವ್ರ ಕೊರತೆ
* ಶ್ರಮ ದಕ್ಷತೆಯ ಅಭಾವ
* ಧಾರ್ಮಿಕ ಸಂಗತಿಗಳು
* ಪೂರ್ವಾರ್ಜಿತ ಸಾಲ
* ಚಿಕ್ಕ ಗಾತ್ರದ ಹಿಡುವಳಿಗಳು
* ನೀರಾವರಿಯ ಕೊರತೆ ಮತು ಮಾನ್ಸೂನ್ ಮಾರುತಗಳನ್ನೇ ನೆಚ್ಚಿಕೊಂಡಿದ್ದಾರೆ
* ಮಿತಿಮೀರಿದ ಬಡ್ಡಿದರ
* ಗ್ರಾಮೀಣರು ಮಾಡುವ ದುಂದುವೆಚ್ಚ
* ಸಾಲದ ವ್ಯವಹಾರವನ್ನು ನಿಯಂತ್ರಿಸುವ ಕಾನೂನುಗಳಲ್ಲಿನ ಲೋಪದೋಷಗಳು
* ಪ್ರತಿಭಾ ಪಲಾಯನ
* ಅವಿಭಕ್ತ ಕುಟುಂಬಗಳ ಅಸ್ತಿತ್ವ
* ಕ್ಷುಲ್ಲಕ ಕಾರಣಗಳಿಗೆ ನ್ಯಾಯಾಲಯಕ್ಕೆ ಹೋಗುವುದು.
* ಕೃಷಿ ಉತ್ಪನ್ನಗಳನ್ನು ಮಾರಲು ಸಾಂಸ್ಥಿಕ ವ್ಯವಸ್ಥೆ ಇಲ್ಲದಿರುವುದು
* ಪ್ರಗತಿಯನ್ನು ಸಹಿಸಿಕೊಳ್ಳಲಾಗದೆ ಇರುವ ಸಮುದಾಯದ ಜನ ಇದರಲ್ಲಿದ್ದಾರೆ
* ಸಹಕಾರ ಪ್ರವೃತ್ತಿಯ ಕೊರತೆ
* ಸಂಘಟನೆಯ ಕೊರತೆ

ಈ ಮೇಲಿನ ಎಲ್ಲಾ ಕಾರಣಗಳು ಸಜ್ಜನ ಗಾಣಿಗರು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿವೆ.

**೧. ಮಿತಿಮೀರಿದ ಜನಸಂಖ್ಯೆ:** ಭಾರತದ ಜನಸಂಖ್ಯೆಯಲ್ಲಿ ೨ನೇ ಸ್ಥಾನ ಪಡೆದಿದೆ. ಎಲ್ಲಾ ಸಮುದಾಯಗಳಲ್ಲಿ ಜನಸಂಖ್ಯೆ ಹೆಚ್ಚುವಂತೆ ಚಿತ್ರದುರ್ಗದ ಸಜ್ಜನ ಗಾಣಿಗರಲ್ಲಿಯೂ ಹೆಚ್ಚಾಗಿದೆ. ಜನಸಂಖ್ಯೆ ಹೆಚ್ಚಳವು ಆರ್ಥಿಕಾಭಿವೃದ್ಧಿಗೆ ಅಡ್ಡಿಯನ್ನೊಡ್ಡುತ್ತಿರುವ ಒಂದು ಪ್ರಮುಖ ಸಂಗತಿಯಾಗಿದೆ. ರಭಸಗತಿಯಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯು ನಿರುದ್ಯೋಗ, ಬಡತನ, ಆಹಾರದ ಕೊರತೆ, ಸಾಮಾಜಿಕ ವೆಚ್ಚದ ವಿಪರೀತ ಏರಿಕೆ. ಅವ್ಯವಸ್ಥಿತ ನಗರೀಕರಣ ಮುಂತಾದ ಸಮಸ್ಯೆಯನ್ನು ಸೃಷ್ಠಿಸಿದೆ. ಇದು ಈ ಸಮುದಾಯಕ್ಕೆ ಅನ್ವಯವಾಗುತ್ತದೆ.

**೨. ಕೃಷಿಯ ಹಿಂದುಳಿದಿರುವಿಕೆ:** ದೇಶಗಳ ಕೃಷಿಯು ಇನ್ನೂ ವ್ಯಾಪಕವಾಗಿ ಪುರಾತನ ಮಾದರಿಯಲ್ಲಿ ಆಚರಣೆಗೊಳ್ಳುತ್ತಿದೆ ಯಾಂತ್ರಿಕವಾಗಿದೆ. ಈ ಸಮುದಾಯವೂ ಇದಕ್ಕೆ ಹೊರತಾಗಿಲ್ಲ. ಮರದ ನೇಗಿಲಗಳಿಂದ

ಉಳುವಿಕೆ. ಕೀಟ ನಾಶಕಗಳನ್ನು ಹೆಚ್ಚಾಗಿ ಬಳಸದಿರುವುದು. ಯಾಂತ್ರೀಕರಣದ ಕೊರತೆ, ಕೃತಕ ನೀರಾವರಿ ಸೌಲಭ್ಯಗಳ ಅಭಾವ. ಮಳೆಯನ್ನೇ ಅವಲಂಬಿಸಿದ ಜಮೀನುಗಳ ಹೆಚ್ಚಳ. ಇವುಗಳು ಭಾರತದ ಕೃಷಿ ಹಿಂದೆ ಬೀಳಲು ಕಾರಣವಾಗಿದೆ.ಅದೇ ರೀತಿ ಈ ಸಮುದಾಯದಲ್ಲೂ ಕಾರಣಗಳಾಗಿ ಕಂಡುಬರುತ್ತಿವೆ. ಸಜ್ಜನ ಗಾಣಿಗರದು ಮೂಲ ವೃತ್ತಿ ಎಣ್ಣೆ ತೆಗೆದು ಮಾರುವುದು ಆಗಿದ್ದರೂ ಇಂದು ಸಂದರ್ಶನಮಾಡಿ ಮಾಹಿತಿ ಪಡೆದಾಗ ೧೦೦ಕ್ಕೆ ೧೦೦ ಭಾಗ ವೃತ್ತಿಯಲ್ಲಿ ಪರಿವರ್ತಿತರಾಗಿದ್ದು ಸುಮಾರು ೮೦% ಜನ ವ್ಯವಸಾಯ ಅವಲಂಬಸಿಕೊಂಡಿದ್ದಾರೆ. ಈ ಸಮುದಾಯದಲ್ಲಿ ಕೃಷಿ ಹಿಂದುಳಿದಿರುವಿಕೆಯ ಕಾರಣದಿಂದ ಕೃಷಿಕರು ಆರ್ಥಿಕವಾಗಿ ಉನ್ನತ ಸ್ಥಾನವನ್ನು ಪಡೆಯಲು ಸಾಧ್ಯವಾಗಿಲ್ಲ.

೩. **ಬಂಡವಾಳದ ಕೊರತೆ:** ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಹೋಲಿಸಿದಾಗ ಹಿಂದುಳಿದ ದೇಶಗಳಲ್ಲಿ ಬಂಡವಾಳ ಸಂಚಯನವು ತೀರಾ ಕಡಿಮೆ ಪ್ರಮಾಣದಲ್ಲಿದೆ. ಈ ಸಮುದಾಯದಲ್ಲಿಯೂ ಆದಾಯದ ಕೊರತೆ, ಬಡತನ ಕಾರಣಗಳಿಂದಾಗಿ ಉಳಿತಾಯಗಳ ದರವು ಕೆಳಮಟ್ಟದಲ್ಲಿದೆ. ಅತ್ಯಲ್ಪ ಉಳಿತಾಯಗಳ ಕಾರಣದಿಂದ ಬಂಡವಾಳ ಸಂಚಯನ ಮತ್ತು ಹೂಡಿಕೆ ಕಡಿಮೆ ಪ್ರಮಾಣದಲ್ಲಿದೆ. ಬಂಡವಾಳದ ಕೊರತೆಯ ಕಾರಣದಿಂದ ಕೈಗಾರಿಕೆಗಳ ಸ್ಥಾಪನೆ. ಉದ್ಯೋಗಾವಕಾಶಗಳ ವಿಸ್ತರಣೆ ನೀರಾವರಿ ಸೌಲಭ್ಯಗಳನ್ನು ಕಲ್ಪಿಸುವಿಕೆ ಮುಂತಾದವುಗಳು ಮಂದಗತಿಯಲ್ಲಿ ನೇರವೇರುತ್ತಿವೆ. ಪರಿಣಾಮವಾಗಿ ಈ ಅರ್ಥವ್ಯವಸ್ಥೆಗಳು ಹಿಂದುಳಿದ ಸ್ಥಿತಿಯಿಂದ ಗಮನಾರ್ಹವಾಗಿ ಚೇತರಿಸಿಕೊಂಡಿಲ್ಲ.

೪. **ಕೃಷಿಯ ಮೇಲೆ ವಿಪರೀತ ಅವಲಂಬನೆ:** ಈ ಸಮುದಾಯವು ಕೃಷಿಯ ಉದ್ಯೋಗದಲ್ಲಿ ಸುಮಾರು ೮೦% ಅವಲಂಬನೆ ಹೊಂದಿರುವುದರಿಂದ ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿದೆ. ಕೃಷಿಯಲ್ಲಿ ಉತ್ಪಾದಕತೆಯು ಕಡಿಮೆ ಇದೆ ಮತ್ತು ಒಟ್ಟಾರೆಯಾಗಿ ಅರ್ಥ ವ್ಯವಸ್ಥೆಯು ಪೂರ್ಣಾಭಿವೃದ್ಧಿಯ ಸ್ಥಿತಿಯನ್ನು ತಲುಪಲು ಸಾಧ್ಯವಾಗಿಲ್ಲ.

೫. **ತಂತ್ರಜ್ಞಾನದ ಕೊರತೆ:** ಆರ್ಥಿಕಾಭಿವೃದ್ಧಿ ಸಾಧನೆಗೆ ತಂತ್ರಜ್ಞಾನದ ಬಳಕೆಯು ಅತ್ಯಾವಶ್ಯಕ. ಈ ಸಮುದಾಯದಲ್ಲಿ ಕೃಷಿಯಲ್ಲಿ ತಂತ್ರಜ್ಞಾನದ ಬಳಕೆಯ ಕೊರತೆ ಕಂಡು ಬರುತ್ತಿರುವುದರಿಂದ ಉತ್ಪಾದನೆ ಪ್ರಮಾಣದಲ್ಲಿ ಇಳಿಮುಖವಾಗಿದೆ. ಇದರಿಂದ ಇವರು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿದೆ.

೬. **ಹಣಕಾಸಿನ ಸೌಲಭ್ಯಗಳ ಕೊರತೆ:** ಮುಂದುವರೆದ ದೇಶಗಳಲ್ಲಿ ಕೃಷಿಗೆ ಎಲ್ಲಾ ರೀತಿಯ ಸೌಲಭ್ಯ ಸಿಗುತ್ತದೆ. ಆದರೆ ಹಿಂದುಳಿದಿರುವ ದೇಶಗಳಲ್ಲಿ ಬ್ಯಾಂಕುಗಳು, ಬ್ಯಾಂಕೇತರ ಸಂಸ್ಥೆಗಳು, ಸಹಕಾರ ಸಂಘಗಳು ವ್ಯವಸ್ಥಿತವಾಗಿ ಸಾಕಷ್ಟು ಪ್ರಮಾಣದಲ್ಲಿ ಹಿಂದೆ ಬಿದ್ದಿವೆ. ಇದರಿಂದ ಈ ಸಮುದಾಯವು ಹಣಕಾಸಿನ ಸೌಲಭ್ಯಗಳ ಕೊರತೆಯಿಂದಾಗ ಮುಂದುವರೆಯಲಾಗಿಲ್ಲ.

೭. **ಉಳಿತಾಯದ ಮನೋಭಾವನೆಯ ಅಭಾವ:** ಈ ಸಮುದಾಯದಲ್ಲಿ ಉಳಿತಾಯದ ಮನೋಭಾವನೆಗಳು ಕಡಿಮೆ ಇವೆ. ಇವರಲ್ಲಿ ಆದಾಯ ಕಡಿಮೆ ಖರ್ಚು ಜಾಸ್ತಿ, (ಡಾ. ಎಚ್.ಆರ್. ಕೃಷ್ಣಯ್ಯಗೌಡ, ೨೦೦೭, ಪು.೪೬).

೮. **ಬಡತನ:** ಈ ಸಮುದಾಯದಲ್ಲಿ ಬಡತನವು ಹೆಚ್ಚಿದೆ. ಜಮೀನಿಲ್ಲದೆ ಕೂಲಿ ಮಾಡಿ ತಿನ್ನುವ ಜನಕ ಪ್ರಮಾಣ ಹೆಚ್ಚಿದೆ. ಇದೂ ಕೂಡ ಇವರಲ್ಲಿ ಹಿಂದುವಳಿಯಲು ಕಾರಣವಾಗಿದೆ. ಬಡತನವು ಗ್ರಾಮೀಣ ಋಣಗ್ರಸ್ಥತೆಯ ತಾಯಿ. ಬಡತನ ಇರುವಲ್ಲಿ ಸಾಲ ಇರುವಂತದ್ದೇ, ಈ ಸಮುದಾಯ ನಾನಾ ಕಾರಣದಿಂದ ಸಾಲಮಾಡುತ್ತದೆ. ಬೀಜ, ರಸಗೊಬ್ಬರ, ಕೀಟನಾಶಕಗಳನ್ನು ಖರೀದಿಸಲು, ಯಂತ್ರೋಪಕರಣಗಳಾದ ಟ್ರ್ಯಾಕ್ಟರ್, ವ್ಯವಸಾಯದ ಉಪಕರಣಗಳನ್ನು ಕೊಳ್ಳಲು, ಹೊಸದಾಗಿ ಭೂಮಿ ಖರೀದಿಸಲು, ಕ್ರಿಯಾವಿಧಿ ಸಮಾರಂಭ ನೆರವೇರಿಸಲು ಸಾಲ ಎತ್ತಲಾಗುತ್ತದೆ. ರೈತ ಗ್ರಾಮವಾಸಿ ಸಾಲವನ್ನೇನೂ ಪಡೆಯುತ್ತಾನೆ. ಆದರೆ ಬಡತನ ಕಾರಣದಿಂದ ಅವನಿಗೆ ಅಸಲು ಬಡ್ಡಿಯನ್ನು ತುಂಬಲಾಗುವುದಿಲ್ಲ. ಹೀಗೆ ಬಡತನ ಕಾರಣದಿಂದಾಗಿ ವ್ಯಕ್ತಿ ಸಾಲ ಪಡೆದುಕೊಳ್ಳುತ್ತಾನೆ. ಬಡತನದ ಕಾರಣದಿಂದಲೇ ಅವನಿಗೆ ಸಾಲ ತೀರಿಸಲಾಗುವುದಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಲೇವಾದೇವಿಗಾರರು ಅತ್ಯದಿಕ ಬಡ್ಡಿಯನ್ನು ಸಂಗ್ರಹಿಸುವುದರಿಂದಲೂ ಈ ಸಮುದಾಯಕ್ಕೆ ಸಾಲ ತೀರಿಸಲಾಗುತ್ತಿಲ್ಲ. ಆದ್ದರಿಂದ ಬಡತನ ಸಾಲಕ್ಕೆ ಕಾರಣವೂ ಆಗಿದೆ. ಸಾಲದಿಂದಾಗುವ ಪರಿಣಾಮವೂ ಆಗಿದೆ.

೯. **ಶ್ರಮ ದಕ್ಷತೆಯ ಅಭಾವ:** ಇವರಲ್ಲಿ ನಿಪುಣರಾದ ಮತ್ತು ದಕ್ಷ ಕಾರ್ಮಿಕರ ಅಭಾವವಿದೆ. ಸೂಕ್ತ ತರಬೇತಿಗಳ ಕೊರತೆ ಕೆಲಸ ಮಾಡಲು ಉತ್ತಮ ಪರಿಸರದ ಅಭಾವ ಮುಂತಾದ ಅಂಶಗಳು ಶ್ರಮದ ದಕ್ಷತೆಯನ್ನು ತಗ್ಗಿಸಿವೆ.

೧೦. **ಪೂರ್ವಾರ್ಜಿತ ಸಾಲ:** ಡೆಕ್ಕನ್ ರೈತರ ಆಯೋಗ ೧೮೭೫ರಲ್ಲಿಯೇ ಋಣಗ್ರಸ್ತತೆಗೆ ಈ ಕಾರಣವನ್ನು ಗುರುತಿಸಿದೆ. ಈ ಸಮುದಾಯದಲ್ಲಿ ಸಾಲ ಪೂರ್ವಾರ್ಜಿತವಾಗಿ ಅಂದರೆ ಹಿಂದಿನಿಂದ ಬಂದಿರುತ್ತದೆಯೆಂದು ಅದು ಅಭಿಪ್ರಾಯ ಪಟ್ಟಿದೆ. ೧೯೨೮ ರಲ್ಲಿ ರಾಯಲ್ ಕಮೀಶನ್ ಆನ್ ಅಗ್ರಿಕಲ್ಚರ್, ''ಭಾರತೀಯ ರೈತ ಸಾಲದಲ್ಲಿ ಹುಟ್ಟುತ್ತಾನೆ, ಸಾಲದಲ್ಲಿಯೇ ಬದುಕುತ್ತಾನೆ. ಅಥವಾ ಸಾಲವನ್ನು ಮೃತ್ಯುಪತ್ರದ ಮೂಲಕ ತನ್ನ ಮಕ್ಕಳಿಗೆ ಬಿಟ್ಟು ಹೋಗುತ್ತಾನೆ'' ಎಂದು ಅಭಿಪ್ರಾಯ ಪಟ್ಟಿತು.

ಇವರಲ್ಲಿ ಪೂರ್ವಾರ್ಜಿತ ಸಾಲವನ್ನು ತೀರಿಸುವುದನ್ನು ಪವಿತ್ರವಾದ ಕರ್ತವ್ಯವೆಂಬ ನಂಬಿಕೆ ಬೆಳೆದು ಬಂದಿದೆ. ಪೂರ್ವಾರ್ಜಿತ ಆಸ್ತಿಯನ್ನು ಮಕ್ಕಳು ಪಡೆಯುವಂತೆ ಸಾಲವನ್ನು ಪಡೆದುಕೊಳ್ಳುತ್ತಾರೆ. ಋಣಭಾರಕ್ಕೆ ಈ ಅಂಶವೂ ಕಾರಣೀಭೂತವಾಗಿದೆ.

೧೧. **ಚಿಕ್ಕ ಗಾತ್ರದ ಹಿಡುವಳಿಗಳು:** ಭೂ ಹಿಡುವಳಿಯು ದೊಡ್ಡದಾಗಿದ್ದರೆ ಕೃಷಿ ಉತ್ಪನ್ನವು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಆದರೆ ಗ್ರಾಮೀಣ ಪ್ರದೇಶದ ಸಜ್ಜನ ಗಾಣಿಗರಲ್ಲಿ ಕೃಷಿ ಭೂಮಿಗಳು ಅಸಹಜವೆನ್ನಿಸುವಷ್ಟು ಚಿಕ್ಕಗಾತ್ರವನ್ನು ಹೊಂದಿವೆ. ಜನಸಂಖ್ಯೆ ಏರುಗತಿಯಲ್ಲಿ ಬೆಳೆಯುವುದರಿಂದ ಪೂರ್ವಾರ್ಜಿತ ಆಸ್ತಿ ಮಕ್ಕಳಲ್ಲಿ ಹಂಚಿಕೆಯಾಗಿರುವುದರಿಂದ, ಭೂ ಹಿಡುವಳಿಗಳ ಗಾತ್ರ ಚಿಕ್ಕದಾಗುತ್ತಾ ಹೋಗುತ್ತದೆ. ಇಂಥ ಚಿಕ್ಕ ಗಾತ್ರದ ಭೂ ಹಿಡುವಳಿಗಳಲ್ಲಿ ಕೃಷಿ ಕೈಗೊಳ್ಳುವುದು ಲಾಭದಾಯಕವಾಗಿರುವುದಿಲ್ಲ.

ಕೃಷಿ ಯಾಂತ್ರೀಕರಣಕ್ಕೂ ಇದು ದೊಡ್ಡ ಅಡೆತಡೆಯಾಗಿದೆ. ಎಂ.ಎಲ್. ಡಾರ್ಲಿಂಗ್, ಭೂ ಹಿಡುವಳಿಗಳು ತುಂಡು ತುಂಡಾಗುತ್ತಿರುವುದು ಗ್ರಾಮೀಣ ಋಣಗ್ರಸ್ಥತೆಗೆ ಕಾರಣವೆಂಬ ತೀರ್ಮಾನಕ್ಕೆ ಬಂದಿದ್ದಾರೆ.

**೧೨. ಮಾನ್ಸೂನ್ ಮಾರುತಗಳ ವೈಫಲ್ಯ ಅಥವಾ ಇತರ ನೈಸರ್ಗಿಕ ಅಡ್ಡಿ ಆತಂಕಗಳು:** ಮಳೆ ಯಾವಾಗ ಕೈ ಕೊಡುತ್ತದೆಯೋ ಆಗ ರೈತನ ಉಗ್ರಾಣದಲ್ಲಿ ಸಂಪೂರ್ಣ ದಿವಾಳಿತನ ಬಿಟ್ಟಾಕಿ ಮತ್ತೇನೂ ಉಳಿಯುವುದಿಲ್ಲ. ಸಜ್ಜನ ಗಾಣಿಗರ ಭೂ ಹಿಡುವಳಿಗಳಲ್ಲಿ ಹೆಚ್ಚು ನೀರಾವರಿಗಳಿರದೆ ಮಳೆ ಆಶ್ರಯದ ಜಮೀನುಗಳೇ ಹೆಚ್ಚಿವೆ. ನೀರಾವರಿಗೆ ಒಳಪಡದ ಪ್ರದೇಶದಲ್ಲಿ ''ರೈತರು ಕೃಷಿಗಾಗಿ ಇಂದಿಗೂ ಮಾನ್ಸೂನ್ ಮಾರುತಗಳನ್ನೇ ನೆಚ್ಚಿಕೊಂಡಿದ್ದಾರೆ''. ''ಎಲ್ಲಿ ಹೋಗುವಿರಿ ಮೋಡಗಳೇ ಚೆಲ್ಲಿ ನಾಲ್ಕು ಹನಿಗಳನ್ನು'' ಎಂದು ಮೋಡಗಳಿಗೆ ರೈತ ಬೇಡಿಕೊಳ್ಳುತ್ತಿರುತ್ತಾನೆ. ಕೆಲವೊಮ್ಮೆ ಅತೀವೃಷ್ಠಿ, ಅನಾವೃಷ್ಠಿ, ನೈಸರ್ಗಿಕ ವೈಪರೀತ್ಯಗಳೂ ರೈತಾಪಿ ವರ್ಗವನ್ನು ಅಸಹಾಯಕರನ್ನಾಗಿ ಮಾಡುತ್ತವೆ. ಇಂಥ ಪರಿಸ್ಥಿತಿಯಲ್ಲಿ ಈ ಸಮುದಾಯಕ್ಕೆ ಲೇವಾದೇವಿಗಾರರಿಂದ ಸಾಲವನ್ನು ತೆಗೆದುಕೊಳ್ಳಲು ಪ್ರೇರೇಪಿಸುತ್ತವೆ, ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಎಷ್ಟೇ ಮುಂದುವರೆದಿದ್ದರೂ, ನೈಸರ್ಗಿಕ ಶಕ್ತಿಗಳ ಮುಂದೆ ನಾವು ಇನ್ನೂ ಕುಬ್ಜರು ಮತ್ತು ಅಸಹಾಯಕರು.

**೧೩. ಮಿತಿ ಮೀರಿದ ಬಡ್ಡಿದರ:** ಗ್ರಾಮೀಣ ಸಜ್ಜನ ಗಾಣಿಗರು ಈಗಲೂ ತಮ್ಮ ಹಣಕಾಸಿನ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಸಾಂಸ್ಥಿಕೇತರ ಸಾಲದ ಮೂಲಗಳಾದ ಲೇವಾದೇವಿಗಾರರು ತಮ್ಮ ಸಮುದಾಯದಲ್ಲಿಯೇ ಇರುವ ಸಾಹುಕಾರರು ಮತ್ತು ಭೂ ಮಾಲೀಕರನ್ನು ಅತಿ ಹೆಚ್ಚು ಅವಲಂಬಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಸಹಕಾರಿ ಸಂಘಗಳು ರಾಷ್ಟ್ರೀಕೃತ ಬ್ಯಾಂಕುಗಳು ಅಷ್ಟಾಗಿ ಇಲ್ಲದಿರುವುದೇ ಇದಕ್ಕೆ ಕಾರಣ. ಇದಲ್ಲದೇ ಬ್ಯಾಂಕುಗಳು ಅನುತ್ಪಾದಕ ವೆಚ್ಚಗಳನ್ನು ಮಾಡಲು ಸಾಲವನ್ನು ನೀಡುವುದಿಲ್ಲ. ಬ್ಯಾಂಕುಗಳ ಕಾರ್ಯವೈಖರಿ ಜಟಿಲವಾಗಿರುವುದರಿಂದ, ಸಾಲ ನೀಡುವಲ್ಲಿ ಕೆಲವೊಮ್ಮೆ ವಿಳಂಬವಾಗುವುದರಿಂದ ಗ್ರಾಮೀಣ ಸಜ್ಜನ ಗಾಣಿಗರು ಸಾಲಕ್ಕಾಗಿ ಲೇವಾದೇವಿಗಾರರನ್ನು ಅವಲಂಬಿಸಿದ್ದಾರೆ. ಬಡ್ಡಿದರ ಸಾಕಷ್ಟು ಹೆಚ್ಚಿದ್ದರೂ ಸಾಲ ಪಡೆಯುವುದು ಅತಿ ಸುಲಭ. ತಿಂಗಳಿಗೆ ೧೦೦ ರೂಪಾಯಿಗೆ ೨ ರಿಂದ ೧೦ ರೂಪಾಯಿಗಳವರೆಗೂ ಬಡ್ಡಿಗೆ ಹಣವನ್ನು ಇವರು ಪಡೆಯುತ್ತಾರೆ. ಈ ರೀತಿಯ ಮಿತಿ ಮೀರಿದ ಬಡ್ಡಿದರ ಗ್ರಾಮೀಣ ಸಜ್ಜನ ಗಾಣಿಗರನ್ನು ಹಿಂದುಳಿದವರನ್ನಾಗಿ ಮಾಡಿವೆ (ಡಾ. ಈರಣ್ಣ ಚ. ಮುಳಗುಂದ, ೨೦೦೭, ಪು.೫೩).

**೧೪. ಗ್ರಾಮೀಣ ಸಜ್ಜನ ಗಾಣಿಗರು ಮಾಡುವ ದುಂದು ವೆಚ್ಚ:** ಡೆಕ್ಕನ್ ರೈತರ ಆಯೋಗ ಮತ್ತು ಎಂ.ಎಲ್. ಡಾರ್ಲಿಂಗ್ ಅವರ ಪ್ರಕಾರ ಗ್ರಾಮವಾಸಿಗಳು ಹಬ್ಬ ಹರಿದಿನ ಮತ್ತು ಚಿನ್ನಾಭರಣಗಳ ಮೇಲೆ ಮಾಡುವ ದುಂದು ವೆಚ್ಚ, ದೇವಾಲಯಗಳ ಸ್ಥಾಪನೆ, ದೇವರ ಜಾತ್ರೆ ಉತ್ಸವಗಳು, ವರೋಪಚಾರಗಳು, ಸಾಂಪ್ರದಾಯಿಕ ವೈವಾಹಿಕ ಕ್ರಮ ಅಂದರೆ ಇವೆಲ್ಲವೂ ಅನುತ್ಪಾದಕ ವೆಚ್ಚಗಳು ಈ ಸಮುದಾಯವನ್ನು ಸಾಲಗಾರರನ್ನಾಗಿ ಮಾಡಿವೆ. ರೈತರು ಸೀಮಿತ ಆದಾಯ ಹೊಂದಿದ್ದಾರೆ. ಮತ್ತೊಂದೆಡೆ ಅವರು ಆದಾಯಕ್ಕಿಂತ

ಹೆಚ್ಚಿನ ಪ್ರಮಾಣದಲ್ಲಿ ದುಂದುವೆಚ್ಚ ಮಾಡುತ್ತಾರೆ. ಆದಾಯ ಮತ್ತು ವೆಚ್ಚಗಳ ನಡುವಿನ ಅಂತರವನ್ನು ತುಂಬಿಕೊಳ್ಳಲು ಸಾಲ ಮಾಡುತ್ತಾರೆ. ಕ್ಷುಲ್ಲಕ ಕಾರಣಗಳಿಗಾಗಿ ನ್ಯಾಯಾಲಯಕ್ಕೆ ಹೋಗುವುದು (litigation) ಗ್ರಾಮೀಣ ಪ್ರದೇಶದಲ್ಲಿ ಸಜ್ಜನ ಗಾಣಿಗರಲ್ಲಿ ಸರ್ವೇ ಸಾಮಾನ್ಯವಾದ ಸಂಗತಿಯಾಗಿದೆ. ಕೋರ್ಟಿನಲ್ಲಿ ಗೆಲ್ಲುವುದರಿಂದ ನಮ್ಮ ಘನತೆ ಗೌರವಗಳು ಹೆಚ್ಚಾಗುತ್ತವೆಯೆಂದು ಇವರು ಭಾವಿಸುತ್ತಾರೆ. ಕೋರ್ಟಿನ ಕೆಲಸಕ್ಕಾಗಿ ಇವರು ಹಣವನ್ನು ನೀರಿನಂತೆ ಚೆಲ್ಲಬೇಕಾಗುತ್ತದೆ. ಮತ್ತೊಂದೆಡೆ ಕೃಷಿ ಕಾರ್ಯಗಳು ನಿರ್ಲಕ್ಷಿಸಲ್ಪಡುತ್ತವೆ. ಇದರಿಂದ ಉತ್ಪನ್ನ ಕಡಿಮೆಯಾಗಿ ಇವರು ಸಾಲಗಾರರಾಗುತ್ತಿದ್ದಾರೆ.

೧೫. **ಅವಿಭಕ್ತ ಕುಟುಂಬಗಳು:** ಅವಿಭಕ್ತ ಕುಟುಂಬಗಳು ಭಾರತೀಯ ಸಮಾಜದ ಆಧಾರ ಸ್ತಂಭ. ಚಿತ್ರದುರ್ಗದ ಸಜ್ಜನ ಗಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಸಂಖ್ಯೆ ಹೆಚ್ಚಿದ್ದು, ಈ ಕುಟುಂಬಗಳು ಇವರನ್ನು ಆರ್ಥಿಕವಾಗಿ ಹಿಂದೆ ಬೀಳುವಂತೆ ಮಾಡಿವೆ. ಎಲ್ಲರಿಗಾಗಿ ಒಬ್ಬ ಒಬ್ಬರಿಗಾಗಿ ಎಲ್ಲರೂ ಎಂಬ ತತ್ವ ಮಾಯವಾಗುತ್ತಿದೆ. ಇಂದು ಕರ್ತನಿಗೆ ಮೊದಲ ಸ್ಥಾನಮಾನಗಳು ದೊರೆಯುತ್ತಿಲ್ಲ. ಈ ಕುಟುಂಬದಲ್ಲಿ ಕೆಲವು ಅನಾನುಕೂಲಗಳಿವೆ;

**(a) ವ್ಯಕ್ತಿತ್ವದ ಬೆಳವಣಿಗೆಗೆ ಮಾರಕ:** ಹಿರಿಯರೇ ಎಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸುವುದರಿಂದ ಕಿರಿಯರಿಗೆ ಅವಕಾಶಗಳಲ್ಲಿ, ಸ್ವಯಂ ನಿರ್ಧಾರಕ ಶಕ್ತಿ, ಛಲ, ಧೈರ್ಯ, ವ್ಯವಹಾರಿಕ ಗುಣ ಬೆಳೆಸಿಕೊಳ್ಳಲು ಸಾಧ್ಯವಿಲ್ಲ. ಇದರಿಂದ ಅವರ ವೈಶಿಷ್ಟ್ಯ ಬೆಳವಣಿಗೆಗೆ ಕುಂದುಂಟಾಗುತ್ತದೆ.

**(b) ವೈಯಕ್ತಿಕ ಉದ್ಯಮಶೀಲತೆಗೆ ಅಡಚಣೆ:** ಕಿರಿಯರೆ ಯಾವುದೇ ಸಾಹಸಕ್ಕೆ ಪ್ರೋತ್ಸಾಹ ನೀಡುವುದರ ಬದಲಾಗಿ ಅವರನ್ನು ನಿರುತ್ಸಾಹಗೊಳಿಸುವ ಪ್ರಯತ್ನ ಇಲ್ಲಿ ಮಾಡುವುದಿದೆ.

**(c) ಸಂಕುಚಿತ ಮನೋಭಾವನೆ:** ಈ ಕುಟುಂಬವು ಸದಸ್ಯರಲ್ಲಿ ವಿಶಾಲ ಭಾವನೆ ಕೊರತೆ ಕಂಡು ಬರುತ್ತಿದ್ದು, ಸಂಕುಚಿತ ಮನೋಭಾವನೆಗಳಿಗೆ ಮಹತ್ವ ಕೊಡಲಾಗುತ್ತಿದೆ.

**(d) ಸೋಮಾರಿತನಕ್ಕೆ ಪ್ರೋತ್ಸಾಹ:** ಈ ಕುಟುಂಬವನ್ನು ನಿರುದ್ಯೋಗ ಮತ್ತು ಸೋಮಾರಿಗಳ ನೆಲೆ ಎಂದು ಕರೆಯುವರು. ತಮ್ಮ ಪೂರ್ಣ ಶಕ್ತಿ ಪ್ರತಿಭೆ ಬಳಸಿಕೊಂಡು ದುಡಿಯಬೇಕಾದ ಅಗತ್ಯತೆ ಇಲ್ಲ. ದುಡಿದವರನ್ನು ದುಡಿಯದೇ ಇರುವವರನ್ನು ಎಲ್ಲರನ್ನು ಸಾಕುವ ಜವಾಬ್ದಾರಿ ಕುಟುಂಬಕ್ಕಿರುವುದರಿಂದ ಇಲ್ಲಿ ದುಡಿದವ ದುಡಿದ, ಆಡಿದವ ಆಡಿದ ಎಂಬಂತಿದ್ದೂ ಸೋಮಾರಿಗಳನ್ನು ಬೆಳೆಸುವ ಜನರನ್ನು ನಿರುದ್ಯೋಗಿಗಳನ್ನಾಗಿ ಮಾಡುವ ಅಥವಾ ಜವಾಬ್ದಾರಿ ಹೀನರನ್ನಾಗಿ ಮಾಡುವ ಕುಟುಂಬವಾಗಿದೆ.

**(e) ಉಳಿತಾಯ ಮತ್ತು ಬಂಡವಾಳದ ಹೂಡಿಕೆಗೆ ಸೂಕ್ತವಾದುದಲ್ಲ:** ಇಲ್ಲಿ ಉಳಿತಾಯ ಮಾಡಬೇಕು ಎಂಬ ಮನೋಭಾವನೆಗಳೇ ಇಲ್ಲ. ಎಲ್ಲರ ಪ್ರಾಥಮಿಕ ಬೇಡಿಕೆ ಕುಟುಂಬವೇ ಈಡೇರಿಸುತ್ತಿರುವುದರಿಂದ ಹಣವನ್ನು ಉಳಿತಾಯ ಮಾಡಿ ವ್ಯವಹಾರ ನಡೆಸಲು ಈ ಕುಟುಂಬ ಸಹಾಯಕವಾಗಿಲ್ಲ ಮತ್ತು ಪ್ರೇರಕವಾಗಿಲ್ಲ.

**(f) ಗಲಾಟೆ ಮತ್ತು ಸಂಘರ್ಷಗಳ ನೆಲೆವೀಡು:** ಇಲ್ಲಿ ಗಲಾಟೆ, ವ್ಯಾಜ್ಯ ಗೋಣಗಾಟ ಇದ್ದೆ ತೀರುವುದು. ಸ್ತ್ರೀಯ ನಡುವೆ, ಹಿರಿಯ ಮತ್ತು ಕಿರಿಯರ ನಡುವೆ, ಅತ್ತೆ, ಸೊಸೆಯರ ಮಧ್ಯೆ, ಆಗಾಗ್ಗೆ ಸಂಘರ್ಷ ಆಗುತ್ತಲೆ ಇದ್ದು ಕುಟುಂಬದ ಶಾಂತಿ ನೆಮ್ಮದಿ ಭಗ್ನವಾಗಲೂಬಹುದು. ಮುರಿದ ಮನಸ್ಸಿನಿಂದ ಮನೆ ಮುರಿಯುವಂತಾಗಬಹುದು.

**(g) ಸಂಕ್ಷಿಪ್ತ ಖಾಸಗಿ ಜೀವನಕ್ಕೆ ಅವಕಾಶ:** ಏಕಾಂತಕ್ಕೆ ಅವಕಾಶವಿಲ್ಲ ಹೊಸದಾಗಿ ವಿವಾಹವಾದ ದಂಪತಿಗಳು ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಬಹಳ ಸಮಯಬೇಕು.

**(h) ಮಕ್ಕಳ ಸಾಮಾಜೀಕರಣಕ್ಕೆ ಅಡಚಣೆ:** ಈ ಕುಟುಂಬದಲ್ಲಿ ಮಕ್ಕಳ ಸರಿಯಾದ ಸಮಾಜೀಕರಣಕ್ಕೆ ಹೆಚ್ಚಿನ ಗಮನವಹಿಸುವುದಿಲ್ಲ. ಹಳೆಯ ತರೆಮಾರಿನ ಅಜ್ಜ ಅಜ್ಜಿ ಸೆಳೆತಕ್ಕೆ ಒಳಗಾಗಿ ಅವರಲ್ಲಿ ಹಳೆಯ ವಿಚಾರಗಳು, ಹವ್ಯಾಸಗಳು, ಪ್ರವೃತ್ತಿಗಳು ಬೆಳೆಯಲು ಸಾಧ್ಯತೆಗಳಿವೆ. ಕಾಲಮಾನಕ್ಕೆ ತಕ್ಕಂತೆ ಬದಲಾವಣೆ ಅರಿಯಲು ಈ ಕುಟುಂಬದಲ್ಲಿ ಕಂಡು ಬರಲು ಸಾಧ್ಯತೆಗಳು ಕಡಿಮೆ.

**(i) ಸ್ತ್ರೀಯರಿಗೆ ಕೆಳಮಟ್ಟದ ಸ್ಥಾನ:** ಪಿತೃಪ್ರಧಾನ ಅವಿಭಕ್ತ ಕುಟುಂಬಗಳಲ್ಲಿ ಸ್ತ್ರೀಯರು ಬಹಳ ಕೀಳು ಸ್ಥಾನದಲ್ಲಿರಬೇಕಾಗುವುದು. ಅವರು ಹಗಲು ರಾತ್ರಿ ದುಡಿಯಬೇಕಾಗುವುದು. ಹಿರಿಯರ ಆಜ್ಞೆಯನ್ನು ಪ್ರತಿಭಟಿಸಿ ನಡೆಯುವುದು ಸಾಧ್ಯವಿಲ್ಲ. ಅವರ ಆಶೆ ಆಕಾಂಕ್ಷೆಗಳ ಪೂರೈಕೆ, ಸ್ತ್ರೀ ವ್ಯಕ್ತಿತ್ವ ಬೆಳಣಿಗೆಗೆ ಇಲ್ಲಿ ಅವಕಾಶಗಳು ಕಡಿಮೆ ಸ್ತ್ರೀ ಶಿಕ್ಷಣ, ಉದ್ಯೋಗ, ಸಾರ್ವಜನಿಕ ಜೀವನದಲ್ಲಿ ಸ್ತ್ರೀಯರ ಸಹಬಾಗಿತ್ವದಂತಹ ಅಂಶಗಳು ಇಲ್ಲಿ ಘೋರ ಅಲಕ್ಷ್ಯವಿದೆ.

**(j) ಕಾನೂನು ವ್ಯಾಜ್ಯಗಳ ಪ್ರೋತ್ಸಾಹ:** ಸಾಮಾನ್ಯ ಆಸ್ತಿ, ಆದಾಯ ಮತ್ತು ಖರ್ಚಿನ ವಿಚಾರದಲ್ಲಿ ಸದಸ್ಯರುಗಳ ನಡುವೆ ವಾದ ವಿವಾದಗಳು ನಡೆದ ಕಾರಣ ಕುಟುಂಬವು ಸಿಡಿದು ಹೋಗುವುದು. ಕೋರ್ಟು ಕಛೇರಿಗೆ ಹಿಂದೆ ಅಲೆದಾಡುವುದು ಇಲ್ಲಿ ಸಾಮಾನ್ಯ. ದಾಯಾದಿ ಕಲಹಗಳು ಮಹಾಭಾರತದ ಕಾಲದಿಂದಲೂ ಗೋಚರಿಸುತ್ತಿದ್ದು ಈ ಲಕ್ಷಣಗಳು ಸಜ್ಜನ ಗಾಣಿಗರಲ್ಲಿಯೂ ಗೋಚರಿಸುತ್ತಿವೆ. ಇವರು ದುಡಿದ ಆದಾಯವೆಲ್ಲವೂ ವಾದ ವ್ಯಾಜ್ಯಗಳ ಹಿನ್ನೆಲೆಯಲ್ಲಿ ಕೋರ್ಟ್‌ಗೆ ಖರ್ಚಾಗುತ್ತಿರುವುದರಿಂದ ಇವರು ಆರ್ಥಿಕವಾಗಿ ಹಿಂದೆ ಬಿದ್ದಿದ್ದಾರೆ.

**(k) ಅನಿಯಂತ್ರಿತ ಜನನ:** ಸಮೀಕ್ಷೆಯಿಂದ ತಿಳಿದು ಬರುವಂತೆ ವಿಭಕ್ತ ಕುಟುಂಬಗಳಿಗಿಂತ ಅವಿಭಕ್ತ ಕುಟುಂಬಗಳಲ್ಲಿ ಜನನ ಪ್ರಮಾಣ ಹೆಚ್ಚಿದೆ. ಸಂಪ್ರದಾಯ, ದೃಷ್ಠಿಕೋನ, ಜನನ ನಿಯಂತ್ರಣ ಅಳವಡಿಸಿಕೊಳ್ಳದೇ ಇರುವುದು ಇದಕ್ಕೆ ಕಾರಣವಾಗಿದೆ. ಇಲ್ಲಿ ಮಕ್ಕಳನ್ನು ಸಾಕುವುದು ಇಡೀ ಕುಟುಂಬದ ಮೇಲಿರುವುದರಿಂದ ಗಂಡ ಹೆಂಡತಿಗೆ ಸಾಕುವ ಜವಾಬ್ದಾರಿ ಇರುವುದಿಲ್ಲ. ಇದರಿಂದಲೂ ಹೆಚ್ಚು ಮಕ್ಕಳನ್ನು ಪಡೆಯುವ ಸಾಧ್ಯತೆ ಇದೆ.

**(l) ಸಾಮಾಜಿಕ ಚಲನೆಗೆ ಅಡ್ಡಿ:** ಈ ಕುಟುಂಬವು ಸಜ್ಜನ ಗಾಣಿಗರಲ್ಲಿ ಸಾಮಾಜಿಕ ಬದಲಾವಣೆ ಅಥವಾ ಚಲನೆಗೆ ಅಡ್ಡಿಯನ್ನುಂಟು ಮಾಡಿದೆ. ಯತಾಸ್ಥಿತಿವಾದಿಗಳು ಪರಿವರ್ತನೆಯನ್ನು ಅಷ್ಟಾಗಿ ಸ್ವಾಗತಿಸುವುದಿಲ್ಲ. ಆದ್ದರಿಂದ ಇಲ್ಲಿ ಸಾಮಾಜಿಕ ಚಲನೆಗೆ ಅವಕಾಶ ಕಡಿಮೆ.

**೧೬. ಪ್ರತಿಭಾ ಫಲಾಯನ:** ಉನ್ನತ ಶಿಕ್ಷಣ, ತರಬೇತಿ, ಅರ್ಹತೆ ಪಡೆದವರು ಇಂದು ಗ್ರಾಮೀಣ ಪ್ರದೇಶದಲ್ಲಿ ವಾಸಿಸಿ ಸಮುದಾಯದ ಅಭಿವೃದ್ಧಿಗೆ ಶ್ರಮಿಸದೆ ನಗರಗಳತ್ತ ವಲಸೆ ಹೋಗಿ ನೆಲೆಸುತ್ತಿದ್ದಾರೆ. ಇದರಿಂದ ಇವರ ಅಭಿವೃದ್ಧಿಯು ಕುಂಟಿತವಾಗುತ್ತಾ ಹೋಗುತ್ತದೆ.

**೧೭. ಗ್ರಾಮೀಣ ಪ್ರದೇಶದಲ್ಲಿ ಕೃಷಿಯಲ್ಲಿ ದುಡಿಯುವ ಕಾರ್ಮಿಕರ ಸಂಖ್ಯೆ ಕಡಿಮೆಯಾಗಿದೆ:** ಇದರಿಂದ ಕೃಷಿಗೆ ಸರಿಯಾದ ಸಮಯಕ್ಕೆ ಗ್ರಾಮೀಣ ಪ್ರದೇಶದಲ್ಲಿ ಕೃಷಿಕಾರ್ಮಿಕರು ಸಿಗದೇ ಹೋದಾಗ ಉತ್ತಮ ಬೆಳೆಯನ್ನು ಸಜ್ಜನ ಗಾಣಿಗರು ಪಡೆಯುವುದು ಕಷ್ಟವಾಗುತ್ತದೆ.

**೧೮. ಈ ಸಮುದಾಯದಲ್ಲಿ ಹೊಟ್ಟೆಕಿಚ್ಚಿನ ಮನೋಭಾವ ಜಾಸ್ತಿ:** ಈ ಸಮುದಾಯದಲ್ಲಿ ಹೊಟ್ಟೆಕಿಚ್ಚಿನ ಮನೋಭಾವ ಹೆಚ್ಚಿದ್ದು ಸಮುದಾಯದ ಇತರರ ಪ್ರಗತಿಯನ್ನು ಸಹಿಸುವ ಜನ ಇವರಲ್ಲ. ಈ ಸಮುದಾಯದಲ್ಲಿ ಒಬ್ಬ ಮತ್ತೊಬ್ಬನನ್ನು ಕಾಲು ಹಿಡಿದು ಎಳೆಯುವ ಪ್ರೌವೃತ್ತಿ ಇದೆ. ಸಮುದಾಯದ ಸದಸ್ಯರ ಪ್ರಗತಿಯನ್ನು ಒಬ್ಬರಿಗೊಬ್ಬರು ಸಹಿಸದೇ ಇರುವ ಕಾರಣವು ಸಮುದಾಯದ ಹಿಂದುಳಿಯುವಿಕೆಗೆ ಕಾರಣವಾಗಿದೆ.

**೧೯. ಸಹಕಾರ ಪ್ರೌವೃತ್ತಿಯ ಕೊರತೆ:** ಈ ಸಮುದಾಯದಲ್ಲಿ ಒಬ್ಬರಿಗೊಬ್ಬರು ಸಹಕಾರದಿಂದ ಹಣ ಕೊಟ್ಟು ಸಮುದಾಯದ ಸದಸ್ಯರಿಗೆ ನೆರವಾಗಬೇಕು, ಆದರೆ ಅದು ಆಗುತ್ತಿಲ್ಲ. ಇದರಿಂದ ಸಮುದಾಯದ ಪ್ರಗತಿಯೂ ಆಗುತ್ತಿಲ್ಲ. ಇದು ಕೂಡ ಆರ್ಥಿಕವಾಗಿ ಇವರು ಹಿಂದೆ ಬೀಳಲು ಕಾರಣವಾಗಿದೆ.

**೨೦. ಸಂಘಟನೆಯ ಕೊರತೆ:** ಚಿತ್ರದುರ್ಗದ ಸಜ್ಜನ ಗಾಣಿಗರಲ್ಲಿ ಗ್ರಾಮೀಣ ಚಿಕ್ಕಪುಟ್ಟ ಸಂಘಟನೆಗಳನ್ನು ಒಟ್ಟಾರೆ ಜಿಲ್ಲಾ ಮಟ್ಟದ ಸಂಘಟನೆ ಇನ್ನೂವರೆಗೆ ಆಗದೇ ಇರುವುದು ಕೂಡ ಒಗ್ಗಟು, ಸಹಕಾರದಲ್ಲಿ ವಿಫಲವಾಗಿದೆ. ಇದು ಕೂಡ ಇವರ ಆರ್ಥಿಕ ಪ್ರಗತಿ ಕುಂಟಿತವಾಗಲು ಕಾರಣವಾಗಿದೆ.

ಈ ಎಲ್ಲಾ ಮೇಲಿನ ಕಾರಣದಿಂದ ಈ ಸಮುದಾಯ ಆರ್ಥಿಕವಾಗಿ ಹಿಂದೆ ಬಿದ್ದಿದೆ. ಈ ಸಮುದಾಯದಲ್ಲಿ ಎಲ್ಲಿಯವರೆಗೂ ಈ ಕಾರಣಗಳಿರುತ್ತವೆಯೋ ಅಲ್ಲಿಯವರೆಗೂ ಈ ಸಮುದಾಯ ಆರ್ಥಿಕವಾಗಿ ಪ್ರಗತಿ ಸಾಧಿಸಲು ಸಾಧ್ಯತೆಗಳಿಲ್ಲ. ಈ ಕಾರಣಗಳ ಹೊರತಾಗಿ ಸಮುದಾಯ ಬೆಳೆದಲ್ಲಿ ಆರ್ಥಿಕ ಪ್ರಗತಿ ಹೊಂದಲು ಸಾಧ್ಯತೆಗಳಿವೆ.

### ವೃತ್ತಿಯಲ್ಲಾದ ಬದಲಾವಣೆಗಳು

ಸಮಾಜದ ಪ್ರಯೊಬ್ಬ ವ್ಯಕ್ತಿಯು ತನ್ನದೇ ಆದಂತಹ ವೃತ್ತಿಯನ್ನು ಹೊಂದಿದ್ದು, ಪ್ರಾಚೀನ ದಿನಮಾನಗಳಲ್ಲಿ ಜಾತಿಯ ಸದಸ್ಯನಿಗೆ ವೃತ್ತಿಯನ್ನು ಒದಗಿಸಿ ಕೊಡುತ್ತಿತ್ತು. ಆದರೆ ಇಂದು ಆಧುನಿಕತೆ ಸಾಂಸ್ಕೃತಾನುಕರಣ, ಪಾಶ್ಚಿಮಾತೀಕರಣ, ನಾಗರೀಕರಣದ ಪ್ರಭಾವ, ಕೈಗಾರಿಕೆಗಳಲ್ಲಿ ಮತ್ತು ಕೃಷಿಯಲ್ಲಿನ ಪರಿವರ್ತನೆಗಳು ಮುಂತಾದ ಅಂಶಗಳು ವ್ಯಕ್ತಿಯ ವೃತ್ತಿ ಬದಲಾವಣೆಗೆ ಚಾಲನೆಯನ್ನು ನೀಡಿವೆ.

ಇಂದು ಸಜ್ಜನ ಗಾಣಿಗರು ತಮ್ಮ ಮೂಲ ವ್ಯತಿಯನ್ನು ಬಿಟ್ಟು, ಕೃಷಿ ಆಧಾರಿತ ವೃತ್ತಿಯನ್ನು ಹೊಂದಿದ್ದಾರೆ, ಇವರಲ್ಲಿ ಸುಮಾರು ೮೦ ರಷ್ಟು ಕೃಷಿ ಅವಲಂಬಿಗಳಿದ್ದಾರೆ. ಇನ್ನುಳಿದಂತೆ ೨೦ ಜನ ಕೃಷೇತರ ವೃತ್ತಿಯಲ್ಲಿರುವುದು ಗೋಚರಿಸುತ್ತದೆ.

ಇಂದು ಯಾರ ಹತ್ತಿರವು ಸಾಂಪ್ರದಾಯಿಕ ಎತ್ತಿನಿಂದ ಎಣ್ಣೆ ತೆಗೆಯುವ ಗಾಣಗಳಿಲ್ಲ. ಚಿತ್ರದುರ್ಗದ ಕ್ಷೇತ್ರ ಕಾರ್ಯಕ್ಕೆ ಹೋದ ಸಂದರ್ಭದಲ್ಲಿ ತಿಳಿದು ಬಂದ ಅಂಶವೆಂದರೆ ಸಜ್ಜನ ಗಾಣಿಗರು ನೂರಕ್ಕೆ ನೂರು ಭಾಗ ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಬೇರೆ ಬೇರೆ ವೃತ್ತಿಗಳನ್ನು ಹೊಂದಿರುವುದು ಗೋಚರಿಸುತ್ತದೆ. ಇವರಲ್ಲಿ ಯಾರಲ್ಲಿಯೂ ಮೂಲ ವೃತ್ತಿಯು ಉಳಿದಿಲ್ಲ, ಇವರಲ್ಲಿ K.A.S. ಅಧಿಕಾರಿ, ಶಿಕ್ಷಕರು, ಕೃಷಿ ಅಧಿಕಾರಿಗಳು, ವೈದ್ಯರು, ಪಶುವೈದ್ಯರು,ಇಂಜಿನಿಯರ್‌ಗಳು, ಕೈಗಾರಿಕೆಯ ಕೆಲಸಗಾರಾಗಿದ್ದಿದ್ದಾರೆ. ಸಜ್ಜನ ಗಾಣಿಗರು ದುಡಿಯುತ್ತಿರುವುದುಂಟು. ಜೊತೆಗೆ ಕೃಷಿಯಲ್ಲಿ ಇವರು ತಮ್ಮನ್ನು ತಾವು ಶೇ ೮೦ ಜನರನ್ನು ತೊಡಗಿಸಿಕೊಂಡಿದ್ದರೆ. ಇಲ್ಲಿ ಇವರಲ್ಲಿ ಮೂಲ ವೃತ್ತಿಯು ಸಂಪೂರ್ಣವಾಗಿ ಹೊರಟು ಹೋಗಿದೆ. ಇಂದು ಸಜ್ಜನ ಗಾಣಿಗರನ್ನು ಹೊಸ ಹೊಸ ವೃತ್ತಿಗಳು ಆಕ್ರಮಿಸಿಕೊಂಡಿವೆ.

ಇಂದು ಸಜ್ಜನ ಗಾಣಿಗರಲ್ಲಿ ಪುರುಷರಲ್ಲಿ ಕಂಡು ಬರುವ ಹೊಸ ವೃತ್ತಿಗಳ ಹಾಗೆಯೇ, ಮಹಿಳೆಯರು ಇಂದು ಉನ್ನತ ಶಿಕ್ಷಣವನ್ನು ಪಡೆದು ಹೊಸ ಹೊಸ ವೃತ್ತಿಗಳಿಗೆ ಸಜ್ಜನಗುತ್ತಿದ್ದಾರೆ.

ಸಂಪ್ರದಾಯವಾಗಿ ಇರುವಂತೆ ಇಂದು ಸಜ್ಜನ ಗಾಣಿಗರ ಮಹಿಳೆಯರು ಕುಟುಂಬ ಬಿಟ್ಟು ಹೊರಗಡೆ ದುಡಿಯಲು ಮುಂದಾಗಿರುವುದು, ಅದರಲ್ಲಿಯೂ ಹಳೆಯ ವೃತ್ತಿಯನ್ನು ಬಿಟ್ಟು ಹೊಸ ವೃತ್ತಿಗಳಿಗೆ ಕೈ ಹಾಕಿರುವುದು ಒಂದು ವಿಶೇಷವಾಗಿದೆ.

ಪುರುಷ ಪ್ರಧಾನ ಸಮಾಜವಾದರೂ ಇಂದು ಮಹಿಳೆಯರಿಗೂ ಕೂಡ ತಂದೆ ತಾಯಿಗಳು ವಿಶೇಷ ಒತ್ತನ್ನು ನೀಡುತ್ತಿದ್ದು ಪುರುಷರಿಗೆ ಕೊಡಿಸಿದಂತೆ ಮಹಿಳೆಯರಿಗೂ ಶಿಕ್ಷಣ, ಸರಕಾರಿ, ವಿವಿಧ ವೃತ್ತಿಯಗಳನ್ನು ಕೊಡಿಸುತ್ತಿರುವುದು ವಿಶೇಷವಾಗಿದೆ.

ಇವರು ಪುರುಷ, ಮಹಿಳೆ ಎಂಬ ಲಿಂಗತಾರತಮ್ಯವಿಲ್ಲದೆ ಇಂದಿನ ದಿನಮಾನಗಳಲ್ಲಿ ಲಾಭದಾಯಕ ಉದ್ದಿಮೆಗಳನ್ನು ಹೊಂದುತ್ತಿದ್ದರೆ, ತಮ್ಮ ವಿದ್ಯಾರ್ಹತೆಗೆ ತಕ್ಕಂತಹ ವೃತ್ತಿಯನ್ನು ಪಡೆಯಲು ಬಯಸುತ್ತಿದ್ದಾರೆ. ಹಾಗೂ ತಮ್ಮ ಮಕ್ಕಳಿಗೂ ವಿಶೇಷ ಶಿಕ್ಷಣ ಮತ್ತು ಮೂಲ ವೃತ್ತಿ ಬಿಟ್ಟು ಬೇರೆ ಬೇರೆ ವೃತ್ತಿ ಕೊಡಿಸಲು ಮುಂದಾಗುತ್ತಿದ್ದಾರೆ. ಆದ್ದರಿಂದ ಸಜ್ಜನ ಗಾಣಿಗರು ವೃತ್ತಿಯಲ್ಲಿಸಂಪೂರ್ಣ ಪರಿವರ್ತಿತರಾಗಿದ್ದಾರೆ.

**ಎಣ್ಣೆ ವೃತ್ತಿಯಲ್ಲಿನ ಪರಿವರ್ತನೆ ಮತ್ತು ವ್ಯಾಪಾರದಲ್ಲಿ ಅಂತರ ರಾಜ್ಯ ಸಂಬಂಧಗಳ ಹೆಚ್ಚಳ**

ಚಳ್ಳಿಕೆರೆ ತಾಲ್ಲೂಕಿನಲ್ಲಿ ಸಜ್ಜನ ಗಾಣಿಗರು ತಮ್ಮ ಮೂಲ ವೃತ್ತಿಯನ್ನು ಬಿಟ್ಟಿದ್ದರೂ ಎತ್ತಿನ ಗಾಣದಿಂದ ಎಣ್ಣೆಯನ್ನು ತೆಗೆಯದೆ ಆ ಸ್ಥಾನದಲ್ಲಿ ದೊಡ್ಡ ದೊಡ್ಡ ಎಣ್ಣೆಯ ಮಿಲ್ಲುಗಳನ್ನು ಸ್ಥಾಪನೆ ಮಾಡಿದ್ದಾರೆ. ಆಂಧ್ರ ಮತ್ತು ತಮಿಳುನಾಡು ರಾಜ್ಯಗಳಿಗೆ ಎಣ್ಣೆಯನ್ನು ಕೊಡುತ್ತಿದ್ದಾರೆ. ಇದರಿಂದ ಎಣ್ಣೆ ವ್ಯಾಪಾರದಲ್ಲಿ

ಅಂತರ ರಾಜ್ಯ ಸಂಬಂಧಗಳು ಸಜ್ಜನ ಗಾಣಿಗರಲ್ಲಿ ಹೆಚ್ಚುತ್ತಿರುವುದು ಒಂದು ವಿಶೇಷವಾಗಿದೆ. ಚಳ್ಳಕೆರೆ ತಾಲ್ಲೂಕಿನಲ್ಲಿಯೇ ಎಣ್ಣೆ ಮಿಲ್ಲುಗಳ ಸೃಷ್ಠಿಯಾಗಲೂ ಕಾರಣವೆಂದರೆ ಎಣ್ಣೆ ಕಾಳುಗಳಾದ ಶೇಂಗಾ ಮತ್ತು ಸೂರ್ಯಪಾನ. ಚಳ್ಳಿಕೆರೆ ಮತ್ತು ಮೊಳಕಾಲ್ಮೂರಿನಲ್ಲಿ ಹೆಚ್ಚಾಗಿ ಬೆಳೆಯುತಿದ್ದು, ಎಣ್ಣೆ ಮಿಲ್ಲುಗಳಿಗೆ ಸುಲಭವಾಗಿ ಕಚ್ಚಾ ಎಣ್ಣೆ ಬೀಜಗಳ ಸೌಲತ್ತುಗಳು ಇರುವುದರಿಂದ ವಿಶೇಷವಾಗಿ ಚಳ್ಳಿಕೆರೆಯಲ್ಲಿ ಸಜ್ಜನ ಗಾಣಿಗರು ದೊಡ್ಡ ದೊಡ್ಡ ಎಣ್ಣೆ ಮಿಲ್ಲುಗಳ ಸ್ಥಾಪನೆ ಮಾಡಿ ಅದರ ಒಡೆಯರಾಗಿದ್ದಾರೆ.

ಹಿಂದಿನ ದಿನಮಾಸಗಳಲ್ಲಿ ಇರುವಂತೆ ಜಾತಿ ಆಧಾರಿತ ವೃತ್ತಿಗಳು ಲಾಭದಾಯಕವಾಗಿಯೇ ಇದ್ದವು. ಏಕೆಂದರೆ ಆ ದಿನಮಾನಗಳಲ್ಲಿ ಯಾರು ಯಾವ ವೃತ್ತಿ ಕೈಗೊಳ್ಳುತ್ತಾರೋ ಆ ವೃತ್ತಿಯನ್ನು ಬೇರೆಯವರು ಮಾಡುವಂತಿರಲಿಲ್ಲ. ಆದ್ದರಿಂದ ಜಾತಿ ಆಧಾರಿತವಾಗಿಯೇ ವೃತ್ತಿಗಳು ಮತ್ತು ಕಾರ್ಯಗಳು ಹಿಂದಿನ ದಿನ ಮಾನಗಳಲ್ಲಿ ಬೆಳೆದು ಬಂದಂತವುಗಳಾಗಿವೆ. ಆ ದಿನಗಳಲ್ಲಿ ಆ ಜಾತಿಯವರು ಆಯಾ ವೃತ್ತಿ ಪಾಲನೆ ಮಾಡಿಕೊಂಡು ಹೋಗುವುದಿದ್ದರಿಂದ ಯಾವುದೇ ಸಮುದಾಯಕ್ಕೆ ಲಾಭವೇ ಆಗುತ್ತಿತ್ತು.

ಆದರೆ ಇಂದಿನ ಆಧುನಿಕ ದಿನಮಾನಗಳಲ್ಲಿ ಜಾತಿ ಆಧಾರಿತ ವೃತ್ತಿಗಳು ಮಾಯವಾಗಿ ವ್ಯಕ್ತಿಗೆ ವೃತ್ತಿಯಲ್ಲಿಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಲಾಗಿದೆ. ವ್ಯಕ್ತಿಯು ಇಂದು ಸಾಮಾಜಿಕ ಚಲನೆಯೊಂದಿಗೆ ವೃತ್ತಿ ಚಲನೆಯನ್ನು ಹೊಂದುತ್ತಿದ್ದಾನೆ. ಅಂದರೆ ಇಂದಿನ ದಿನಮಾನದಲ್ಲಿ ವ್ಯಕ್ತಿ ಹೊಂದಿರುವ ಶಿಕ್ಷಣ, ತರಬೇತಿ, ಅನುಭವ, ಅರ್ಹತೆಗಳು ವೃತ್ತಿಯ ಮೇಲೆ ತಮ್ಮ ಪ್ರಭಾವವನ್ನು ಬೀರ ತೊಡಗಿವೆ. ಇಂದು ಯಾರು ಯಾವ ವೃತ್ತಿಯನ್ನಾದರೂ ಕೈಗೊಳ್ಳಬಹುದಾಗಿದೆ. ಇಂದು ಸಜ್ಜನ ಗಾಣಿಗರು ತಮ್ಮ ಮೂಲ ವೃತ್ತಿಯನ್ನು ತೊರೆದು, ಬೇರೆ ಬೇರೆ ವೃತ್ತಿಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ಇಂದು ಸ್ಪರ್ಧಾತ್ಮಕ ಜಗತ್ತಾದ್ದರಿಂದ ಗಾಣಿಗರೇ ಗಾಣದ ವೃತ್ತಿ ಮಾಡ ಬೇಕೆಂಬುದಿಲ್ಲ. ಸಮಗಾರರೇ ಸಮಗಾರರ ವೃತ್ತಿಮಾಡಬೇಕೆಂಬುದಿಲ್ಲ. ಮಾಡಿವಾಳ ಸಮುದಾಯವೇ ಬಟ್ಟೆ ಶುದ್ಧೀಕರಣ ಮಾಡಬೇಕೆಂಬ ನಿಯಮಗಳಿಲ್ಲ. ಇಂದು ಆಧುನಿಕ ದಿನಮಾನಗಳಿಗೆ ತಕ್ಕಂತೆ, ಆಧುನಿಕ ವಾತವರಣಕ್ಕೆ ತಕ್ಕಂತೆ, ಅರ್ಹತೆ ವೃತ್ತಿಯಲ್ಲಿ ಬಹಳ ಪ್ರಮುಖ ಸ್ಥಾನ ಪಡೆದಿರುವುದರಿಂದ ವೃತ್ತಿ ಶೈಕ್ಷಣಿಕ ಅರ್ಹತೆಗೆ ತಕ್ಕಂತೆ ವೃತ್ತಿ ಬಯಸುವುದು ಸಹಜವಾಗಿರುವುದರಿಂದ ಮತ್ತು ಆಧುನಿಕ ದಿನಮಾನದಲ್ಲಿ ಯಾವುದು ಲಾಭದಾಯಕ ಹುದ್ದೆಯಾಗಿರುತ್ತದೆಯೋ, ಆ ಹುದ್ದೆ ಪಡೆಯುವುದು ಸ್ವಾಭಾವಿಕ. ಇಂದು ಹಳೆಯ ಸಾಂಪ್ರದಾಯಕ ವೃತ್ತಿಯಲ್ಲಿ ಬಹಳಷ್ಟು ಬದಲಾಗಿದ್ದು ಇದರ ಆಯ್ಕೆಯಲ್ಲಿ ವ್ಯಕ್ತಿ ಪೂರ್ಣ ಸ್ವಾಂತತ್ರತೆ ಇರುವುದರಿಂದ ವ್ಯಕ್ತಿ ಇಂದು ಯಾವ ವೃತ್ತಿಯನ್ನಾದರೂ ಪಡೆಯ ಬಹುದಾಗಿದೆ.

**೫.೨. ಶೈಕ್ಷಣಿಕ ಪದ್ಧತಿ**

ಗಾಣಿಗ ಸಮುದಾಯದಲ್ಲಿ ಪ್ರಾರಂಭದ ದಿನಗಳಿಂದಲೂ ಶಿಕ್ಷಣದ ಅರಿವು ಇಲ್ಲದೇ ಇರುವ ಕಾರಣ ಶೈಕ್ಷಣಿಕವಾಗಿ ಹಿಂದುಳಿದು ಬಂದಂತಹ ಸಮುದಾಯವಾಗಿದೆ. ಇದರಿಂದ ಹೆಚ್ಚಿನ ವಿಷಯಗಳಾಗಲಿ,

ಮಾಹಿತಿಗಳಾಗಲಿ, ಪೂರ್ವ ಐತಿಹ್ಯದ ಬಗ್ಗೆಯಾಗಲಿ ತಿಳಿದುಕೊಳ್ಳಲು ಬಹಳಷ್ಟು ಶ್ರಮ ಪಡಬೇಕಾಯಿತು. ಆದರೂ ಇತ್ತೀಚೆಗೆ ಈ ಸಮುದಾಯದವರಲ್ಲಿ ಸಮಾಜ ಸಂಘಟನೆಯ ಕೆಲಸವು ಪ್ರಗತಿಯ ಪಥದತ್ತ ಸಾಗುತ್ತಿರುವುದರಿಂದ ವಿದ್ಯಾವಂತ ಯುವಕರು, ಕೆಲವು ಆಸಕ್ತಿಯುಳ್ಳ ಹಿರಿಯರು ಸಮಾಜವು ಮುಂದುವರೆದು ಪ್ರಗತಿ ಸಾಧಿಸಲು ಈ ಸಮುದಾಯದವರು ಶಿಕ್ಷಣವಂತರಾಗಿ ಮುಂದೆ ಬರುವಲ್ಲಿ ಪ್ರಯತ್ನಿಸುತ್ತಿದ್ದಾರೆ.

ಇತ್ತೀಚೆಗೆ ಆಧುನಿಕ ದಿನಮಾನಗಳಿಗೆ ತಕ್ಕಂತೆ ಈ ಸಮುದಾಯದವರು ಶಿಕ್ಷಣದತ್ತ ಬಹಳಷ್ಟು ಒಲವು ತೋರಿಸುತ್ತಿದ್ದಾರೆ. ತಮ್ಮ ಮಕ್ಕಳು ತಮ್ಮಂತೆಯೇ ಬಡತನದ ಬದುಕು ಮತ್ತು ಅವಿದ್ಯಾವಂತನಾಗದೇ ವಿದ್ಯಾವಂತರಾಗಲಿ ಎಂಬ ಆಶಯದಿಂದ ವ್ಯವಸಾಯದಲ್ಲಿ ಮಕ್ಕಳನ್ನು ಸಹಾಯಕರನ್ನಾಗಿ ಬಳಸಿಕೊಳ್ಳುವುದು ತಪ್ಪು ಎಂಬ ಅರಿವು ಇತ್ತೀಚೆಗೆ ಗಾಣಿಗ ಸಮುದಾಯದಲ್ಲಿ ಗೋಚರಿಸುತ್ತಿದೆ. ಪರಿಣಾಮ ಇವರ ಮಕ್ಕಳನ್ನು ಸಂಪೂರ್ಣವಾಗಿ ಇಂದು ಸಾಕ್ಷರಸ್ಥರನ್ನಾಗಿ ಮಾಡುವ ಗುರಿ ಉದ್ದೇಶವನ್ನು ಇಟ್ಟುಕೊಂಡು ಈ ಸಮುದಾಯವು ಇಂದು  ಮುನ್ನಡೆಯುತ್ತಿದೆ.

ಇಂದು ತಂದೆ ತಾಯಿಗಳಿಗೆ ೨ ಅಥವಾ ೩ ಮಕ್ಕಳು ಗಾಣಿಗ ಸಮುದಾಯದಲ್ಲಿ ಕಂಡು ಬರುತ್ತಿದ್ದು, ಇವರು ಕುಟುಂಬ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಜನನ ನಿಯಂತ್ರಣವನ್ನ ಮಹಿಳೆಯರು ಟ್ಯುಬೆಕ್ಟಮಿ ಸಂತಾನ ಹರಣ ಶ್ತ್ರ ಚಿಕಿತ್ಸೆಗೆ ಒಳಗಾಗುತ್ತಿದ್ದಾರೆ. ಆದಕಾರಣ ಕೌಟುಂಬಿಕ ವ್ಯವಸ್ಥೆಯಲ್ಲಿ ತನ್ನಷ್ಟಕ್ಕೆ ತಾನೆ ಜನಸಂಖ್ಯೆ ನಿಯಂತ್ರಣಕ್ಕೆ ಬರುತ್ತಿದೆ. ಆದರೆ ಮಹಿಳೆಯರಿಗೆ ಮಾತ್ರ ಸಮುದಾಯಲ್ಲಿ ಜನನ ನಿಯಂತ್ರಣ ಶಸ್ತ್ರ ಚಿಕಿತ್ಸೆ ಮಾಡಿಸುತ್ತಾರೆ. ವಿನಃ ಅಧ್ಯಯನದ ಸಂದರ್ಭದಲ್ಲಿ ಗಾಣಿಗರ ಯಾವುದೇ ಪುರುಷನು ವೆಸಕ್ಟಮಿ ಶಸ್ತ್ರ ಚಿಕಿತ್ಸೆಗೆ ಒಳಗಾಗಿಲ್ಲ. ಕೌಟುಂಬಿಕವಾಗಿ ಮಕ್ಕಳ ಸಂಖ್ಯೆ ಕಡಿಮೆ ಇರುವುದರಿಂದ ತಂದೆ ತಾಯಿಗಳ ಜವಾಬ್ದಾರಿ ಮಕ್ಕಳ ಮೇಲಿದೆ. ತಮ್ಮ ಮಕ್ಕಳು ವಿದ್ಯಾವಂತರಾಗಲಿ, ನಮ್ಮಂತೆ ಆಗುವುದು ಬೇಡ, ಮಕ್ಕಳು ನೌಕರಿಗೆ ಸೇರಲಿ ಎಂಬ ಸದ್ಬುದ್ದಿಯಿಂದ ಇಂದು ಮಕ್ಕಳನ್ನು ಜವಾಬ್ದಾರಿಯಿಂದ ಶಾಲಾ ಕಾಲೇಜುಗಳಿಗೆ ಕಳಿಸುತ್ತಾರೆ. ಈ ಸಮುದಾಯದಲ್ಲಿ ಮಕ್ಕಳು ಉತ್ತಮ ಶಿಕ್ಷಣ ಮತ್ತು ಒಳ್ಳೆಯ ಉದ್ಯೋಗವನ್ನು ಪಡೆಯುವಲ್ಲಿ ತಂದೆ ತಾಯಿಗಳು ಮತ್ತು ಕುಟಂಬದ ಹಿರಿಯರು ಮಾರ್ಗದರ್ಶಕರಾಗಿ ನಾವು ನಿಲ್ಲಬೇಕು ಎಂದು ಕ್ಷೇತ್ರಕಾರ್ಯದ ಸಂದರ್ಶನದಲ್ಲಿ ವಕ್ತೃಗಳ ಅಭಿಪ್ರಾಯಗಳಾಗಿ ಹೊರ ಹೊಮ್ಮುತ್ತವೆ.

ಕ್ಷೇತ್ರಕಾರ್ಯದಲ್ಲಿ ಅವರ ಶಿಕ್ಷಣದ ಹಿನ್ನೆಡೆಗೆ ಕಾರಣಗಳನ್ನು ಕುಟುಂಬಗಳಲ್ಲಿ ಪ್ರಶ್ನಿಸಿದಾಗ ಅವರು ಈ ರೀತಿ ವಿವರಿಸುತ್ತಾರೆ, ನಾನು ಐದನೇ ತರಗತಿಯ ವಿದ್ಯಾಭ್ಯಾಸಕ್ಕೆ ಶಾಲೆ ಬಿಡಬೇಕಾಯಿತು, ಓದಲು ಹೆಚ್ಚಿನ ಆಸಕ್ತಿ, ಹೊಂದಿದವನಾಗಿದ್ದೆ. ಆದರೆ ವೃತ್ತಿಯಲ್ಲಿ (ವ್ಯವಸಾಯದಲ್ಲಿ) ತಂದೆಗೆ ಸಹಾಯಕನಾಗಿ, ಕುಟುಂಬದ ದನ ಕರುಗಳನ್ನು ಕಾಯಲು ವಿದ್ಯಾಬ್ಯಾಸವನ್ನು ಬಿಡಬೇಕಾಯಿತು. ಹೀಗಾಗಿ ನನ್ನ ಅಕ್ಷರಾಭ್ಯಾಸವು ನಿಂತು ಹೋಯಿತು. ಹಾಗೂ ೧ ರಿಂದ ೫ ನೇ ತರಗತಿಗೆ ಶಿಕ್ಷಣಕ್ಕೆ ಕೊನೆ ಹಾಡಿದವರು ಸಿಗುತ್ತಾರೆ.

ಸಮುದಾಯದಲ್ಲಿ ಸದಸ್ಯರು ಶಿಕ್ಷಣವಂತರಾದರೆ ಆರ್ಥಿಕವಾಗಿ ಪ್ರಗತಿ ಸಾಧಿಸಲು ಸಾಧ್ಯ. ಆದರೆ ಇವರಲ್ಲಿ ಹೆಚ್ಚಾಗಿ ೩೦ ವರ್ಷದ ಮೇಲ್ಪಟ್ಟ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ಅನಕ್ಷರತೆಯ ಪ್ರಮಾಣ

ಹೆಚ್ಚಿದೆ. ಅಂದರೆ ಹೆಚ್ಚಾಗಿ ವಯಸ್ಸಾದವರಲ್ಲಿ ಹಿರಿಯ ತಲೆಮಾರಿನಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚಿದೆ. ಮಕ್ಕಳು S.S.L.C. ಪಾಸಾದ ಮೇಲೆ ಯಾವ ಶಿಕ್ಷಣಕ್ಕೆ ಕಳಿಸಬೇಕು ಎಂಬ ಮಾರ್ಗದರ್ಶನದ ಕೊರತೆಯು ಈ ಸಮುದಾಯದಲ್ಲಿದೆ. ಈ ಸಮುದಾಯದಲ್ಲಿ ಹಣಕಾಸಿನ ತೊಂದರೆಯಿಂದಲೂ ವಿದ್ಯಾಭ್ಯಾಸ ಮಾಡಲು ಸಾಧ್ಯವಾಗುತ್ತಿಲ್ಲ. ಈ ಸಮುದಾಯದಲ್ಲಿ ಶಿಕ್ಷಣವಂತರಾದಲ್ಲಿ ಆರ್ಥಿಕವಾಗಿ ಪ್ರಗತಿ ಸಾಧಿಸಲು ಸಾದ್ಯತೆ ಇದೆ. ಇವರಲ್ಲಿ ಅರ್ಧಕ್ಕೆ ಶಾಲೆ ಬಿಟ್ಟು ಮಕ್ಕಳ ಬಗ್ಗೆ ಕಾಳಜಿ ವಹಿಸುತ್ತಿಲ್ಲ. ಇಂದು ಹಿರಿಯ ತಲೆಮಾರಿನ ಜನರು ರಾತ್ರಿ ಶಾಲೆಗಳಿಗೆ ಹೋಗಿ ತಮ್ಮ ವಿದ್ಯಾಭ್ಯಾಸ ಉತ್ತಮ ಪಡಿಸಿಕೊಳ್ಳಬೇಕು ಎಂಬ ಅರಿವು ಸಹ ಈ ಸಮುದಾಯದ ಜನರಲ್ಲಿ ಇಲ್ಲ.

ಒಟ್ಟಿನಲ್ಲಿ ಹೇಳುವುದಾದರೆ ಈ ಸಮುದಾಯದ ಹಿರಿಯ ಸದಸ್ಯರಲ್ಲಿ ಹೆಚ್ಚಾಗಿ ಅನಕ್ಷರತೆ ಕಂಡುಬರುತ್ತದೆಯೇ ವಿನಃ, ಈ ಸಮುದಾಯದ ನವಪೀಳಿಗೆಯಲ್ಲಿ ಇಂದು ಸಾಕ್ಷರತೆ ಇದೆ. ವ್ಯವಸಾಯವು ಸಹ ಹೆಚ್ಚು ಜನರನ್ನು ಅನಕ್ಷರಸ್ಥರನ್ನಾಗಿ ಮಾಡಿದೆ. ಈ ಮೇಲಿನ ಎಲ್ಲಾ ಕಾರಣಗಳಿಂದ ಈ ಸಮುದಾಯವು ಶೈಕ್ಷಣಿಕವಾಗಿ ಹಿಂದುಳಿದಿದೆ ಎಂದು ಹೇಳಬಹುದಾಗಿದೆ. ಈ ಸಮುದಾಯದಲ್ಲಿ ಪುರುಷರಿಗಿಂತ ಮಹಿಳೆಯರಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚಿದೆ. ಇದಕ್ಕೆ ಕಾರಣವೆಂದರೆ ನಮ್ಮದು ಪುರುಷ ಪ್ರಧಾನ ಸಮಾಜವಿರುವುದರಿಂದ ಮಹಿಳೆಯರಿಗಿಂತ ಪುರುಷರಿಗೆ ಸಾಕ್ಷರಸ್ಥರನ್ನಾಗಿ ಮಾಡಲು ಒತ್ತು ನೀಡಲಾಗುತ್ತಿದೆ. ಈ ಸಮುದಾಯದಲ್ಲಿ ಪುರುಷರಲ್ಲಿ ೮೭% ಮಹಿಳೆಯರಲ್ಲಿ ೮೩% ಒಟ್ಟು ಸರಾಸರಿ ೮೫%ರಷ್ಟು ಸಾಕ್ಷರತೆ ಸಜ್ಜನ ಗಾಣಿರಲ್ಲಿದೆ.

### ೫.೩. ರಾಜಕೀಯ ಜೀವನ

ಒಂದು ಸಮುದಾಯವು ಎಷ್ಟು ಮುಂದುವರೆದಿದೆ ಮತ್ತು ಹಿಂದುಳಿದಿದೆ ಎಂದು ತಿಳಿಯುವುದಕ್ಕೆ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕ ಅಂಶಗಳು, ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಹಾಗೂ ಈ ಅಂಶಗಳು ಮಾನದಂಡವಾಗಿಯೂ ಕೂಡ ಪರಿಣಮಿಸುತ್ತವೆ. ಸಮುದಾಯದಲ್ಲಿ ನಾಯಕರು ಎಲ್ಲಿ ಹೆಚ್ಚಾಗಿರುತ್ತಾರೆಯೋ, ಅಲ್ಲಿ ರಾಜಕೀಯ ಪ್ರವೇಶ ಮತ್ತು ಭಾಗವಹಿಸುವಿಕೆ ಹೆಚ್ಚಾಗಿರುತ್ತದೆ.

ನಾಯಕ ಎಂಬ ಶಬ್ದವು ಬಹು ವಿಶಾಲವಾದ ಅರ್ಥ ಪಡೆದಿದೆ. ಕಾಲಮಾನಕ್ಕೆ ಅನುಗುಣವಾಗಿ ಬೇರೆ ಬೇರೆ ಅರ್ಥ ಮಾಡಬೇಕಾಗುತ್ತದೆ. ಐತಿಹಾಸಿಕವಾಗಿ ರಾಜ ಮಹಾರಾಜರ ಆಳ್ವಿಕೆಯಲ್ಲಿ ರಾಜನ ಮೆಚ್ಚುಗೆಗೆ ಪಾತ್ರನಾದ ವ್ಯಕ್ತಿಯನ್ನು ನಾಯಕ ಎಂದು ಕರೆಯುತ್ತಿದ್ದಾರೆ. ಇಂದು ಪ್ರಜಾಪ್ರಭುತ್ವದಲ್ಲಿ ಪ್ರಜೆಗಳನ್ನು ಸಂಘಟಿಸಿಕೊಂಡು ಅವರನ್ನು ತನ್ನ ಮಾರ್ಗದಲ್ಲಿ ನಡೆಸುವಂತಹ ವ್ಯಕ್ತಿಯು ನಾಯಕ ಎಂದು ಕರೆಯಲ್ಪಡುತ್ತಾನೆ. ಸಮಾಜದ ಹಿತಕ್ಕೋಸ್ಕರ ಸಮಾಜವನ್ನು ಸಂಘಟಿಸುತ್ತಾ ಹೋರಾಟ ಮನೋಭಾವವನ್ನು ಹೊಂದಿರುವವನೇ ನಾಯಕ ಎಂದು ಕರೆಸಿಕೊಳ್ಳಲಿಕ್ಕೆ ಅರ್ಹನಾಗುತ್ತಾನೆ. ಈ ನಾಯಕರು ತಮ್ಮ ಸಮುದಾಯದ ಜನರನ್ನು ಸಂಘಟಿಸಿ ಸಂಸ್ಥೆ ಮತ್ತು ಸರಕಾರದ ಸೌಲಭ್ಯಗಳನ್ನು ಹಾಗೂ ಸಂವಿಧಾನದ ಅಡಿ ಲಭ್ಯವಾಗುವ ಅಧಿಕಾರ, ಸ್ಥಾನಮಾನ ದೊರಕಿಸುತ್ತಾರೆ. ಪ್ರಜಾಪ್ರಭುತ್ವದಲ್ಲಿ ಆಯ್ಕೆಗೊಂಡ ನಾಯಕರಿಗೆ ಹೆಚ್ಚು ಗೌರವ ಸ್ಥಾನಮಾನ ಮೀಸಲಾಗಿರುತ್ತದೆ. ಇತ್ತೀಚೆಗೆ ವಿವಿಧ ಜಾತಿಯವರು ವರ್ಗದವರು ತಮ್ಮ ತಮ್ಮ ಸಂಘಟನೆಯನ್ನು

ಕಟ್ಟಿಕೊಂಡು ತಮ್ಮ ನಾಯಕನನ್ನು ಚುನಾಯಿಸಿ ಆತನ ಮೂಲಕ ತಮ್ಮ ಬೇಕು, ಬೇಡಗಳಿಗಾಗಿ ಸರ್ಕಾರದ ವಿರುದ್ಧ ಹೋರಾಟದ ಮನೋಭಾವನೆಯನ್ನೂ ಹೊಂದಿದ್ದಾರೆ. ಈ ಹಿನ್ನೆಲೆಯಲ್ಲಿ ಗಾಣಿಗ ಸಮುದಾಯದಲ್ಲಿಯೂ ಕೂಡ ಈ ಲಕ್ಷಣಗಳು ಕಂಡು ಬರುತ್ತವೆ. ನಾಯಕರಲ್ಲಿ ರಾಷ್ಟ್ರ ಹಿತಕ್ಕಾಗಿ ರಾಷ್ಟ್ರದ ಜನಾಭ್ಯುದಯಕ್ಕಾಗಿ ರಾಷ್ಟ್ರದ ಜನರನ್ನು ಸಂಘಟಿಸಿ ಮುನ್ನಡೆಯುವವನೇ ಮತ್ತು ಹೋರಾಡುವವನೇ ರಾಷ್ಟ್ರನಾಯಕ. ಉದಾ: ಗಾಂಧೀಜಿ, ಪಂಡಿತ ಜವಾಹರ ಲಾಲ ನೆಹರು, ವಲ್ಲಭ ಬಾಯಿ ಪಾಟೇಲ, ಇಂದಿರಾಗಾಂಧಿ, ಬಾಲ ಗಾಂಗಧಾರ ತಿಲಕ್ ಮುಂತಾದವರು.

ಕರ್ನಾಟಕ ಪ್ರದೇಶದ ಏಕೀಕರಣಕ್ಕಾಗಿ ಕನ್ನಡಿಗರನ್ನು ಸಂಘಟಿಸಿ ಹೋರಾಡಿದ ಮತ್ತು ಕರ್ನಾಟಕ ರಾಜ್ಯದ ಸಮಸ್ತ ಹಿತಕ್ಕಾಗಿ ಹೋರಾಡಿದ ಎಸ್. ನಿಜಲಿಂಗಪ್ಪನವರು ರಾಜ್ಯ ನಾಯಕರು ಮತ್ತು ಪ್ರಾದೇಶಿಕ ನಾಯಕರೂ ಆದರು. ದೇಶದ ಸಮಸ್ತ ಕಾರ್ಮಿಕರನ್ನು ಅವರ ಹಿತಕ್ಕಾಗಿ ಸಂಘಟಿಸಿದ ಜಾರ್ಜ್ ಫರ್ನಾಂಡಿಸ್, ವಿ.ವಿ.ಗಿರಿ. ಎಸ್.ಕೆ.ಪಾಟೀಲ ಇತ್ಯಾಧಿ ಕಾರ್ಮಿಕ ವರ್ಗದ ನವನಾಯಕರಾಗಿ ಹೆಸರುವಾಸಿಯಾಗಿದ್ದಾರೆ. ಅಬ್ರಹಾಂ ಲಿಂಕನ್, ಜಾನ್ ಮಾರ್ಟಿನ್ ಲೂಥರ್, ಸ್ಟಾಲಿನ್, ಲೆನಿನ್, ಮಂಡೇಲಾ, ಜಿನ್ನಾ ತಮ್ಮ ದೇಶಕ್ಕಾಗಿ ಹೋರಾಡಿ, ದೇಶದ ನಾಯಕರೆಂದು ಪೂಜಾರ್ಹರಾದರು. ಒಬ್ಬ ಸಂಸದ ಮತ್ತು ಶಾಸಕ ಒಂದು ಕ್ಷೇತ್ರದಿಂದ ಆರಿಸಲ್ಪಟ್ಟ ನಾಯಕನಲ್ಲಿರಬೇಕಾದ ಗುಣಗಳು ಆತನಲ್ಲಿ ಇಲ್ಲದಿರಬಹುದು. ಸಂವಿಧಾನದ ಅನ್ವಯ ವಿಧಾನ ಮಂಡಳದಲ್ಲಿ ಶಾಸಕರು ತಮ್ಮ ಮುಖಂಡನನ್ನು ಆಯ್ಕೆ ಮಾಡುತ್ತಾರೆ. ಸಂಸದರ ಸಂಖ್ಯೆಯಲ್ಲಿ ತಮ್ಮ ಮುಖ್ಯಸ್ಥನನ್ನು ಅರಿಸುತ್ತಾರೆ. ಇಂತಹ ಮುಖಂಡರಿಗೆ ನಾಯಕ ಎನ್ನುತ್ತಾರೆ.

ದೇಶದ ಕರ್ನಾಟಕ ರಾಜ್ಯದಲ್ಲಿ ಈಗಿನ ಮುಖ್ಯಮಂತ್ರಿಯಾಗಿರುವ ಶ್ರೀ ಬಿ.ಎಸ್.ಯಡಿಯೂರಪ್ಪ ಇವರು ಗಾಣಿಗ ಸಮುದಾಯವರಾಗಿದ್ದೂ, ರಾಜ್ಯನಾಯಕರಲ್ಲಿ ಒಬ್ಬರೆನ್ನಿಸಿಕೊಂಡಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಗಾಣಿಗ ಸಮಾಜದ ಅನೇಕ ಮುಖಂಡರು ಲೋಕಸಭೆ ಮತ್ತು ವಿಧಾನ ಸಭೆ, ವಿಧಾನ ಪರಿಷತ್, ಇವುಗಳ ಸದಸ್ಯರಾಗಿದ್ದಾರೆ. ಇವರಲ್ಲಿ ಪ್ರಮುಖರಾದವರೆಂದರೆ,

| | ಹೆಸರು | ರಾಜಕೀಯ ಹುದ್ದೆ |
|---|---|---|
| ೧. | ಶ್ರೀ ನಂಜುಂಡಸ್ವಾಮಿ, ತುಮಕೂರು | ಲೋಕಸಭಾ ಸದಸ್ಯರಾಗಿದ್ದರು. |
| ೨. | ಶ್ರೀ ಜಿ.ಎಸ್.ಸಜ್ಜನ ನ್ಯಾಯವಾಧಿ ಬಿಜಾಪುರ | ಮುಂಬೈ ಪ್ರಾಂತ್ಯದ ವಿಧಾನಸಭಾ ಸದಸ್ಯರಾಗಿದ್ದರು. |
| ೩. | ಶ್ರೀ ಎಸ್.ರುದ್ರಪ್ಪ, ನ್ಯಾಯವಾಧಿ ಗುಲಬರ್ಗಾ | ಮೂರು ಸಲ ಕರ್ನಾಟಕ ವಿಧಾಸಭಾ ಸದಸ್ಯರಾಗಿದ್ದಾರೆ. |
| ೪. | ಶ್ರೀ ಖೇಳಗಿ ಸಿದ್ದಪ್ಪ ಬೀದರ | ಕರ್ನಾಟಕ ವಿಧಾನ ಪರಿಷತ್ ಸದಸ್ಯರಾಗಿದ್ದರು. |
| ೫. | ಶ್ರೀ ಎಂ.ಎಂ.ಸಜ್ಜನರು ನ್ಯಾಯವಾಧಿ, ಬಿಜಾಪುರ ಜಿಲ್ಲೆ | ೧೯೭೨ ರಿಂದ ೧೯೭೮ ರವರೆಗೆ ಕರ್ನಾಟಕ ೫ನೇ ವಿಧಾನ ಸಭೆ ಸದಸ್ಯರಾಗಿದ್ದರು. |
| ೬. | ಶ್ರೀ ಬಿ.ಎಸ್.ವೀರಭದ್ರಪ್ಪ ಬಳ್ಳಾರಿ ಜಿಲ್ಲೆ, ಕೊಟ್ಟೂರು | ಇದೇ ವಿಧಾನ ಸಭೆಯ ಸದಸ್ಯರಾಗಿದ್ದರು. |

| | | |
|---|---|---|
| ೭. | ಶ್ರೀ ಆರ್.ಆರ್.ಕಲ್ಲೂರು, ಇಂಡಿ, | ಮೂರು ಸಲ ಕರ್ನಾಟಕ ವಿಧಾನ ಸಭೆ ಸದಸ್ಯರಾಗಿದ್ದಾರೆ. ಬಿಜಾಪುರ ಜಿಲ್ಲೆ |
| ೮. | ಶ್ರೀ ಭಾವಿ, ಧಾರವಾಡ ಜಿಲ್ಲೆ ಮುಂಡರಿಗಿ ವಾಡಕವು | ಕರ್ನಾಟಕ ವಿಧಾನ ಸಭಾ ಸದಸ್ಯರಾಗಿದ್ದರು. |
| ೯. | ಶ್ರೀ ಗದ್ದಿಗೌಡರು ಬಾದಾಮಿ ಬಿಜಾಪುರ ಜಿಲ್ಲೆ | ಎರಡು ಸಲ ಕರ್ನಾಟಕ ವಿಧಾನ ಪರಿಷತ್‌ನ ಸದಸ್ಯರಾಗಿದ್ದಾರೆ. ಹಾಲಿ ಎಂ.ಪಿ.ಆಗಿದ್ದಾರೆ. |
| ೧೦. | ಶ್ರೀ ಬಿ. ಎಂ. ಹೊರಕೇರಿ, ಬಾದಾಮಿ ಬಿಜಾಪುರ ಜಿಲ್ಲೆ | ಗುಳೇದ ಗುಡ್ಡ ಮತಕ್ಷೇತ್ರಕ್ಕೆ ಪ್ರತಿನಿಧಿ ಕರ್ನಾಟಕ ವಿಧಾನ ಸಭೆ ಸದಸ್ಯರಾಗಿದ್ದಾರೆ. |
| ೧೧. | ಶ್ರೀ ಬಿ.ಜಿ.ಪಾಟೀಲ, ಹಲಸಂಗಿ ಬಿಜಾಪುರ ಜಿಲ್ಲೆ | ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿದ್ದರು. |
| ೧೨. | ಶ್ರೀ ಕಲೂತಿ, ಬಾಗಲಕೋಟೆ, ಜಿಲ್ಲೆ | ಮೂರು ಸಲ ಕರ್ನಾಟಕ ವಿಧಾನ ಸಭೆಗೆ ಚುನಾಯಿತರಾಗಿದ್ದು. ಜಮಖಂಡಿ ಶಾಸಕರಾಗಿ ಆಹಾರ ಪೂರೈಕೆ ನಿಗಮದ ಚೇರ್ಮನ್ ಆಗಿ ಕಾರ್ಯ |
| ೧೩. | ಶ್ರೀ ಶಿವಶರಣಪ್ಪ ಗೌಡ ಪಾಟೀಲ ಕೊಪ್ಪಳ ಜಿಲ್ಲೆ ಯಲಬುರ್ಗ | ಕರ್ನಾಟಕ ವಿಧಾನ ಸಭೆಗೆ ಆಯ್ಕೆ ಆಗಿದ್ದಾರೆ. |
| ೧೪. | ಶ್ರೀ ಲಿಂಗರಾಜ ದೇಸಾಯಿ ರಾಯಚೂರ ಜಿಲ್ಲೆ ಗುಲಬುರ್ಗ | ಕರ್ನಾಟಕ ವಿಧಾನ ಸಭೆಗೆ ಆಯ್ಕೆಯಾಗಿದ್ದಾರೆ. |
| ೧೫. | ಶ್ರೀ ರುದ್ರಗೌಡ ಕೆಂಚಣ್ಣವರ ರಾಯಚೂರು ಜಿಲ್ಲೆ ಗುಲಬುರ್ಗ | ವಿಧಾನ ಸಭೆಗೆ ಆಯ್ಕೆಯಾಗಿದ್ದಾರೆ. |
| ೧೬. | ಶ್ರೀ ಸಿದ್ದು ನ್ಯಾಮಗೌಡ ಬಾಗಲಕೋಟೆ | ಲೋಕ ಸಭೆಗೆ ಚುನಾಯಿತರಾಗಿದ್ದಾರೆ. ರಾಜೀವಗಾಂಧಿ ಸಚಿವ ಸಂಪುಟದಲ್ಲಿ ಇಂಧನ ಸಚಿವರಾಗಿ ಕಾರ್ಯ ಮಾಡಿದ್ದಾರೆ. ವಿಧಾನ ಪರಿಷತ್ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. |
| ೧೭. | ಶ್ರೀ ಐ.ವೈ.ಪಾಪಣ್ಣ | ಕೆ.ಪಿ.ಸಿ.ಸಿ ಕಾರ್ಯದರ್ಶಿ |
| ೧೮. | ಶ್ರೀ ಮತಿ ಕ್ಷೀರಸಾಗರ | ಲೋಕ ಸಭೆಸದಸ್ಯರಾಗಿ ಈಗ ಸಂಸದರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. |
| ೧೯. | ಶ್ರೀ ಬಿ.ಜೆ.ಪುಟ್ಟಸ್ವಾಮಿ, ಬೆಂಗಳೂರು | ಕರ್ನಾಟಕ ವಿಧಾನ ಪರಿಷತ್ ಸದಸ್ಯರಾಗಿದ್ದಾರೆ. |
| ೨೦. | ಶ್ರೀ ವಿ.ಆರ್.ಸುದರ್ಶನ ಕೋಲಾರ | ಎರಡು ಸಲ ವಿಧಾನ ಪರಿಷತ್‌ಗೆ ಆಯ್ಕೆಯಾಗಿದ್ದಾರೆ. |
| ೨೧. | ಶ್ರೀ ಮೋಹನ ಶೆಟ್ಟಿ. ಕುಮುಟಾ | ವಿಧಾನ ಸಭೆ ಸದಸ್ಯರಾಗಿದ್ದಾರೆ. |

ಪ್ರಾಂತೀಯವಾಗಿ ಚಿತ್ರದುರ್ಗ ಜಿಲ್ಲೆ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ತಿಳಿದು ಬಂದಿರುವ ಸಂಗತಿ ಎಂದರೆ;

೧. ಶ್ರೀ ಹಾಲಸ್ವಾಮಿ ಜಗಳೂರ ಚಿತ್ರದುರ್ಗ ಜಿಲ್ಲೆ ಮೈಸೂರು ವಿಧಾನ ಸಭೆಯ ಸದಸ್ಯರಾಗಿದ್ದರು.

೨. ಶ್ರೀ ಶಿವಶಂಕರಪ್ಪ ಚಿತ್ರದುರ್ಗ ಚಳ್ಳಕೆರೆ ತಾ. ವಿಧಾನ ಸಭೆ ಸದಸ್ಯರಾಗಿದ್ದರು

ಈ ಪ್ರಾಂತೀಯ ಅಧ್ಯಯನದಿಂದ ತಿಳಿದಿದ್ದೇನೆಂದರೆ ಗಾಣಿಗ ಸಮುದಾಯದಲ್ಲಿ ಆರ್ಥಿಕ ಹಿಂದುಳಿದಿರುವಂತೆ ರಾಜಕೀಯವಾಗಿಯೂ ಹಿಂದಿರುವುದು ಕಂಡುಬರುತ್ತದೆ. ಅದರೂ ಸಮಕಾಲೀನ ದಿನಮಾನಗಳಲ್ಲಿ ಗ್ರಾಮಪಂಚಾಯತ್, ತಾಲ್ಲೂಕ್ ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್‌ಗಳಲ್ಲಿ ಸದಸ್ಯರಾಗಿರುವುದು ಕಂಡುಬರುತ್ತಿದೆ. ಆದರೆ ಇಲ್ಲಿಂದ ಲೋಕಸಭೆಗಾಗಲಿ ಅಥವಾ ವಿಧಾನಸಭೆಗಾಗಲಿ, ಗಾಣಿಗ ಸಮಾಜದ ರಾಜಕೀಯ ಸದಸ್ಯರು ಅಲ್ಲಿ ಇರದಿರುವುದಕ್ಕೆ ಅವರ ಸಂಘಟನೆ ಇಲ್ಲದಿರುವುದು ಕಾರಣವಾಗಿದೆ.

ಈ ಸಮುದಾಯದಲ್ಲಿ ಸ್ಥಳೀಯ ಸಂಸ್ಥೆಯಾದ ಗ್ರಾಮಪಂಚಾಯತ್‌ನ ಸದಸ್ಯರಿದ್ದಾರೆ.

| ಹೆಸರು | ರಾಜಕೀಯ |
|---|---|
| ೧. ತಿಪ್ಪೇ ಸ್ವಾಮಿ - ಮಲ್ಲಾಪುರ | ಗ್ರಾಮ ಪಂಚಾಯತ್ ಸದಸ್ಯರು |
| ೨. ನಟರಾಜ - ಸಾಸಲ ಹಟ್ಟಿ | ಗ್ರಾಮ ಪಂಚಾಯತ್ ಸದಸ್ಯರು |
| ೩. ದೊಡ್ಡಣ್ಣ - ಎಂ.ಡಿ.ಕೋಟೆ | ಗ್ರಾಮ ಪಂಚಾಯತ್ ಸದಸ್ಯರು |
| ೪. ಬಸವರಾಜ - ಸೊಂಡೇಕೆರೆ | ಗ್ರಾಮ ಪಂಚಾಯತ್ ಸದಸ್ಯರು |
| ೫. ಲೋಕಣ್ಣ - ಚಿಕ್ಕೋಬನ ಹಳ್ಳಿ | ಗ್ರಾಮ ಪಂಚಾಯತ್ ಸದಸ್ಯರು |
| ೬. ವಿರುಪಾಕ್ಷ - ಹಿರೇಹಳ್ಳಿ | ಗ್ರಾಮ ಪಂಚಾಯತ್ ಸದಸ್ಯರು. |

ಚಿತ್ರದುರ್ಗ ಜಿಲ್ಲೆಯಲ್ಲಿ ಇದುವರೆಗೆ ಗಾಣಿಗ ಸಮುದಾಯದಲ್ಲಿ ಸಂಘಟನೆಗಳಿಲ್ಲ. ಆದ್ದರಿಂದ ಇವರು ರಾಜಕೀಯವಾಗಿ ಬಹಳಹಿಂದಿದ್ದಾರೆ ಎಂದು ಸಂಶೋಧನ ಕ್ಷೇತ್ರಕಾರ್ಯದ ಅಧ್ಯಯನ ಕೈಗೊಂಡಾಗ ತಿಳಿದು ಬಂದಿರುವ ಸಂಗತಿಯಾಗಿದೆ.

• • •

## ಅಧ್ಯಾಯ : ಆರು

## ಭಾಷೆ ಮತ್ತು ಸಾಹಿತ್ಯ

### ೬.೧. ಭಾಷೆ

ಭಾಷೆ ಎಂದರೆ ''ಒಂದು ಸಮಾಜದಲ್ಲಿ ಜನರು ಆಡುವ ಮಾತು'' ಭಾಷೆಯನ್ನು ಕುರಿತು ಪ್ಲೇಟೋ ಮಹಾಶಯನು ತಿಳಿಸಿರುವಂತೆ ''ಧ್ವನಿ ಸಂಕೇತಗಳಿಂದ ಮನುಷ್ಯನ ವಿಚಾರಗಳನ್ನು ಅಭಿವ್ಯಕ್ತಗೊಳಿಸುವ ಸಾಧನ'' ಎಂದು ಅಭಿಪ್ರಾಯ ಪಟ್ಟಿದ್ದಾರೆ. ''ಪದಗಳ ಮೂಲಕ ವಿಚಾರಗಳನ್ನು ಅಭಿವ್ಯಕ್ತಗೊಳಿಸುವುದೇ ಭಾಷೆ'' ಎಂದು ಹೆನ್ರಿಸ್ವೀಟ್ ಹೇಳಿದ್ದಾನೆ. ಪದಗಳ ಮುಖಾಂತರ ಮಾನವ ತನ್ನ ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುವುದೇ ಭಾಷೆ.

ಮನುಷ್ಯ ತನ್ನ ಅಭಿಪ್ರಾಯ ವ್ಯಕ್ತ ಪಡಿಸಲು ಕೆಲವು ಬಗೆಯ ಸನ್ನೆ ಹಾಗೂ ಸಂಕೇತಗಳನ್ನು ಬಳಸಬಹುದು. ಕಣ್ಣುಮಿಟುಕಿಸುವುದರಿಂದ, ತಲೆ ಅಲ್ಲಾಡಿಸುವುದರಿಂದ, ಬಗೆಬಗೆಯ ಬಾವುಟ ತೋರಿಸುವುದರಿಂದ, ಚಪ್ಪಾಳೆ ಹೊಡೆಯುವುದರಿಂದ, ಗಂಟೆ ಭಾರಿಸುವುದರಿಂದ, ಸೈರನ್ ಕೂಗುವುದರಿಂದ ವಿಚಾರ ವಿನಿಮಯ ಮಾಡಿಕೊಳ್ಳುವ ಸಾಧ್ಯತೆ ಇದೆ. ಆದರೆ ಇವೆಲ್ಲವುಗಳು ಭಾಷೆಯಷ್ಟು ಪರಿಣಾಮಕಾರಿಯಾದವುಗಳಲ್ಲ. ಭಾಷೆ ''ನಮ್ಮ ಅಂತರಾಳದ ಸ್ಥಿತಿಯನ್ನು ಅಥವಾ ಮನಸ್ಸಿನಲ್ಲಿರುವುದನ್ನು ಉಚ್ಚಾರಿತ ಧ್ವನಿಗಳ ಮೂಲಕ ವ್ಯಕ್ತ ಪಡಿಸುವ ಒಂದು ಮಹತ್ ಸಾಧನ'' ''ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರ ಬಳಸುವ ಸ್ವಾತಂತ್ರ ಧ್ವನಿ ಸಂಕೇತಗಳ ಒಂದು ವ್ಯವಸ್ಥೆಯೇ ಭಾಷೆ'' (ಡಾ.ಕೆ.ಕೆಂಪೆಗೌಡ, ೨೦೦೦).

ಒಂದು ಭಾಷೆಯ ವಿಶಿಷ್ಠ ಲಕ್ಷಣಗಳನ್ನು ಪಟ್ಟಿಮಾಡಿ ತೋರಿಸುವುದು ಕಷ್ಟ. ಭಾಷೆಯ ಕೆಲವು ತತ್ವಗಳನ್ನು ವಿವರಿಸಿ ಅದರ ಸ್ವರೂಪ ಮತ್ತು ಸ್ವಭಾವಗಳನ್ನು ತಿಳಿಯಲು ಇಲ್ಲಿ ಪ್ರಯತ್ನಿಸಲಾಗಿದೆ.

ಭಾಷೆ ದೈವದತ್ತವಾದುದಲ್ಲ,

ಮಾನವ ಭಾಷೆ ಪ್ರಾಣಿ ಭಾಷೆಗಿಂತ ಬಿನ್ನವಾಗಿದೆ.

ಭಾಷೆ ಒಂದು ಸಾಮಾಜಿಕ ಕ್ರಿಯೆ,

ಭಾಷೆ ಯಾರ ವಾಂಶಿಕ ಆಸ್ತಿಯೂ ಅಲ್ಲ, ಭಾಷೆ ಸಮಾಜದ ಆಸ್ತಿ.

ಭಾಷೆಯು ಆಡುವವನ ಆಸ್ತಿ,

ಭಾಷೆ ಮನುಷ್ಯನಿಗೆ ಅನುಕರಣೆಯಿಂದ ಲಭಿಸಿದ್ದು.

ಭಾಷೆ, ನಿರಂತರ ಪರಿವರ್ತನಾ ಶೀಲವಾದುದು ಭಾಷೆಯು ಸದಾ ಹರಿಯುವ ಜೀವ ನದಿ, ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಭಾಷೆ ಬದಲಾಗುತ್ತದೆ. ಈ ಪರಿವರ್ತನಾ ಶೀಲತೆ ಭಾಷೆ ಬೆಳವಣಿಗೆಗೆ ಬಹು ಮುಖ್ಯವಾದುದು. ಈ ಗುಣ ಇಲ್ಲದಿದ್ದರೆ ಜಗತ್ತಿನಲ್ಲಿ ಇಂದು ೪,೦೦೦ಕ್ಕೂ ಹೆಚ್ಚು ಭಾಷೆಗಳು ೧೦,೦೦೦ (ಹತ್ತು ಸಾವಿರ) ಕ್ಕೂ ಹೆಚ್ಚು ಉಪ ಭಾಷೆಗಳು ಕಂಡು ಬರುತ್ತಿರಲಿಲ್ಲ.

ಭಾಷೆಗೆ ತನ್ನದೇ ಆದ ಇತಿಹಾಸವಿರುತ್ತದೆ. ಜಗತ್ತಿನ ಪ್ರತಿಯೊಂದು ಭಾಷೆಗೂ ತನ್ನದೇ ಆದ ಇತಿಹಾಸವಿರುತ್ತದೆ.

ಭಾಷೆಗೆ ತನ್ನದೇ ಆದ ಭೌಗೋಳಿಕ ಎಲ್ಲೆ ನಿಶ್ಚಿತವಾಗಿರುತ್ತದೆ.

ಭಾಷೆ ಎಂಬುದು ಒಂದು ಧ್ವನಿ ಪ್ರಪಂಚ.

ಭಾಷೆ ತನ್ನದೇ ಆದ ಒಂದು ವಿಶಿಷ್ಠ ಕ್ರಮವನ್ನು ಪಡೆದಿರುತ್ತದೆ.

ಭಾಷೆಗೆ ಅಂತಿಮ ಸ್ವರೂಪವೇ ಬಂದಿಲ್ಲ.

ಭಾಷೆಯಿಂದ ಮನುಷ್ಯನಿಗೆ ಬಹು ಮುಖ ಪ್ರಯೋಜನಗಳಿವೆ.

೧. ಸಮಾಜದ ಜನತೆಯ ಸಂಸ್ಕಾರ ಹಾಗೂ ಸಂಸ್ಕೃತಿಯನ್ನು ಅರಿಯಲು ಭಾಷೆ ಸಹಾಯ ಮಾಡುತ್ತದೆ. ಮಾನವನ ಎಲ್ಲಾ ವ್ಯವಹಾರಗಳಿಗೂ ಭಾಷೆಯು ಅನಿವಾರ್ಯ. ವಿವಿಧ ದೇಶಗಳ ನಡುವೆ ಸಂಪರ್ಕ, ಸ್ನೇಹ, ಸೌಹಾರ್ದತೆ ಸ್ಥಾಪಿಸಿಕೊಳ್ಳಲು ಭಾಷೆ ಮಹತ್ವದ್ದು. ಭಾಷೆ ವಿಜ್ಞಾನಕ್ಕೆ ತಳಹದಿ. ತತ್ವಜ್ಞಾನಿ, ರಾಜಕಾರಣಿ, ಸಾಹಿತಿ, ವಿಜ್ಞಾನಿ ಹಾಗೂ ಶ್ರೀ ಸಾಮಾನ್ಯ ಎಲ್ಲರಿಗೂ ಭಾಷೆ ಸಶಕ್ತವಾದ ಒಂದು ಸಾಧನ. ಭಾಷೆ ಮತ್ತು ಸಂಸ್ಕೃತಿ ಒಂದನ್ನೊಂದು ಅವಲಂಬಿಸಿವೆ. ಭಾಷೆ ಮಾನವನನ್ನು ಪ್ರಾಣಿ ಲೋಕದಿಂದ ಬೇರ್ಪಡಿಸಿದೆ.

ನಡೆದಂತೆ ನುಡಿ, ನುಡಿದಂತೆ ನಡೆ ಎಂಬ ಸೂಕ್ತಿಯನ್ನು ಗಮನಿಸಿದರೆ ಭಾಷೆ ಮಾನವನ ವ್ಯಕ್ತಿತ್ವವನ್ನು ಅನುಭವಗಳನ್ನು ಅನಿಸಿಕೆಗಳನ್ನು ಅಲೋಚನೆಗಳ್ನು ಪ್ರತಿ ಬಿಂಬಿಸುತ್ತದೆ ಎನ್ನುಬಹುದು. ಇದೇ ಸಂದರ್ಭದಲ್ಲಿ ''ಮಾತೆಂಬುದು ಜ್ಯೋತಿರ್ಲಿಂಗ'' ''ನುಡಿದರೆ ಮುತ್ತಿನ ಹಾರದಂತಿರಬೇಕು'' ಎಂದು ಬಸವಣ್ಣನವರ ಸಾಲುಗಳನ್ನು ನೆನಪಿಸಿಕೊಳ್ಳಬಹುದಾಗಿದೆ. ಭಾಷೆ ಮಾನವನಿಗೆ ಕಲ್ಪವೃಕ್ಷ ಕಾಮಧೇನು ವಿದ್ದಹಾಗೆ.

**ಭಾಷೆ ಮತ್ತು ಸಾಹಿತ್ಯಕ್ಕಿರುವ ಹೋಲಿಕೆ**

ಭಾಷೆಯಿಲ್ಲದೆ ಯಾವುದೇ ಕಾವ್ಯ ಹೊರ ಹೊಮ್ಮಲು ಸಾಧ್ಯತೆಗಳಿಲ್ಲ. ಭಾಷೆಯೇ ಕೆಲವು ವೇಳೆ ಸಾಹಿತ್ಯವಾಗಿಯೂ, ಸಾಹಿತ್ಯವೇ ಭಾಷೆಯಾಗಿಯೂ ಕಾಣಿಸಿಕೊಳ್ಳಬಹುದು. ಸಾಹಿತ್ಯದಲ್ಲಿ ಎರಡು ವಿಧ ಕಾಣಬಹುದು (೧) ಲಿಖಿತ ಸಾಹಿತ್ಯ. ಇನ್ನೊಂದು ಅಲಿಖಿತ ಸಾಹಿತ್ಯವನ್ನು ಜಾನಪದ ಸಾಹಿತ್ಯ ಎಂತಲೂ

ಕರೆಯುವರು. ಬಹು ಹಿಂದಿನ ಕಾಲದಿಂದಲೂ ಭಾಷೆಯ ಅಧ್ಯಯನ ಸಾಹಿತ್ಯದ ಅಧ್ಯಯನದ ಜೊತೆಯಲ್ಲಿಯೇ ನಡೆಯುತ್ತಲೇ ಬಂದಿದೆ. ಭಾಷೆಯ ಅಧ್ಯಯನ ಸಾಹಿತ್ಯ ಅಧ್ಯಯನಕ್ಕಿಂತ ಬೇರೆ. ಅದಕ್ಕೆ ಇಂದು ಪ್ರತ್ಯೇಕವಾದ ಕ್ಷೇತ್ರವಿದೆ. ಸಾಹಿತ್ಯ ಅಧ್ಯಯನವೇ ಭಾಷೆಯ ಅಧ್ಯಯನವಲ್ಲ ಹಾಗೆಯೇ ಭಾಷೆ ಅಧ್ಯಯನ ಸಾಹಿತ್ಯ ಅಧ್ಯಯನವಲ್ಲ ಭಾಷಾ ವಿಜ್ಞಾನಿ ಸಾಹಿತಿಯಲ್ಲ ಸಾಹಿತಿ ಭಾಷಾ ವಿಜ್ಞಾನಿಯಲ್ಲ. ಭಾಷೆಯ ವಿವಿಧ ಅಂಶಗಳನ್ನು ಸಾಹಿತ್ಯದ ಸಹಾಯದಿಂದ ವಿವೇಚಿಸಲಾಗುತ್ತಿತ್ತು. ಭಾಷಾ ವಿಜ್ಞಾನದಲ್ಲಿ ಆಡು ಭಾಷೆ ಮತ್ತು ಸಾಹಿತ್ಯಿಕ ಭಾಷೆ ಎರಡು ಕುರಿತು ವಿವೇಚಿಸಲಾಗುತ್ತದೆ. ಸಾಹಿತ್ಯ ಅಧ್ಯಯನದಲ್ಲಿ ಭಾಷೆಯು ಗೌಣ. ಭಾಷೆ ಅಧ್ಯಯನದಲ್ಲಿ ಸಾಹಿತ್ಯ ಗೌಣ. ಜಗತ್ತಿನ ಎಲ್ಲಾ ಭಾಷೆಗಳ ಸಾಹಿತ್ಯದಲ್ಲಿಯೂ ಇದೇ ಪರಿಸ್ಥಿತಿ. ಲಿಖಿತ ಸಾಹಿತ್ಯದಲ್ಲಿ ಪದ್ಯ, ಗದ್ಯ, ಕತೆ, ಕಾದಂಬರಿ, ನಾಟಕ, ಪ್ರಬಂಧ ಮುಂತಾದ ಪುರಾಣಗಳು ಕಂಡು ಬಂದರೆ ಜಾನಪದ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳು ಕಂಡು ಬರುತ್ತವೆ. ಈ ಸಾಹಿತ್ಯದ ಪ್ರಕಾರಗಳು ಭಾಷೆಯಿಂದ ಭಾಷೆಗೆ ಬೇರೆಬೇರೆಯಾಗಿ ಸಾಹಿತ್ಯದಂತೆಯೇ ಮೌಖಿಕವಾಗಿಯೇ ಬಂದಂತಹದ್ದಾಗಿದೆ. ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನಾಟಕ, ನೃತ್ಯ ಮುಂತಾದ ಕಲೆಗಳಂತೆ ಸಾಹಿತ್ಯವೂ ಒಂದು ಕಲೆ. ಇವೆಲ್ಲವೂ ಕಲಾ ಮಾಧ್ಯಮಗಳೇ. ಈ ಬೇರೆ ಬೇರೆ ಮಾಧ್ಯಮಗಳಲ್ಲಿ ಸಾಹಿತ್ಯ ವಿಶಿಷ್ಟವಾದದು. ಇವುಗಳ ಅಭಿವ್ಯಕ್ತಿಗೆ ಭಾಷೆಯೇ ಬಹು ಮುಖ್ಯ ಮಾಧ್ಯಮ, ಈ ಎಲ್ಲಾ ಕಲಾಮಾಧ್ಯಮದಲ್ಲಿ ಭಾಷೆ ಒಂದೇ ರೀತಿಯಲ್ಲಿಲ್ಲ. ಕಲಾ ಮಾಧ್ಯಮದಲ್ಲಿ ಬಳಸುವ ಭಾಷೆಗೂ ದಿನ ನಿತ್ಯಾ ಬಳಸುವ ಭಾಷೆಗೂ ವ್ಯತ್ಯಾಸವಿದ್ದೆ ಇರುತ್ತದೆ. ಲಿಖಿತ ಸಾಹಿತ್ಯದಲ್ಲಿ ಬಳಕೆಯಾಗಿರುವ ಭಾಷೆಯನ್ನೇ ಕೆಲವರು ಸಾಹಿತ್ಯಿಕ ಭಾಷೆ ಎನ್ನುವರು. ಸಾಹಿತ್ಯದಲ್ಲಿ ಬಳಕೆಯಾಗಿರುವ ಭಾಷೆ ಆಡು ಭಾಷೆಗಿಂತ ಬೇರೆ. ಭಾಷೆಯನ್ನು ಆಡುವವರು ಒಂದೇ ರೀತಿಯಲ್ಲಿ ಆಡುವುದಿಲ್ಲ. ಅದು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ಸ್ಥಳದಿಂದ ಸ್ಥಳಕ್ಕೆ ಬೇರೆ ಬೇರೆಯಾಗಿ ಕಂಡು ಬರುವುದು. ವ್ಯಕ್ತಿ ದಿನನಿತ್ಯ ವ್ಯವಹಾರದಲ್ಲಿ ತನ್ನಭಾವನೆಗಳನ್ನು ಇನ್ನೊಬ್ಬರಿಗೆ ತಿಳಿಸುವಾಗ ಭಾಷೆ ಮಹತ್ವದ್ದಾಗುತ್ತದೆ. ಸಾಹಿತ್ಯವೂ ಎಲ್ಲಾ ಭಾಷೆಯಲ್ಲಿಯೂ ಒಂದೇ ರೀತಿಯಲ್ಲಿರುವುದಿಲ್ಲ. ಅದು ಭಾಷೆಯಿಂದ ಭಾಷೆಗೆ ಬೇರೆಯಾಗಿರುತ್ತದೆ. ಭಾಷೆಯ ಅಂತರಿಕ ರಚನೆ ಭಾಷೆಯಿಂದ ಭಾಷೆಗೆ ಒಂದೇ ಆಗಿರುವುದಿಲ್ಲ. ಇವು ಭಾಷೆಯಿಂದ ಭಾಷೆಗೆ ಬಿನ್ನ ಭಿನ್ನವಾಗಿರುವ ಕಾರಣದಿಂದಲೇ ಒಂದು ಭಾಷೆಯಲ್ಲಿ ದೊರೆಯುವ ಸಾಹಿತ್ಯ, ಇನ್ನೊಂದು ಭಾಷೆಗೆ ಅಷ್ಟೊಂದು ಸುಲಭವಾಗಿ ಬದಲಾಯಿಸಲು ಸಾಧ್ಯವಾಗುತ್ತಿಲ್ಲ. ಭಾಷಾಂತರದಲ್ಲಿ ಭಾಷೆ ಯಾವುದೇ ಆಗಿದ್ದರೂ ಇನ್ನೊಂದು ಭಾಷೆಯಲ್ಲಿರುವ ಮೂಲವನ್ನು ಅಷ್ಟೇ ಸಮರ್ಥ ಹಾಗೂ ಸಮರ್ಪಕವಾಗಿ ಮತ್ತೊಂದು ಭಾಷೆಗೆ ತರುವುದು ತುಂಬಾ ಅವಶ್ಯಕ. ಅದು ಸಾದ್ಯವಾಗದಿದ್ದರೆ ಅಂತಹ ಭಾಷಾಂತರದಿಂದ ಹೆಚ್ಚು ಪ್ರಯೋಜನ ನಿರೀಕ್ಷಿಸಿದ ಮಟ್ಟದಲ್ಲಿ ಆಗುವುದಿಲ್ಲ. ಜಾನಪದ ಸಾಹಿತ್ಯ ಜನರ ಬಾಯಿಯಿಂದ ಬಾಯಿಗೆ ಹರಿದು ಬರುವಂತದ್ದೂ. ಈ ಸಾಹಿತ್ಯ ಜನರ ಬಾಯಿಯಿಂದ ಬಾಯಿಗೆ ಹರಿದು ಬರುವಂತದ್ದೂ. ಈ ಸಾಹಿತ್ಯ ಬಲ್ಲ ಸಾಕಷ್ಟು ಜನರು ಇದ್ದಾರೆ. ಮಾತ್ರ ಅದರ ಉಳಿವು, ಒಳ್ಳೆಯ ಲಿಖಿತ ಸಾಹಿತ್ಯವಾದರೆ ಅದು ಮುಂದಿನ ಜನಾಂಗಕ್ಕೂ ಒದಗುವುದು. ಜಾನಪದ ಸಾಹಿತ್ಯವನ್ನು ಸಂಗ್ರಹಿಸಿ ಅದನ್ನು ಕಾಪಾಡುವ

ಕಾರ್ಯ ಇತ್ತೀಚೆಗೆ ಆರಂಭವಾಗಿದೆ. ಆಡು ಭಾಷೆಯಲ್ಲಿ ತಲಾತಲಾಂತರಗಳಿಂದ ಉಳಿಸಿಕೊಂಡು ಬಂದಿರುವ ಜಾನಪದ ಸಾಹಿತ್ಯವನ್ನು ಯಥಾವತ್ತಾಗಿ ಬರಹಕ್ಕೆ ತಂದು ಕಾಪಾಡುವುದು ಅತ್ಯಗತ್ಯ.

ಭಾಷೆಯಲ್ಲಿ ಉಂಟಾಗಿರುವ ಭಾಷಿಕ ಬದಲಾವಣೆ ಸಾಹಿತ್ಯದ ಮೇಲೆ ಸಾಕಷ್ಟು ಪರಿಣಾಮವನ್ನುಂಟು ಮಾಡಬಲ್ಲದು. ಭಾಷೆ ಬದಲಾದಂತೆಲ್ಲಾ ಸಾಹಿತ್ಯಿಕ ವಿವಿಧ ಅಂಶಗಳು ಅವುಗಳ ವಿಶಿಷ್ಟ ಶೈಲಿಗಳು ಬದಲಾಗುತ್ತವೆ. ಜಾನಪದ ಸಾಹಿತ್ಯದಲ್ಲಿ ಇದು ಸ್ಪಷ್ಟವಾಗಿ ಗೋಚರವಾಗುವುದು. ಲಿಖಿತ ಸಾಹಿತ್ಯದಲ್ಲಿ ಸಾಂಪ್ರದಾಯಕವಾಗಿ ಬಳಕೆಯಲ್ಲಿರುವ ಶೈಲಿಗಳು ಆ ಭಾಷೆಯಲ್ಲಿ ಅನುಸರಿಸಿ ಬದಲಾಗಬಹುದು. ಸಾಹಿತ್ಯದಲ್ಲಿ ಸಾಹಿತಿಯ ಪ್ರತಿಭೆ ಎಷ್ಟೇ ಮುಖ್ಯವಾಗಿದ್ದರೂ ಅವನ ಭಾಷೆ ಕಡೆಗಣಿಸುವಂತಿಲ್ಲ. ಸಾಹಿತ್ಯ ಮತ್ತು ಭಾಷೆ ಒಂದನ್ನೊಂದು ಅವಲಂಬಿಸಿವೆ. ಭಾಷೆ ಮತ್ತು ಸಾಹಿತ್ಯಗಳ ಸಂಬಂಧ ಎಷ್ಟೇ ನಿಕಟವಾಗಿ ಕಂಡು ಬಂದರೂ ಭಾಷೆಯೇ ಸಾಹಿತ್ಯ ಎನ್ನಿಸಿಕೊಳ್ಳುವುದಿಲ್ಲ. ಇವು ಬೇರೆ ಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದ ಅಧ್ಯಯನ ವಿಚಾರಗಳಿವೆ.

ಭಾರತ ದೇಶ ಬಹು ಭಾಷೆಗಳ ದೇಶ. ಸುಮಾರು ಒಂದು ಸಾವಿರದ ಎಂಟು ನೂರಕ್ಕೂ ಹೆಚ್ಚು ಭಾಷೆಗಳು ಇಲ್ಲಿ ಬಳಕೆಯಲ್ಲಿವೆ. ಇವುಗಳ ಜೊತೆಗೆ ಬೇರೆ ಬೇರೆ ಭಾಷೆಗಳು ಭಾರತದಲ್ಲಿ ಇಲ್ಲದೆ ಇಲ್ಲ. ಬೇರೆ ಬೇರೆ ಜನಾಂಗ, ಜಾತಿ, ಸಮಾಜ, ಸಂಸ್ಕೃತಿ, ಧರ್ಮ ಇತ್ಯಾದಿಗೆ ಸಂಬಂಧಿಸಿದ ಜನರರಿದ್ದು ಭಾರತದಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಒಂದಲ್ಲಾ ಒಂದು ಭಾಷೆಯನ್ನು ಮಾತನಾಡಲು, ಬೇರೆಯವರೊಡನೆ ಸಂಪರ್ಕ ಬೆಳೆಸಿಕೊಳ್ಳಲು ಬಳಸುತ್ತಾನೆ. ಅದು ಅವನಿಗೆ ಮಾತೃಭಾಷೆ ಎನ್ನಿಸಿಕೊಳ್ಳುತ್ತದೆ. ಕರ್ನಾಟಕದಲ್ಲಿ ಕನ್ನಡ ಮಾತೃಭಾಷೆಯಾದರೆ ಉಳಿದ ಭಾಷೆಗಳು ಪರ ಭಾಷೆಗಳಾಗಿರುತ್ತವೆ. ಅದೇ ರೀತಿ ಆಂಧ್ರದಲ್ಲಿ ತೆಲುಗು ಭಾಷೆಯು ಮಾತೃಭಾಷೆಯಾಗಿ ಉಳಿದ ಭಾಷೆಗಳು.  ಬೇರೆ ಭಾಷೆಗಳಾಗುತ್ತವೆ. ಅದೇ ರೀತಿ, ತಮಿಳು ನಾಡಿನಲ್ಲಿ ತಮಿಳು ಮಹಾರಾಷ್ಟ್ರದಲ್ಲಿ ಮರಾಠಿ, ಗುಜರಾತ್‌ನಲ್ಲಿ ಗುಜರಾತಿ, ಹೀಗೆ ಭಾಷಾವಾರು ರಾಜ್ಯಗಳನ್ನಾಗಿ ಭಾರತವು ಮಾಡಿದೆ. ಆಯಾ ರಾಜ್ಯದಲ್ಲಿ ಆಡುವ ಭಾಷೆ ಮಾತೃಭಾಷೆ ಎಂದು ಕರೆಸಿಕೊಳ್ಳುತ್ತವೆ. ಕೆಲವು ಪ್ರಾಂತ್ಯಗಳಿಗೆ ತಕ್ಕಂತೆಯೂ ಭಾಷೆಯಲ್ಲಿ ಬದಲಾವಣೆ ಕಾಣುತ್ತೇವೆ. ಕೆಲವು ಪ್ರಾಂತಗಳಿಗೆ ತಕ್ಕಂತೆ ಮಾತೃಭಾಷೆ ವಿಭಜಿತವಾಗುತ್ತದೆ. ರಾಜ್ಯದ ಗಡಿ ಭಾಗಗಳಲ್ಲಿ ವಾಸಿಸುವ ಜನರ ಮೇಲೆ ಭಾಷೆಯು ತನ್ನದೇ ಆದ ಪ್ರಭಾವ ಹೀರುತ್ತವೆ. ಉದಾ:- ಚಿತ್ರದುರ್ಗ ಆಂಧ್ರದ ಗಡಿಭಾಗದಲ್ಲಿ ಜನರು ಇತ್ತ ಕನ್ನಡವನ್ನು ಆಂಧ್ರದವರು ಮಾತನಾಡಿದರೆ ತೆಲುಗನ್ನು ಕನ್ನಡದ ಅನೇಕ ಕುಟುಂಬಗಳು ಮಾತನಾಡುತ್ತವೆ. ಅದೇ ರೀತಿ ಮಹಾರಾಷ್ಟ್ರದ ಗಡಿಭಾಗವಾಗಿರುವ ಬೆಳಗುರಿನಲ್ಲಿ ಕನ್ನಡಕ್ಕಿಂತ ಹೆಚ್ಚಾಗಿ ಮರಾಠಿ ಪ್ರಭಾವಿತರಾಗಿದ್ದಾರೆ. ಬೆಂಗಳೂರು ಮತ್ತು ಮೈಸೂರಿನಲ್ಲಿ ತೆಲುಗು ಭಾಷೆಯ ಪ್ರಭಾವ ಹೆಚ್ಚಿದೆ.

ಇಂದು ಭಾಷೆಯು ವ್ಯಕ್ತಿಗೆ ಬೇರೊಬ್ಬನ ಜೊತೆ ಸಂಬಂಧ ಬೆಳೆಸಲು ಭಾವನೆಗಳನ್ನು ಹಂಚಿಕೊಳ್ಳಲು ಬಹಳ ಮುಖ್ಯವಾಗಿದೆ. ಇಂದು ಪ್ರಾಂತೀಯ ಅಥವಾ ರಾಜ್ಯ ಭಾಷೆಯನ್ನು ಮಾತೃಭಾಷೆ ಎಂದು ಕಲಿತರೆ ಇಂಗ್ಲಿಷನ್ನು ಪಾಶ್ಚಿಮಾತ್ಯ ಭಾಷೆಯನ್ನಾಗಿ ಹಾಗೂ ಹಿಂದಿಯನ್ನು ರಾಷ್ಟ್ರ ಭಾಷೆಯಾಗಿ ಕಲಿಯಲಾಗುತ್ತಿದೆ.

ಅಂದರೆ ವಿದ್ಯಾರ್ಥಿಗಳು ಅಧ್ಯಯನದಲ್ಲಿ ಈ ೩ ಭಾಷೆಗಳ್ನು ಕಲಿಯ ಬೇಕಾಗಿರುತ್ತದೆ. ಇಷ್ಟೇ ಅಲ್ಲದೆ ಬುಡಕಟ್ಟು ಜನಾಂಗದಲ್ಲಿ ಅವರದೇ ಆದ ಪ್ರತ್ಯೇಕ ಭಾಷೆಯನ್ನು ಕಾಣುತ್ತೇವೆ ಅದು ಅವರಿಗೆ ಮಾತೃಭಾಷೆ ಎನ್ನಿಸಿಕೊಳ್ಳುತ್ತದೆ.

ಇಂದು ಪ್ರತಿ ವಿದ್ಯಾರ್ಥಿಯೂ ಮೂರು ಭಾಷೆಗಳ ಜ್ಞಾನವನ್ನು ಪಡೆಯಬೇಕಾಗಿದೆ.

**ವಾಣಿಜ್ಯ ಭಾಷೆ**

ವಾಣಿಜ್ಯ ಭಾಷೆಯು ಅನೇಕ ಭಾಷೆಗಳ ಮಿಶ್ರಣದಿಂದ ಸಿದ್ಧವಾಗಿರಬಹುದು. ಇಂತಹ ಮಿಶ್ರಭಾಷೆಗಳಿಂದ ವ್ಯಾಪಾರವು ಸುಗಮವಾಗಿ ನಡೆಯುತ್ತದೆ. ಉದಾಹರಣೆಗೆ:- ಮುಂಬಾಯಿ ಮಾರುಕಟ್ಟೆಯಲ್ಲಿ ಗುಜರಾತಿ, ಮರಾಠಿ, ಹಿಂದಿ ರಾಜಾಸ್ತಾನಿ ಮುಂತಾದ ಭಾಷೆಗಳ ಮಿಶ್ರಣದ ಭಾಷೆಯನ್ನು ಬಳಸುವರು. ಕಲ್ಕತ್ತದ ಮಾರುಕಟ್ಟೆಯಲ್ಲಿ ಹಿಂದಿ, ಬಂಗಾಳಿ, ಅಸ್ಸಾಮಿ ಭಾಷೆಗಳಿಂದ ಸಿದ್ಧವಾದ ಮಿಶ್ರ ಭಾಷೆಯನ್ನು ಬಳಸುವರು. ಹಾಗೆಯೇ ಮದರಾಸಿನಲ್ಲಿ ತಮಿಳು, ಕನ್ನಡ, ತೆಲುಗು, ಹಿಂದಿ, ಉರ್ದು, ಮುಂತಾದ ಭಾಷೆಗಳು ಒಂದು ಪ್ರದೇಶಕ್ಕೂ ಇನ್ನೊಂದು ಪ್ರದೇಶಕ್ಕೂ ಬೇರೆ ಬೇರೆಯಾಗಿರುತ್ತದೆ. ಉದಾಹರಣೆಗೆ ಕಲಕತ್ತಾದ, ಮಾರ್ಕೆಟ್ಟಿನ ಹಿಂದಿ ಭಾಷೆಗೂ ಮುಂಬಾಯಿ ಪೇಟೆಯ ಹಿಂದಿ ಭಾಷೆಗೂ ಬಹಳಷ್ಟು ವ್ಯತ್ಯಾಸ ಕಂಡು ಬರುವುದು. ಕಾರಣವೇನೆಂದರೆ ನೆರೆಹೊರೆಯ ಭಾಷೆಗಳ ಪ್ರಭಾವ ಇದರ ಮೇಲಿರುವುದೇ ಆಗಿದೆ.

ಸಜ್ಜನ ಗಾಣಿಗರು ಸಹ ವಿವಿಧ ಭಾಷೆಗಳನ್ನು ಕಲಿತಿದ್ದಾರೆ. ಕಾರಣ ಎಣ್ಣೆ ವ್ಯಾಪಾರಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋದಾಗ ಅಲ್ಲಿ ವಾಸಿಸುವ ಗ್ರಾಹಕರ ಪ್ರಭಾವವು ಸಜ್ಜನ ಗಾಣಿಗರ ಮೇಲೆ ಆಗಿರುವುದನ್ನು ಕಾಣುತ್ತೇವೆ. ಇದರಿಂದ ವ್ಯಾಪಾರ ಮಾಡುವ ಸಂದರ್ಭಗಳಿಂದಾಗಿ ಗ್ರಾಹಕರ ಭಾಷೆಯು ವ್ಯಾಪಾರಸ್ಥರ ಮೇಲೆ ಪ್ರಭಾವ ಬೀರಿದ್ದರಿಂದ ಅದಕ್ಕೆ ಪ್ರಭಾವಿತರಾಗಿ ಹಾಗೂ ವ್ಯಾಪಾರದಲ್ಲಿ ಉತ್ತಮ ಲಾಭ ಪಡೆಯಲು ಅನಿವಾರ್ಯವಾಗಿ ತಮ್ಮ ಗ್ರಾಹಕರ ಭಾಷೆಯನ್ನು ಕಲಿಯಬೇಕಾಯಿತು.

ಇಂದು ಆಧುನಿಕ ದಿನಮಾನಗಳಲ್ಲಿ ಸಜ್ಜನ ಗಾಣಿಗರು ಆಧುನಿಕತೆಗೆ ತಕ್ಕಂತೆ ದೊಡ್ಡದೊಡ್ಡ ಎಣ್ಣೆ ಮಿಲ್‌ಗಳಿಂದ ಎಣ್ಣೆಯನ್ನು ತೆಗೆದು ಹೊರ ರಾಜ್ಯಗಳಿಗೆ ಎಣ್ಣೆ ವ್ಯಾಪಾರ ಮಾಡುತ್ತಿರುವುದರಿಂದ ಅಲ್ಲಿನ ಭಾಷೆಯೂ ಸಜ್ಜನ ಗಾಣಿಗರ ಮೇಲಾಗಿದೆ. ಉದಾ:- ಕರ್ನಾಟಕದ ಚಳ್ಳಕೆರೆಯಿಂದ ಎಣ್ಣೆಯನ್ನು ಆಂಧ್ರಕ್ಕೆ ಕಳಿಸುತ್ತಿರುವುದರಿಂದ ಆಂಧ್ರದ ಪ್ರಭಾವದಿಂದಾಗುವ ಭಾಷೆ ಮಾತನಾಡುತ್ತಾರೆ.

**ಭಾಷಾ ಪರಿವರ್ತನೆಗಳು**

ಭಾರತ ದೇಶವನ್ನು ಭಾಷೆಯ ಆಧಾರದ ಮೇಲೆ ವಿಂಗಡಿಸಲಾಗಿದೆ. ಉದಾ:- ಕನ್ನಡ ಮಾತನಾಡುವವರನ್ನು ಕರ್ನಾಟಕದವರೆಂದು ಕರೆಯಲಾಗಿದೆ. ರಾಜ್ಯಗಳೆಲ್ಲವೂ ಭಾಷೆಯ ಆಧಾರದ ಮೇಲೆ ರಚಿತವಾದವುಗಳಾಗಿವೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕ್‌ಗಳಲ್ಲಿ ಕನ್ನಡದ ಜೊತೆಗೆ ಹೆಚ್ಚಾಗಿ ತೆಲುಗನ್ನು ಮಾತನಾಡುತ್ತಾರೆ. ಇದಕ್ಕೆ ಕಾರಣವೆಂದರೆ ಆಂಧ್ರದ ಗಡಿಭಾಗವು ಮೊಳಕಾಲ್ಮೂರು ಮತ್ತು

ಚಳ್ಳಕೆರೆ ತಾಲ್ಲೂಕುಗಳಿಗೆ ಹೊಂದಿಕೊಂಡಿರುವುದರಿಂದ ಆಂಧ್ರದ ಪ್ರಭಾವವು ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಮತ್ತು ಚಳ್ಳಕೆರೆಯ ಮೇಲೆ ಆಗಿದೆ. ಅದೇ ರೀತಿ ಬೆಳಗಾಂ ಮಹಾರಾಷ್ಟ್ರ ಗಡಿ ಭಾಗದಲ್ಲಿರುವುದರಿಂದ ಬೆಳಗಾಂನಲ್ಲಿ ಹೆಚ್ಚಾಗಿ ಕನ್ನಡಕ್ಕಿಂತ ಮರಾಠಿ ಭಾಷೆಯನ್ನು ಹೆಚ್ಚು ಮಾತನಾಡುತ್ತಾರೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಮೊಳಕಾಲ್ಮೂರು ಸಜ್ಜನ ಗಾಣಿಗರ ಜೊತೆಗೆ ಕೆಲವು ಆದಿವಾಸಿ ಅಥವಾ ಬುಡಕಟ್ಟು ಸಮುದಾಯಗಳು ವಾಸಿಸುತ್ತಿರುವುದರಿಂದ ಬುಡಕಟ್ಟು ಜನರ ಪ್ರಭಾವಕ್ಕೆ ಸಜ್ಜನ ಗಾಣಿಗರು ಬೆಳಗಾಗಿದ್ದೂ ಇವರು ಕನ್ನಡ ಮತ್ತು ತೆಲುಗು ಎರಡು ಭಾಷೆಯಲ್ಲಿ ನಿರರ್ಗಳವಾಗಿ (ದೋಷವಿಲ್ಲದೆ) ಮಾತನಾಡುತ್ತಾರೆ. ಇನ್ನುಳಿದಂತೆ ಚಿತ್ರದುರ್ಗ, ಹೊಳಲ್ಕೆರೆ, ಹೊಸದುರ್ಗ ಈ ಗಾಣಿಗರಲ್ಲಿ ಕನ್ನಡ ಭಾಷೆಯು ಹೆಚ್ಚು ಪ್ರಭಾವ ಬೀರಿದೆ. ಒಟ್ಟಿನಲ್ಲಿ ಇವರಲ್ಲಿ ಭಾಷೆಯಲ್ಲಿ ಚಲನೆಯಾಗಿದೆ.

**೬.೨. ಸಾಹಿತ್ಯ**

ಸಾಹಿತ್ಯದ ಮೂಲಕ ಒಂದು ಸಮುದಾಯದ ಜೀವನ ವಿಧಾನವನ್ನು ಅರಿಯಬಹುದಾಗಿದೆ. ಸಾಹಿತ್ಯ ಎನ್ನುವುದು ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡ ಬದುಕಿನ ವ್ಯಾಖ್ಯಾನವೇ ಆಗಿದೆ, ಸಾಹಿತ್ಯಕ್ಕೂ ನಾವು ಬದುಕುವ ಪರಿಸರಕ್ಕೂ ಒಂದು ಬಗೆಯ ಸಂಬಂಧ ಇದ್ದೇ ಇರುತ್ತದೆ. ಸಮಾಜದಲ್ಲಿ ಸಂಭವಿಸುವ ಘಟನೆಗಳೇ ಸಾಹಿತ್ಯದ ಮುಖ್ಯ ಆಕರ. ಸಾಹಿತ್ಯ ಸಮಾಜದ ಪ್ರತಿನಿಧೀಕರಣದ ಕನ್ನಡಿಯಾಗಿದೆ. ಹಾಗಾಗಿ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಚಿತ್ರಣಕ್ಕೂ ಮತ್ತು ವಾಸ್ತವಿಕ ಸಮಾಜದ ಸ್ವರೂಪಕ್ಕೂ ಸಾಮ್ಯತೆಗಳಿರುವುದು ಕಂಡುಬರುತ್ತದೆ. ಕಾರಣ ಸಾಹಿತ್ಯ ಎಂಬುದು ಸಮಾಜವನ್ನು ಹೊರತುಪಡಿಸಿದ ಸಂಗತಿ ಏನಲ್ಲ, ಹಾಗಾಗಿ ಸಾಹಿತ್ಯದ ಮೂಲಕ ಸಾಮಾಜಿಕ ವಾಸ್ತವಿಕತೆಯನ್ನು ಅರಿಯಬಹುದಾಗಿದೆ.

ಜನರ ಸಾಂಪ್ರದಾಯಿಕ ಮೌಲ್ಯಗಳನ್ನು ಕೊಂಡೊಯ್ಯುವ ವಾಹಕವಾದ ಸಾಹಿತ್ಯಿಕ ಆಕರಗಳ ಆಧಾರದ ಮೇಲೆ ಸಜ್ಜನ ಗಾಣಿಗರ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡುತ್ತ ಅವರ ಜೀವನ ವಿಧಾನದ ಕೆಲವು ಒಳನೋಟಗಳನ್ನು ನೋಡುವ ಪ್ರಯತ್ನ ಇದಾಗಿದೆ.

ಸಾಹಿತ್ಯವನ್ನು ಶಿಷ್ಟ ಅಥವಾ ಜನಪದ ಎಂದು ವಿಭಾಗಿಸಿಕೊಂಡು ಬಂದ ಕ್ರಮ ನಮ್ಮಲ್ಲಿ ರೂಢಿಯಲ್ಲಿದೆ. ಈ ವಿಭಾಗೀಕರಣಗಳು ಏನೇ ಇದ್ದರೂ ಅಂತಿಮವಾಗಿ ಸಾಹಿತ್ಯ ಸಾಮಾಜಿಕ ರಚನೆಯೇ ಆಗಿದೆ. ಹಾಗಾಗಿ ಮೇಲೆ ಚರ್ಚಿಸಿದ ವಿಷಯಗಳೆಲ್ಲ ಶಿಷ್ಟ ಸಾಹಿತ್ಯಕ್ಕೂ, ಮೌಖಿಕ ಸಾಹಿತ್ಯಕ್ಕೂ ಅನ್ವಯಿಸುವಂತ ವಿಚಾರಗಳೇ ಆಗಿವೆ. ಈ ಅಧ್ಯಯನವನ್ನು ಜಾನಪದಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿರುವ ಕಾರಣ ಮೌಖಿಕ ಸಾಹಿತ್ಯದ ಕಡೆಗೆ ಮಾತ್ರ ಗಮನ ಹರಿಸಲಾಗಿದೆ. ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಜಾನಪದ ಸಾಹಿತ್ಯ ಸಂಗ್ರಹದ ಕೆಲಸ ಸಾಕಷ್ಟಾಗಿದೆ. ಆದರೆ ಆ ಸಂಗ್ರಹಿತ ಪಠ್ಯಗಳನ್ನು ವಿಶ್ಲೇಷಿಸುವ ಅಥವಾ ನಿರ್ವಚಿಸುವ ಪ್ರಯತ್ನಗಳು ನಡೆದಿವೆಯಾದರೂ ತುಂಬಾ ವಿರಳ. ಅಕಾಡೆಮಿಕ್ ವಲಯದಲ್ಲಿ ಲಿಖಿತ ಆಕರಗಳಿಗೆ ದೊರೆತ ಆದ್ಯತೆ ಅಥವಾ ಮಾನ್ಯತೆಗಳು ಮೌಖಿಕ ಆಕರಗಳಿಗೆ ದೊರೆತಿಲ್ಲ. ಆದರೆ ಇತ್ತೀಚೆಗೆ ಮೌಖಿಕ ಆಕರಗಳು ಕೂಡ ಸಂಸ್ಕೃತಿಯ ವಾಹಕಗಳು ಎಂಬ ಸತ್ಯವನ್ನು ಮನಗಂಡಿರುವುದರಿಂದ ಯಾವುದೇ ಸಮುದಾಯದ ಸಂಸ್ಕೃತಿಯ ವಿಸ್ಮೃತಿಗಳನ್ನು

ಕಟ್ಟಿಕೊಡುವ ಸಂದರ್ಭದಲ್ಲಿ ಮೌಖಿಕ ಆಕರಗಳು ಮುಖ್ಯವೆನಿಸತೊಡಗಿವೆ. ಸಜ್ಜನಗಾಣಿಗರ ಸಾಹಿತ್ಯವನ್ನು ಪರಿಶೀಲಿಸುವ ಮುನ್ನ ಜನಪದ ಸಾಹಿತ್ಯವನ್ನು ಕುರಿತು ಒಂದಿಷ್ಟು ತಿಳಿಯೋಣ.

ಮೌಖಿಕ ಸಾಹಿತ್ಯ ಅಥವಾ ಜನಪದ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಜಾನಪದದ ಒಂದು ಪ್ರಕಾರ. ಜನಪದರಿಂದ ಮೌಖಿಕ ರೂಪದಲ್ಲಿ ರಚನೆಗೊಂಡ ಪ್ರಕಟಿತ ಅಥವಾ ಅಪ್ರಕಟಿತ ರೂಪದಲ್ಲಿರುವ ಸಾಹಿತ್ಯವು ಗಾದೆ, ಗೀತೆ, ಒಗಟು, ಒಡಪು, ಲಾವಣಿ, ಖಂಡಕಾವ್ಯ, ಐತಿಹ್ಯ, ಪುರಾಣ ಹೀಗೆ ಮುಂತಾದ ರೂಪದಲ್ಲಿರುತ್ತದೆ. ಜನಪದ ಸಾಹಿತ್ಯ ಎಂಬುದು ಜನರ ನಿತ್ಯ ಜೀವನದ ನೋವು ನಲಿವಿನ ಸಂಗತಿಗಳನ್ನು ದಾಖಲಿಸಿಕೊಂಡ ಆಕರವೇ ಆಗಿದೆ. ಈ ಕುರಿತು ಅನೇಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದುಂಟು. ಹಾಗಾಗಿ ವಿದ್ವಾಂಸರ ವಲಯದಲ್ಲಿ ಜನಪದ ಸಾಹಿತ್ಯ ಕುರಿತಂತೆ ಇರುವ ವಿಚಾರಗಳನ್ನು ತಿಳಿಯಬಹುದು.

''ಜನಪದ ಸಾಹಿತ್ಯವೆಂದರೆ ಕೇವಲ ಹಾಡಲ್ಲ. ಅದರಲ್ಲಿ ದೇವರ ಧ್ಯಾನ, ಭಕ್ತಿ ಚಿಂತನೆಯಷ್ಟೇ ಇರುವುದಿಲ್ಲ. ಧಾರ್ಮಿಕ ಆಚರಣೆ, ನಡೆ, ನುಡಿ, ಕಲೆ, ಸಾಹಿತ್ಯ, ಸಂಗೀತಗಳಲ್ಲದೆ ಅದು ಒಂದು ಜನಾಂಗದ ಸಮಗ್ರ ಜೀವನದ ಜೀವಂತ ಚಿತ್ರಣವಾಗಿದೆ. ಪ್ರತ್ಯೇಕವಾಗಿ ಮನಸ್ಸಿನಲ್ಲಿ ಮೂಡಿ ನಿಲ್ಲಬಲ್ಲ ಚಿತ್ರಣವಾಗಿದೆ. ಕರುಳ ತಂತಿಯನ್ನು ಮೀಟಬಲ್ಲ ನಾದ ಮಾಧುರ್ಯ ಅದರಲ್ಲಿ ಅಡಕವಾಗಿದೆ ಜನ ಸಾಮಾನ್ಯರ ಅಂತರಾಳದಿಂದ ಹೊರ-ಹೊಮ್ಮುವ ಸಹಜ ಚಿತ್ರಣಕ್ಕೆ ಹಿಡಿದ ಕನ್ನಡಿಯಾಗಿದೆ. (ಡಾ ಅರ್ಜುನ ಗೊಳಸಂಗಿ, ೨೦೦೦:೧) ಎಂದಿದ್ದಾರೆ.

ಜನಪದ ಸಾಹಿತ್ಯ ನಮ್ಮ ಬದುಕಿನ ಜೊತೆಗೆ ಹುಟ್ಟು ಪಡೆದಂತಹದ್ದು, ಬದುಕು ಬೇರೆ ಈ ಸಾಹಿತ್ಯ ಬೇರೆ ಅಲ್ಲ, ಬದುಕಿನ ಜೊತೆಗೆ ಸೃಷ್ಠಿಗೊಳ್ಳುವ ಮಾನವ ಬದುಕನ್ನೇ ದಾಖಲಿಸುವ ಕೆಲಸ ಈ ಸಾಹಿತ್ಯ ಮಾಡುತ್ತದೆ. ಹೀಗೆ ಬದುಕಿನ ಅಂಗವಾಗಿ ಬದುಕನ್ನು ದಾಖಲಿಸುವ ಕೆಲಸ ಮಾಡುವ ಇದು ಮಾನವ ಬದುಕಿನ ಬಹುದೊಡ್ಡ ಸಾಂಸ್ಕೃತಿಕ ಕೊಡುಗೆಯೇ ಆಗಿದೆ (ಡಾ.ವೀರಣ್ಣ ದಂಡೆ, ೨೦೦೧: ೯೭) ಎಂದಿದ್ದಾರೆ. ಅಲ್ಲದೆ ಅವರು ಮುಂದುವರೆದು ಮಾನವ ಬದುಕಿನ ಬಹುಮುಖ್ಯ ಶೋಧಗಳಲ್ಲಿ ಒಂದಾಗಿರುವ ಜನಪದ ಸಾಹಿತ್ಯಕ್ಕೆ ಸಹಜವಾಗಿಯೇ ಒಂದು ಖಚಿತವಾದ ಸಾಂಸ್ಕೃತಿಕ ದೃಷ್ಟಿ ಇರಲು ಸಾಧ್ಯವಿದೆ. ಬದುಕಿನ ಜೊತೆಗೆ ಬೆರೆತುಕೊಂಡ ಈ ಸಾಹಿತ್ಯದ ದೃಷ್ಠಿಯನ್ನು ನಿಯಂತ್ರಿಸುವುದು ಸಹಜವಾಗಿಯೇ ಮಾನವ ಬದುಕೆ ಆಗಿರುತ್ತದೆ. ನಮ್ಮ ಬದುಕು ಎನಿದೆಯೋ ಬದುಕು ಏನನ್ನು ಗ್ರಹಿಸಲು ಸಾಧ್ಯವೋ ಅದನ್ನೇ ಜನಪದ ಸಾಹಿತ್ಯ ಗ್ರಹಿಸಿಕೊಳ್ಳಲು ಸಾಧ್ಯ (ಡಾ.ವೀರಣ್ಣ ದಂಡೆ, ೨೦೦೧, ೯೭) ಎಂದಿದ್ದಾರೆ.

ಶಿಷ್ಟ ಸಾಹಿತ್ಯದಂತೆ ಜನಪದ ಸಾಹಿತ್ಯವು ಚಾರಿತ್ರಿಕ ಉತ್ಪಾದನೆಯಾಗಿದೆ. ಮಹಿಳಾ ಜನಪದ ಸಾಹಿತ್ಯವು ನಿರ್ಧಿಷ್ಟವಲ್ಲದಿದ್ದರೂ ಸ್ಥೂಲವಾಗಿ ಚಾರಿತ್ರಿಕ ಸನ್ನಿವೇಶಗಳನ್ನು ಸಾಮಾಜಿಕ ನಂಬಿಕೆ ಆಚರಣೆಗಳ ಮೂಲಕ ಕಟ್ಟಿಕೊಡುತ್ತದೆ. ಜನಪದ ಸಾಹಿತ್ಯಕ್ಕೆ ಸಂವಹನಾ ಸ್ವರೂಪವಿದೆ ಅದು ತಾನು ರೂಪುಗೊಂಡ ಹಾಗೂ ರೂಪುಗೊಳ್ಳುತ್ತಿರುವ ಸಾಂಸ್ಕೃತಿಕ ಪರಿಸರವನ್ನು ವಿವರಿಸುತ್ತದೆ. ಜನಸಾಮಾನ್ಯರ ಸಂಸ್ಕೃತಿಯ ವಾಹಕವಾದ ಜನಪದ ಸಾಹಿತ್ಯವು ಮಹಿಳೆಯರನ್ನು ಹಾಗೂ ಅವರ ಬದುಕನ್ನು ಹೇಗೆ ಪ್ರತಿನಿಧಿಕರಿಸಿದೆ ಎನ್ನುವುದನ್ನು ವಿಶ್ಲೇಷಿಸುವ ಜರೂರಿದೆ (ಡಾ.ಶೈಲಜ ಹಿರೇಮಠ, ೨೦೦೬:೩೯೩) ಎಂದಿದ್ದಾರೆ.

''ಜನಪದ ಸಂಸ್ಕೃತಿಯ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದ ಸಾಹಿತ್ಯ ಬಹುಮುಖ್ಯವಾದದ್ದು. ಜಗತ್ತಿನ ಬಹುತೇಕ ಎಲ್ಲಾ ಅನಕ್ಷರಸ್ಥ ಜನಸಮುದಾಯಗಳ ಹಾಗೂ ಶೋಷಿತ ಜನರ ಅನಿಸಿಕೆಗಳನ್ನು ವ್ಯಕ್ತ ಪಡಿಸುವುದಕ್ಕೆ ಇರುವ ಏಕೈಕ ಮಾರ್ಗವೆಂದರೆ ಕಂಠಸ್ಥ ಸ್ವರೂಪದಲ್ಲಿ ಹರಿದು ಬರುವ ಜನಪದ ಸಾಹಿತ್ಯವೇ ಆಗಿದೆ. ಈ ಸಾಹಿತ್ಯದ ಸೃಷ್ಠಿಯಲ್ಲಿ ಪುರುಷರಂತೆಯೇ ಸ್ತ್ರೀಯರೂ ಸಹ ತಲೆ ತಲೆಮಾರುಗಳಿಂದಲೂ ಸಮಾನವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ಅನಕ್ಷರತೆ ಅಥವಾ ಪುರುಷ ಪ್ರಧಾನ ಸಮಾಜದ ಪ್ರಾಬಲ್ಯದ ಕಾರಣವಾಗಿ ಬಹುತೇಕ ಹಿನ್ನೆಲೆಯಲ್ಲಿಯೇ ಉಳಿದ ಸ್ತ್ರೀ ಸಂವೇದನೆಗಳನ್ನು ತಿಳಿದುಕೊಳ್ಳಲು ಜನಪದ ಸಾಹಿತ್ಯ ವಿಶ್ವಾಸಾರ್ಹ ಮಾಹಿತಿಯ ಆಕರ (ಡಾ.ಕೆ.ಆರ್.ಸಂಧ್ಯಾರೆಡ್ಡಿ, ೨೦೦೦:೧) ಎಂದು ಅಭಿಪ್ರಾಯಿಸಿದ್ದಾರೆ.

ಜನಪದ ಸಾಹಿತ್ಯ ಎಲ್ಲಿಂದಲೋ ಉದ್ಭವಿಸಿದ್ದಲ್ಲ. ಜನಪದರು ತಮ್ಮ ಬದುಕಿನಲ್ಲಿ ಕಂಡುಂಡ ಅನುಭವವನ್ನು ಹಾಡಾಗಿಸಿದ್ದಾರೆ, ಕಥೆಯಾಗಿಸಿದ್ದಾರೆ, ಪುರಾಣವಾಗಿಸಿದ್ದಾರೆ ಇತ್ಯಾದಿ. ಹಾಗಾಗಿ ಜನಸಾಮಾನ್ಯರ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದ ಸಾಹಿತ್ಯ ಪ್ರಮುಖವಾದದ್ದು. ಶಿಷ್ಟ ಸಾಹಿತ್ಯಕ್ಕಿಂತಲೂ ಭಿನ್ನವಾಗಿದ್ದು, ಈ ಮೌಖಿಕ ಸಾಹಿತ್ಯದಲ್ಲಿ ಧ್ವನಿ ಇಲ್ಲದವರ ಧ್ವನಿಯ ಆಲಾಪನೆಗಳು ಕೇಳಿಬರುತ್ತವೆ. ಬಹುಪಾಲು ಅನಕ್ಷರಸ್ಥ ಜನರು ದುಡಿಯುವ ಜನರು ಹೇಳಿಕೊಂಡ ಸಾಹಿತ್ಯವೇ ಮೌಖಿಕ ಸಾಹಿತ್ಯವಾಗಿದ್ದರಿಂದ ಅವರೇ ಹೇಳಿಕೊಂಡ ಈ ಸಾಹಿತ್ಯದಲ್ಲಿ ಅವರ ಬದುಕಿನ ಹತ್ತು ಹಲವು ಸಂಗತಿಗಳು ಹಾಸುಹೊಕ್ಕಾಗಿರುವುದರಿಂದ ಜನ ಸಾಮಾನ್ಯರ ಬದುಕಿನ ಬಗೆಗೆ ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ಮೌಖಿಕ ಆಕರಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ. ಹಾಗಾಗಿ ಒಂದು ಸಮುದಾಯದ ಅಧ್ಯಯನದಲ್ಲಿ ಅವರ ಮೌಖಿಕ ಸಾಹಿತ್ಯದ ಪಾತ್ರವು ಮುಖ್ಯವಾಗುತ್ತದೆ. ಸಜ್ಜನ ಗಾಣಿಗರ ಸಾಹಿತ್ಯದಲ್ಲಿ ಬರುವ ಹಾಡುಗಳು, ಗಾದೆಗಳು, ಒಡಪು, ಕಥೆ, ಒಗಟುಗಳನ್ನು ಇಲ್ಲಿ ಅವಲೋಕಿಸುತ್ತ ಅವರ ಜೀವನ ಚಿತ್ರಣವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಕಥೆಗಳು**

ಕಥೆಗಳನ್ನು ಹೇಳುವ ಅಥವಾ ಕೇಳುವ ಕ್ರಿಯೆಯು ಮಾನವ ಜೀವನದಲ್ಲಿ ತುಂಬಾ ಹಿಂದಿನಿಂದಲೂ ನಡೆದುಬಂದಿದೆ. ಇದು ಎಲ್ಲಾ ಕಾಲಗಳ, ಎಲ್ಲಾ ಎಲ್ಲೆಗಳ ಸಂಗತಿ, ನಾಟಿ, ಕಳೆ ಕೀಳುವಾಗ, ಕೊಯ್ಲು, ಕಣದ ಕೆಲಸ ಮುಂತಾದ ದುಡಿಮೆಯ ಸಂದರ್ಭದಲ್ಲಿ ಹೇಳಲಾಗುವ ಕಥೆಯು ದಣಿವನ್ನು ಮರೆಸಿ ಮನಸ್ಸಿಗೆ ಗೆಲುವು ತರುತ್ತದೆ. ಆರಾಮದ ವೇಳೆಯಲ್ಲಿ ಮಕ್ಕಳನ್ನು ಮಲಗಿಸುವಾಗ ಸೆಕೆ ಉಕ್ಕುವ ಬೇಸಿಗೆಯ ರಾತ್ರಿಯಲ್ಲಿ ಕಥೆಗಳನ್ನು ಕೇಳುವ ಕಿವಿಗಳು ಹೆಚ್ಚಿನ ಕುತೂಹಲದಿಂದ ಕೂಡಿರುತ್ತವೆ.

ಕಥೆಗಳ ಗರ್ಭದಲ್ಲಿ ಕಾಲಕಾಲದ ನಂಬಿಕೆಗಳು, ಧಾರ್ಮಿಕ, ಸಾಮಾಜಿಕ ಮೌಲ್ಯಗಳು, ಪರಂಪರೆಯಲ್ಲಿನ ವಿವಿಧ ಪದ್ಧತಿಗಳು ತುಂಬಿಕೊಂಡಿವೆ. ಇಲ್ಲಿ ಮನರಂಜನೆ ಅಥವಾ ನೀತಿಬೋಧೆ ಕಂಡುಬಂದರೂ ಆಳದಲ್ಲಿ ಅನ್ಯಾಯದ ವಿರುದ್ಧದ ಪ್ರತಿಭಟನೆಯ ಸಣ್ಣ ಎಳೆಗಳಿವೆ. ಅದನ್ನು ಮೀರಿ ಮೌಢ್ಯವನ್ನು ಸದಾ ರಕ್ಷಿಸಿ ಹೊತ್ತುತರುತ್ತಿರುವ ಕುರುಡು ನಿಷ್ಠೆ ಕೂಡ ಇದೆ. ಎಲ್ಲಕ್ಕೂ ಹೆಚ್ಚಾಗಿ ಎಲ್ಲೆ ಕಾಣದ ನಿರಾಸೆಯ ನಡುವೆ

ಬೇರೆ ಕಡೆಗೆ ಮುಖವನ್ನು ಹುದುಗಿಸಿ ಸುಖದ ದಿನಗಳನ್ನು ಕಲ್ಪಿಸಿಕೊಂಡು ನೆಮ್ಮದಿ ತಂದುಕೊಳ್ಳುವ ಕನಸುಗಾರಿಕೆ ಕಾಣುತ್ತದೆ.

ಜನಪದರಂತೂ ಕಥೆಗಾಗಿಯೇ ತಮ್ಮ ಇಡೀ ಬದುಕನ್ನು ಧಾರೆಯೆರೆದಿದ್ದಾರೆ. ಬದುಕಿನ ಎಲ್ಲವನ್ನು ಕಥೆಯಾಗಿಸಿದ್ದಾರೆ. ಆದ್ದರಿಂದ ಜನಪದ ಕಥೆಗಳು ಒಳಗೊಳ್ಳುವ ವಸ್ತು ವಿಷಯಗಳಲ್ಲಿ ಇವು ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುವ ಪ್ರಾಚೀನ ಮಾನವನ ಬದುಕು, ಬಯಕೆ, ಆಸೆ, ನಿರಾಸೆ, ಆಕಾಂಕ್ಷೆ, ನಂಬಿಕೆ, ಸಂಪ್ರದಾಯ, ಆಚರಣೆ, ನೋವು, ದ್ವೇಷ, ಅಸೂಯೆ, ಪ್ರೀತಿ, ಪ್ರೇಮ, ಕಾಮ, ಕನಸು, ಕಲ್ಪನೆ ಇತ್ಯಾದಿ ಮಾನವ ಗುಣಾವಗುಣಗಳನ್ನು ಹೊತ್ತು ಬಂದ ಒಂದು ಸಾಹಿತ್ಯ ಪ್ರಕಾರ. ಅದನ್ನೊಂದು ಕಲೆಯಾಗಿ ಅಭಿವ್ಯಕ್ತಿಸಿದ್ದು ನಮ್ಮ ಜನಪದರ ವಿಶಿಷ್ಟ ಪ್ರತಿಭೆ. ಅಲ್ಲಿ ಭಾಷೆ ಇದೆ, ಸಾಹಿತ್ಯ ಇದೆ, ಮನಃಶಾಸ್ತ್ರದ ಅಂಶಗಳಿವೆ, ಮಾನವ ಶಾಸ್ತ್ರದ ಗುಣಗಳಿವೆ. ಚಾರಿತ್ರಿಕ ಹಾಗೂ ಸಾಮಾಜಿಕ ಘಟನೆಗಳ ಚಿತ್ರಗಳಿವೆ, ಮಾನವ ಹಿರಿಕಿರಿತನದ ಗುಣಾವಗುಣಗಳಿವೆ. ಲೌಕಿಕ ಅಲೌಕಿಕ ಮನುಷ್ಯ ಅತಿಮಾನುಷ ಅಷ್ಟೆ ಏಕೆ ಕಾಲ್ಪನಿಕ ಜಗತ್ತಿನ ವಿಸ್ಮಯಕಾರಿ ಅಂಶಗಳು ಪ್ರಾಣಿ ಪ್ರಪಂಚದ ಅದ್ಬುತ ಸಂಗತಿಗಳು ಅಲ್ಲಿ ದಟ್ಟೈಸಿವೆ.

ಈ ಜನಪದ ಕಥೆಗಳ ಉದ್ದೇಶವೇ ಒಂದು ರೀತಿಯಲ್ಲಿ ವೈಶಿಷ್ಟ್ಯ ಪೂರ್ಣ ರಂಜನೆ. ಬೋಧನೆ, ಪ್ರಚೋದನೆಗಳ ಸ್ವರೂಪವನ್ನು ಗಮನಿಸಿದಾಗ ಇವುಗಳು ಪರಿಣಾಮಕಾರಿಯಾದ ಅಂಶಗಳನ್ನು ಹೊರಚೆಲ್ಲುತ್ತವೆ. ಅವುಗಳ ಮನರಂಜನೆಯಷ್ಟೇ, ಬೋಧನಾತ್ಮಕ ಕಥೆಯೂ ಮುಖ್ಯವಾದುವೇ. ಮಾನವ ಹೇಗೆ ಬದುಕಬೇಕು ಲೋಕದಲ್ಲಿ ಅವನು ಹೇಗೆ ವರ್ತಿಸಬೇಕು ಎಂಬ ರೀತಿಯ ಶಿಕ್ಷಣಾತ್ಮಕ ದೃಷ್ಟಿ ಅಲ್ಲಿನ ಬಹುಪಾಲು ಕಥೆಗಳಲ್ಲಿ ಕಂಡುಬರುತ್ತವೆ. ಅವು ಆಯಾ ಸಮುದಾಯದ ಸಂಸ್ಕೃತಿಯನ್ನು ರೂಪಿಸುವ ನೀತಿ ಪ್ರಧಾನ ಕಥೆಗಳೆಂದರೂ ಆಗುತ್ತದೆ.

ಒಂದು ಸಮುದಾಯವನ್ನು ಅರ್ಥಮಾಡಿಕೊಳ್ಳುವಲ್ಲಿ ಆ ಸಮುದಾಯದ ಜನಜೀವನ ವಿಧಾನ ಎಲ್ಲವನ್ನು ಆ ಸಮುದಾಯದಲ್ಲಿ ಪ್ರಚಲಿತವಿರುವ ಕಥೆಗಳು ನಿರ್ದೇಶಿಸುತ್ತವೆ. ಒಂದು ಕಥೆಯ ಗರ್ಭವನ್ನು ಹೊಕ್ಕು ನೋಡಿದಾಗ ಅಲ್ಲಿ ಒಂದು ಸಮುದಾಯದ ನಂಬಿಕೆ ಆಚರಣೆ, ನ್ಯಾಯ, ನೀತಿ, ಧರ್ಮ ಜೀವನ ಮೌಲ್ಯ ಹೀಗೆ ಹತ್ತು ಹಲವು ಸುಳಿವು, ಹೊಳಹುಗಳು ಕಾಣಸಿಗುತ್ತವೆ. ಕಥೆಗಳನ್ನು ಸಂಕೀರ್ಣ ಕಥೆಗಳು, ಸರಳ ಕಥೆಗಳು, ಅತಿಮಾನುಷ ಕಥೆಗಳು, ಮಾಂತ್ರಿಕ ಕಥೆಗಳು ಬುದ್ಧಿವಂತ ಕಥೆಗಳು, ವಿನೋದದ ಕಥೆಗಳು ಪ್ರಾಣಿ ಕಥೆಗಳು ಹಾಗೂ ವಾಸ್ತವಿಕ ಕಥೆಗಳೆಂದು ವಿಭಜಿಸಿದ್ದಾರೆ. ಆಯಾ ಪ್ರಕಾರದ ಪ್ರಮುಖವಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ವಿಶ್ಲೇಷಣೆ ಮಾಡಲಾಗುತ್ತದೆ. ಸಜ್ಜನ ಗಾಣಿಗರಲ್ಲಿ ಈ ಬಗೆಯ ಕಥೆಗಳು ಹೆಚ್ಚಾಗಿ ಲಭ್ಯವಾಗದ ಕಾರಣ ಹಾಗೂ ಇವರಲ್ಲಿ ಕಥೆಗಳು ಕಡಿಮೆ ಇರುವ ಕಾರಣಗಳಿಂದ ಲಭ್ಯವಿರುವ ಕಥೆಗಳನ್ನು ಇಲ್ಲಿ ವಿವರಿಸಲಾಗಿದೆ. ಸಜ್ಜನ ಗಾಣಿಗ ಸಮುದಾಯದಲ್ಲಿ ಪ್ರಚಲಿತವಿರುವ ಕಥೆಗಳು ಈ ತೆರನಾಗಿವೆ. ಉದಾಹರಣೆಗಾಗಿ ನಾಲ್ಕು ಕಥೆಗಳನ್ನು ಕೊಡಲಾಗಿದೆ,

**ಕೋತಿ ಮತ್ತು ಮೊಸಳೆಯ ಕಥೆ**

ಒಂದು ನದಿಯ ದಂಡೆಯ ಮೇಲೆ ಒಂದು ಕೋತಿಗೂ ಹಾಗೂ ಮೊಸಳೆಗೂ ಸ್ನೇಹ ಬೆಳೆಯುತ್ತದೆ. ಕೋತಿಯು ನದಿಯ ದಂಡೆಯಲ್ಲಿ ಇರುವ ನೇರಳೆ ಮರವನ್ನೇರಿ ಒಳ್ಳೆಯ ನೇರಳೆ ಹಣ್ಣುಗಳನ್ನು ಮೊಸಳೆಗೆ ತಿನ್ನಲೂ ಹಾಕುತ್ತಿರುತ್ತದೆ ಮೊಸಳೆಯು ತಾನು ತಿಂದು ಉಳಿದ ಹಣ್ಣುಗಳನ್ನು ತನ್ನ ಹೆಂಡತಿಗೆ ತೆಗೆದುಕೊಂಡು ಹೋಗಿಕೊಡುತ್ತಿರುತ್ತದೆ. ಹೆಂಡತಿ ಮೊಸಳೆಯು ಹಣ್ಣುಗಳನ್ನು ತಿಂದು ತುಂಬಾ ರುಚಿಯಾಗಿರುವುದರಿಂದ ಇದನ್ನು ಕೊಟ್ಟ ಕೋತಿಯ ಹೃದಯ ಎಷ್ಟು ಚೆನ್ನಾಗಿರಬೇಕು. ಎಂದು ಹೆಂಡತಿ ಮೊಸಳೆ ಗಂಡು ಮೊಸಳೆಯ ಹತ್ತಿರ ನನಗೆ ಕೋತಿಯ ಹೃದಯ ತಿನ್ನುವ ಆಶೆಯಾಗಿದೆ ಹೇಗಾದರೂ ಮಾಡಿ ಕೋತಿಯನ್ನು ಕರೆತರಿ ಎಂದು ತಿಳಿಸುತ್ತಾಳೆ. ಆದರೆ ಗಂಡು ಮೊಸಳೆಗೆ ಕೋತಿಯು ತನಗೆ ಒಳ್ಳೆಯ ಸ್ನೇಹಿತ ಇತ್ತ ಹೆಂಡತಿಯ ಮಾತನ್ನು ಮೀರುವಹಾಗಿಲ್ಲ. ಕಡೆಗೆ ಗಂಡು ಮೊಸಳೆ ಕೋತಿಯ ಹತ್ತಿರ ಹೋಗಿ ನನ್ನ ಹೆಂಡತಿ ನಿನ್ನನ್ನು ಕೇಳಿದಳು. ನಿನ್ನನ್ನು ಕರೆದುಕೊಂಡು ಬರುವಂತೆಯೂ ತಿಳಿಸಿದ್ದಾಳೆ. ದಯವಿಟ್ಟು ಬರುವೆಯಾ ಎಂದು ಗಂಡು ಮೊಸಳೆ ಕೋತಿಯಲ್ಲಿ ಮೊರೆ ಇಟ್ಟಿತು. ಅಗಲಿ ಬರುತ್ತೇನೆ ಎಂದು ಕೋತಿಯು ಗಂಡು ಮೊಸಳೆಯ ಬೆನ್ನ ಮೇಲೆ ಕುಳಿತು ಎರಡು ಹೆಣ್ಣು ಮೊಸಳೆಯ ಹತ್ತಿರ ಹೋಗಹತ್ತಿದವು. ಹೋಗುವಾಗ ದಾರಿ ಮಧ್ಯದಲ್ಲಿ ತನ್ನ ಹೆಂಡತಿ ಮೊಸಳೆಯ ಆಶೆಯನ್ನು ವ್ಯಕ್ತಪಡಿಸಿ ಆಕೆಗೆ ನಿನ್ನ ಹೃದಯ ತಿನ್ನುವ ಆಶೆಯಂತೆ ಎಂದಾಗ ಕೋತಿಯು ಜಾಣತನದಿಂದ ಅಯ್ಯೋ ಏನು ಮಾಡುವುದು ನನ್ನ ಹೃದಯವನ್ನು ನೇರಳೆ ಮರದಲ್ಲಿ ಇಟ್ಟು ಬಂದಿದ್ದೇನೆ ಪುನಃ ಹೋಗಿ ಅದನ್ನು ತರೋಣ ಎಂದು ಗಂಡು ಮೊಸಳೆಯಲ್ಲಿ ಹೇಳಿದಾಗ ಗಂಡು ಮೊಸಳೆ ಹಾಗೂ ಕೋತಿ ಪುನಃ ವಾಪಸ್ ನೇರಳೆ ಮರದ ಹತ್ತಿರ ಬರುತ್ತವೆ. ಬಂದ ತಕ್ಷಣ ಕೋತಿಯು ಚಂಗನೆ ಮರದ ಮೇಲೆ ಹಾರಿ ಹೋಗಿ ಕುಳಿತು, ಗಂಡು ಮೊಸಳೆಗೆ ದುಷ್ಟ ಇನ್ನು ಮುಂದೆ ನಿನ್ನ ಸ್ನೇಹ ನನಗೆ ಬೇಡ ಹೋಗು ಎಂದು ತಿಳಿಸುತ್ತದೆ.

''ಈ ಕಥೆಯ ನೀತಿ ಎಂದರೆ ಬುದ್ಧಿವಂತರಿಗೆ ಯಾರು ಮೋಸ ಮಾಡಲು ಸಾಧ್ಯವಿಲ್ಲ'' ಎಂಬುದಾಗಿದೆ.

**ಮೂರು ಜನ ಕುರುಡರ ಕಥೆ**

ಬಹಳ ವರ್ಷಗಳ ಹಿಂದೆ ಒಂದು ಊರಿನ ಧರ್ಮಶಾಲೆಯಲ್ಲಿ ಅನೇಕ ಮಂದಿ ಬಿಕ್ಷುಕರು ವಾಸವಾಗಿದ್ದರು. ಅವರಲ್ಲಿ ಮೂವರು ಕುರುಡರು ಬಹಳ ಆತ್ಮೀಯರಾಗಿದ್ದು, ಆ ಮೂವರು ದಿನಾ ಬೆಳಿಗ್ಗೆದ್ದು ಮೇಲೆ ಓಣಿಗಳಲ್ಲಿ ಸಂಚರಿಸಿ ಎಲ್ಲರ ಮನೆ ಮುಂದೆ ನಿಂತು ''ಅಮ್ಮಾ ತಾಯೀ ಬಿಕ್ಷೆ ನೀಡಿರಿ'' ಎಂದು ಕೇಳಿ ಅವರು ನೀಡಿದ್ದನ್ನೆಲ್ಲಾ ತಮ್ಮ ತಾಟಿನಲ್ಲಿ ತಗೊಂಡು ಬಗಲಿಗೆ ಇರುವ ಜೋಳಿಗೆಯಲ್ಲಿ ಹಾಕಿಕೊಂಡು ಸಾರನ್ನು ಮಾತ್ರ ತಂಬಿಗೆಯಲ್ಲಿ ತುಂಬಿಸಿ ಮಧ್ಯಾಹ್ನದ ವೇಳೆಗೆ ಎಲ್ಲಿಯಾದರೂ ಕೂಡುವ ಬದಲಿಗೆ ತಾವಿರುವ ಧರ್ಮಶಾಲೆಗೇ ಬಂದು ತಾವು ತಂದದ್ದನ್ನು ಮೂವರು ಹಂಚಿಕೊಂಡು ಊಟ ಮಾಡುತ್ತಿದ್ದರು.

ಊಟ ಮುಗಿದ ಮೇಲೆ ಮಲಗಿ ವಿಶ್ರಾಂತಿ ಪಡೆದು ಸಾಯಂಕಾಲದ ವೇಳೆಗೆ ಯಾವುದಾದರೂ ದೇವಸ್ಥಾನದ ಮುಂದೆ ಹೋಗಿ ಅಲ್ಲಿ ಕುಳಿತುಕೊಂಡು ದೇವಸ್ಥಾನಕ್ಕೆ ಹೋಗಿ ಬರುವವರನ್ನು ಅವರಾಡುವ ಮಾತಿನ ಮೇಲೆ

ಕಂಡುಹಿಡಿದು ಬಿಕ್ಷೆ ನೀಡಿರಿ ಎಂದಾಗ ಕೆಲವರು ಹಣವನ್ನು ಅವರ ತಾಟಿನಲ್ಲಿ ಹಾಕುತ್ತಿದ್ದರು. ಹೀಗೆಯೇ ಮೂವರು ಬಿಕ್ಷುಕರು ರಾತ್ರಿ ವೇಳೆ ದೇವಸ್ಥಾನದ ಬಾಗಿಲು ಮುಚ್ಚುವ ತನಕ ಅಲ್ಲಿಯೇ ಕುಳಿತು ದಾನಿಗಳಾದವರು ನೀಡಿದ ಹಣವನ್ನು ತಮ್ಮ ತಾಟಿನಿಂದ ಜೋಳಿಗೆಗೆ ಹಾಕಿಕೊಂಡು ತಾವಿದ್ದ ಧರ್ಮಶಾಲೆಗೆ ಬಂದು ಅಲ್ಲಿಯೇ ಊಟ ಮಾಡಿ ಮಲಗುತ್ತಿದ್ದರು.

ಹೀಗೆ ಸಂಗ್ರಹಿಸಿದ ಹಣವನ್ನು ಕೂಡಿಟ್ಟು ಯಾರಾದರೂ ಬಿಕ್ಷುಕಿಯರು ಮಗುವಿಗೆ ಜನ್ಮವಿತ್ತ ಸಂದರ್ಭದಲ್ಲಿ ಅವರು ಬಿಕ್ಷೆ ಬೇಡಲು ಹೋಗಲಿಕ್ಕೆ ಆಗುವುದಿಲ್ಲವಾದ್ದರಿಂದ ಹಾಗೂ ಜನರು ನೀಡಿದ ತಂಗಳು ಅಡುಗೆಯನ್ನು ಊಟ ಮಾಡಬಾರದೆಂದು ಅವರಿಗೆ ಪೇಟೆಯಿಂದ ಅಕ್ಕಿ, ಎಣ್ಣೆ, ಬೆಣ್ಣೆಯನ್ನು ಖರೀದಿ ಮಾಡಿ ತಂದುಕೊಡುತ್ತಿದ್ದರು. ಒಂದೆರಡು ತಿಂಗಳಲ್ಲಿ ಅವರಿಗೆ ಶಕ್ತಿ ಬಂದು ಜೋಳಿಗೆಯಲ್ಲಿ ಮಗುವನ್ನು ಕೂಡಿಸಿ ಬಗಲಲ್ಲಿ ಇರಿಸಿಕೊಂಡು ಬಿಕ್ಷೆ ಬೇಡಲು ಆರಂಭಿಸುತ್ತಿದ್ದರು.

ಕುರುಡರ ಪೈಕಿ ಒಬ್ಬ ಬಿಕ್ಷುಕ ಕೈಯಲ್ಲಿ ಒಂದು ಕಂದೀಲು ಹಿಡಿದಿದ್ದನು. ಮತ್ತೊಬ್ಬ ಬಡಿಗೆ ಹಿಡಿದಿದ್ದನು ಮೂರನೆಯವ ಕೈಯಲ್ಲಿ ಬಾರಕೋಲು ಹಿಡಿದಿದ್ದ, ಮೂವರೂ ಒಬ್ಬರ ಹಿಂದೊಬ್ಬರು ಇದ್ದರು.

ಹೀಗೆ ಅವರು ತಿರುಗಾಡುವಾಗ ಇವನ್ನೆಲ್ಲಾ ಏಕೆ ಹಿಡಿದಿರುವಿರಿ ಎಂದ ಯಜಮಾನ ಒಬ್ಬರಿಗೆ ಹೀಗೆ ಹೇಳಿದರು. ನೀವು ನಮಗೆ ರಾತ್ರಿ ಡಿಕ್ಕಿ ಹೊಡೆಯಬಾರದು ಎಂದು ಕೈಯಲ್ಲಿ ಕಂದೀಲು ಹಿಡಿದವ ಹೇಳಿದನು. ಮತ್ತೊಬ್ಬ ಕುರುಡನು ನೆಲ ಸಮ ಇದೆಯೇ ತಗ್ಗು ಇದೆಯೋ ನೋಡಲೆಂದು ಕೈಯಲ್ಲಿ ಬಡಿಗೆ ಹಿಡಿದಿರುವೆ ಎಂದು ನಮಗೆ ಕಣ್ಣು ಕಾಣುವುದಿಲ್ಲವೆಂದು ತಿಳಿದು ದಾನಿಗಳು ನೀಡಿದ ಬಿಕ್ಷೆ ಹಣವನ್ನು ಕೆಲವರು ಕಣ್ಣಿದ್ದವರು ಕಳವು ಮಾಡಲು ಬಂದರೆ ಅವರಿಗೆ ಹೊಡೆಯಲು ಬಾರಕೋಲು ಹಿಡಿದಿರುವೆ ಎಂದು ಮೂರನೆಯವ ಹೇಳಿದನು. ಇವರೆಲ್ಲರ ಮಾತುಗಳನ್ನು ಕೇಳಿ ಯಜಮಾನನು ಸಂತೋಷಪಟ್ಟು ಅವರೆಲ್ಲರಿಗೂ ಹಣ ನೀಡಿ ಹೋದನು

**ನೀತಿ: "ಜಗತ್ತನ್ನು ಅರಿಯಲು ಬೇಕಿರುವುದು ಕಣ್ಣಲ್ಲ ಒಳ್ಳೆಯ ಮನಸ್ಸು"**

**ಡುಮ್ಮ ಡುಮ್ಮಿ ಕಥೆ**

ಒಂದೂರಿನಲ್ಲಿ ಒಂದು ಜೋಡಿ ದಂಪತಿಗಳಿದ್ದರು. ಅವರ ಹೆಸರು ಡುಮ್ಮ ಡುಮ್ಮಿ. ಕೂಲಿ ಜೀವನ ಮಾಡಿ ಜೀವನ ನಡೆಸುತ್ತಿದ್ದರು. ಒಂದಾನೊಂದು ದಿನ ಹಬ್ಬ ಮಾಡಬೇಕೆಂದು ನಿರ್ಧಾರ ಮಾಡಿದರು. ಸಂತೆಯಿಂದ ಬೆಲ್ಲ, ಬ್ಯಾಳಿ, ಹಿಟ್ಟು, ಎಣ್ಣೆ ತಂದು ಡುಮ್ಮ ಡುಮ್ಮಿಗೆ ಹೋಳಿಗೆ ಮಾಡೆಂದು ಹೇಳಿ ಕೂಲಿಗೆ ಹೋಗಿ ಬಿಟ್ಟನು. ಡುಮ್ಮಿ ಕಷ್ಟಪಟ್ಟು ಮೂರು ಹೋಳಿಗೆ ಮಾಡುತ್ತಾಳೆ, ಮಾಡ್ತಾ ಮಾಡ್ತಾ ಒಂದು ಕುದ್ದೈತೋ ಕುದ್ದಿಲ್ಲೋ ಎಂದು ಒಂದು ತಿನ್ನುತ್ತಾಳೆ. ಇನ್ನೊಂದು ಬೆಂದೈತೋ ಬೆಂದಿಲ್ಲೋ ಎಂದು ಮತ್ತೊಂದು ತಿನ್ನುತ್ತಾಳೆ. ನನ್ನ ಪಾಲಿನದು ನಾ ಯಾಕೆ ಬಿಡಬೇಕೆಂದು ಅದನ್ನು ತಿನ್ನುತ್ತಾಳೆ. ಬೇಸುಂಡು ಮಲಗುತ್ತಾಳೆ. ಗಂಡ ಕೂಲಿಯಿಂದ ಬಂದು ಹೋಳಿಗೆ ಉಳಿಯದಿರುವುದನ್ನು ಕಂಡು ಹೆಂಡತಿಗೆ ಗದರಿಸಿ ಕೇಳಿದಾಗ ಮೂರು ತಿಂದುದ್ದು ಹೇಳುತ್ತಾಳೆ. ಡುಮ್ಮ ಬೇಸತ್ತು ಚೆನ್ನಾಗಿ ಹೊಡೆದು ಉಪವಾಸ ಮಲಗುತ್ತಾನೆ.

**ಮೂರು ಕೊಡಲಿಗಳ ಕಥೆ**

ಒಂದು ಊರಿನಲ್ಲಿ ಒಬ್ಬ ಕಟ್ಟಿಗೆ ಕಡಿದು ಮಾರಾಟ ಮಾಡುವ ಬಡವನಿದ್ದನು. ಅವನು ದಿನಾಲೂ ಕಟ್ಟಿಗೆ ಕಡಿದು ಜೀವನ ಸಾಗಿಸುತ್ತಿದ್ದನು. ಒಂದು ದಿನ ಕಟ್ಟಿಗೆ ಕಡಿಯುವವ ತನ್ನ ಕೊಡಲಿಯಿಂದ ನದಿಯ ದಡದ ಮೇಲಿರುವ ಮರದ ಕೊಂಬೆಗಳನ್ನು ಕಡಿಯುತ್ತಿರುವಾಗ ಆಯಾ ತಪ್ಪಿ ತನ್ನ ಕೊಡಲಿಯು ನದಿಯಲ್ಲಿ ಬಿದ್ದು ಹೋಯಿತು, ಕಟ್ಟಿಗೆ ಮಾರುವವನಿಗೆ ನದಿಯಿಂದ ಕೊಡಲಿಯನ್ನು ಪಡೆಯುವುದು ಹೇಗೆ ಎಂದು ಚಿಂತಿಸತೊಡಗಿದನು. ಅದೇ ವೇಳೆಗೆ ಗಂಗಾದೇವಿಯು ಅವನಿಗೆ ಪ್ರತ್ಯಕ್ಷಳಾಗಿ ನೀನು ಯಾತಕ್ಕಾಗಿ ಚಿಂತಿಸುತ್ತಿರುವೆ ಎಂದು ಕೇಳಿದಾಗ ಕಟ್ಟಿಗೆ ಕಡಿದು ಮಾರಾಟ ಮಾಡುವವ ದೇವತೆಗೆ ತನ್ನ ಕೊಡಲಿಯು ಕಟ್ಟಿಗೆ ಕಡಿಯುವಾಗ ಕೊಡಲಿ ಆಯತಪ್ಪಿ ನದಿಯಲ್ಲಿ ಬಿದ್ದು ಮುಳುಗಿ ಹೋಗಿದೆ ಆದ್ದರಿಂದ ಕೊಡಲಿ ಇಲ್ಲದೆ ನನ್ನ ಜೀವನ ಸಾಗಿಸುವುದು ಕಷ್ಟ ಎಂದು ತನ್ನ ಸಮಸ್ಯೆಯನ್ನು ದೇವತೆಗೆ ಹೇಳಿಕೊಂಡ. ದೇವತೆಯು ನೀರಿನಲ್ಲಿ ಮುಳುಗಿ ಒಂದು ಚಿನ್ನದ ಕೊಡಲಿ ತಂದು ಕಟ್ಟಿಗೆ ಕಡಿಯುವವನಿಗೆ ಈ ಕೊಡಲಿ ನಿನ್ನದಾ ಎಂದು ಕೇಳಲಾಗಿ ಅವನು ಈ ಕೊಡಲಿ ನನ್ನದಲ್ಲ ಎಂದು ತಿಳಿಸುತ್ತಾನೆ. ಅದೇ ರೀತಿ ದೇವತೆ ಮತ್ತೊಮ್ಮೆ ನೀರಲ್ಲಿ ಮುಳುಗಿ ಬೆಳ್ಳಿಯ ಕೊಡಲಿ ತಂದು ಅವನಿಗೆ ತೋರಿಸಲು ಇದೂ ನನ್ನದಲ್ಲ ಎನ್ನುತ್ತಾನೆ. ನಂತರ ದೇವತೆ ಮೂರನೇ ಬಾರಿ ಮುಳುಗಿ ಕಬ್ಬಿಣದ ಕೊಡಲಿ ತಂದು ತೋರಿಸುತ್ತಾಳೆ. ಈ ಕೊಡಲಿ ನನ್ನದೇ ಎಂದು ತಿಳಿಸುತ್ತಾನೆ. ಕಟ್ಟಿಗೆ ಕಡಿಯುವವನ ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ದೇವತೆಯು ಮೆಚ್ಚಿ ಆ ಮೂರು ಕೊಡಲಿಯನ್ನು ಅವನಿಗೆ ಕೊಟ್ಟು ದೇವತೆಯು ಮಾಯವಾಗುತ್ತಾಳೆ. ಈ ಕೊಡಲಿಗಳಲ್ಲಿ ಕಟ್ಟಿಗೆ ಕಡಿಯುವ ಬಡ ವ್ಯಕ್ತಿಯು ಶ್ರೀಮಂತನಾಗುತ್ತಾನೆ. ಆದರೂ ಕಟ್ಟಿಗೆ ಕಡಿದು ಮಾರಾಟ ಮಾಡುವ ದುಡಿದು ತಿನ್ನುವ ಕಾಯಕವನ್ನು ಮಾತ್ರ ಅವನು ಬಿಡುವುದಿಲ್ಲ.

**ನೀತಿ: ''ನಿಷ್ಠೆ ಅಥವಾ ಪ್ರಾಣಿಕತೆಗೆ ಜಯ''**

**ಐತಿಹ್ಯ ಪುರಾಣ**

ಸಜ್ಜನ ಗಾಣಿಗರು ಕೂಡ ಐತಿಹ್ಯಾ ಪುರಾಣಗಳನ್ನು ಬಲ್ಲವರಾಗಿದ್ದಾರೆ. ಇವರಲ್ಲಿ ಶನಿ ಪುರಾಣದ ಬಗ್ಗೆ ನಂಬಿಕೆ ಇದೆ. ಹಿಂದೆ ವಿಕ್ರಮಾದಿತ್ಯ ಮಹಾರಾಜನಿಗೆ ಶನಿಕಾಟವು ಪ್ರಾರಂಭವಾಗಿ ತನ್ನ ರಾಜ್ಯ ಆಸ್ತಿ-ಪಾಸ್ತಿ ಎಲ್ಲವನ್ನು ಕಳೆದುಕೊಂಡು ನಿರ್ಗತಿಕನಾಗಿ ಕೈ ಕಾಲುಗಳನ್ನು ಕತ್ತರಿಸಿಕೊಂಡು ರಸ್ತೆಯಲ್ಲಿ ಬಿದ್ದಿರಲು, ಅದೇ ಮಾರ್ಗವಾಗಿ ಗಾಣಿಗರ ಕುಟುಂಬವೊಂದು ಗಾಡಿಯಲ್ಲಿ ಬರುತ್ತಿರಲು ಸಜ್ಜನ ಗಾಣಿಗರ ಸೊಸೆಯು ರಾಜನನ್ನು ಗುರುತಿಸಿ ತನ್ನ ಮಾವನಿಗೆ ಇವರನ್ನು ಮನೆಗೆ ಕರೆದುಕೊಂಡು ಹೋಗಿ ಸೇವೆ ಮಾಡೋಣವೆಂದು ತಿಳಿಸಲು ಮಾವನು ಇದಕ್ಕೆ ಒಪ್ಪಿ ಅವನನ್ನು ತಮ್ಮ ಮನೆಗೆ ಕರೆದುಕೊಂಡು ಬರುತ್ತಾರೆ. ನಂತರ ಅವನಿಗೆ ಉತ್ತಮ ಸೇವೆಯನ್ನು ನೀಡಿ ವಿಕ್ರಮಾದಿತ್ಯವನ್ನು ಬದುಕಿಸಿಕೊಳ್ಳುತ್ತಾರೆ.

ಕಡೆಗೆ ಶನಿಕಾಟವು ವಿಕ್ರಮಾದಿತ್ಯ ರಾಜನಿಗೆ ನಿಂತು ಹೋಗಿ ಪುನಃ ಅವನು ಕಳೆದು ಕೊಂಡಿದ್ದ ರಾಜ್ಯವೆಲ್ಲವೂ ಅವನಿಗೆ ಸಿಗುತ್ತದೆ. ಕೈ, ಕಾಲುಗಳು ಮೊದಲಿನಂತಾಗುತ್ತದೆ. ''ಕಡೆಗೆ ಶನಿದೇವನು

ಪ್ರತ್ಯಕ್ಷನಾಗಿ ವಿಕ್ರಮಾದಿತ್ಯನಿಗೆ ಇಷ್ಟು ದಿವಸ ನೀನು ನನ್ನಿಂದ ಬಹಳ ಕಷ್ಟವನ್ನು ಅನುಭವಿಸಿರುವೆ. ಈಗ ವರವನ್ನು ಕೇಳಿಕೋ ಎಂದು ವಿಕ್ರಮಾಧಿತ್ಯನಿಗೆ ಹೇಳಲು, ಗಾಣಿಗರು ನನಗೆ ಬಹಳ ಸೇವೆಯನ್ನು ಮಾಡಿ ನಾನು ಬದುಕುಳಿಯಲು ನೆರವಾಗಿದ್ದಾರೆ. ಆ ಸಮುದಾಯದ ಜನರಿಗೆ ಯಾವುದೇ ರೀತಿಯಲ್ಲಿಯೂ ನೀನು ಕಾಡಬೇಡ ಅಥವಾ ಕಷ್ಟಕೊಡಬೇಡ. ಆ ಸಮುದಾಯದಲ್ಲಿ ನಿನ್ನ ಕೃಪೆಯಿರಲಿ ಎಂದು ವಿಕ್ರಮಾದಿತ್ಯನು ಶನಿದೇವನಲ್ಲಿ ವಿನಂತಿಸಿಕೊಳ್ಳುತ್ತಾನೆ. ಬ್ರಾಹ್ಮಣರು ಶನಿವಾರ ಎಣ್ಣೆ ಕೊಳ್ಳುವುದಿಲ್ಲ. ಇದಕ್ಕೆ ಕಾರಣ ಶನಿಯು ಶನಿವಾರದಂದು ಗಾಣಿಗರ ಮನೆಯಲ್ಲಿರುತ್ತಾನೆ. ಎಂದು ಅವನ ದರುಶನವಾದರೆ ನಮಗೆಲ್ಲಿ ಕಾಟ ಕೊಡುತ್ತಾನೋ ಎಂದು.

**ಶಿಷ್ಟ ಸಾಹಿತ್ಯ**

ಲಿಖಿತ ಅಥವಾ ಬರವಣಿಗೆಯ ರೂಪದಲ್ಲಿರುವ ಸಾಹಿತ್ಯವನ್ನು ಶಿಷ್ಟ ಸಾಹಿತ್ಯ ಎಂದು ಕರೆಯಲಾಗುತ್ತದೆ. ೧೨ ನೇ ಶತಮಾನದಲ್ಲಿ ಶರಣರು ತಮ್ಮ ಅನುಭವಗಳನ್ನು ಚರ್ಚಿಸಿ ಅವುಗಳನ್ನು ವಚನ ಸಾಹಿತ್ಯದ ಮೂಲಕ ಲಿಖಿತವಾಗಿ, ಬರವಣಿಗೆಯ ಶೈಲಿಯಲ್ಲಿ ಅವುಗಳನ್ನು ಹೊರ ತಂದರು. ಆ ಕಾಲದಲ್ಲಿ ಗಾಣದ ಕನ್ನಪ್ಪ ಎಂಬ ಶಿವಶರಣರು ಅನುಭವ ಮಂಟಪದಲ್ಲಿದ್ದರು. ಅದೇ ರೀತಿ ಹಿಂದೆ ಸರ್ವಜ್ಞನ ತ್ರಿಪದಿಗಳಲ್ಲಿ ಲಿಖಿತ ಸಾಹಿತ್ಯವು ಹೊರ ಬಂದಿದೆ. ಗಾಣಿಗರು ಭಾರತದ ವಿಶೇಷತೆ; ಕರ್ನಾಟಕದ ಒಂದು ಪ್ರಮುಖ ಪ್ರಾಚೀನ ಜನಾಂಗ. ಎಣ್ಣೆ ಕಾಳುಗಳಿಂದ ಎಣ್ಣೆ ತೆಗೆದು, ಮಾರಿ ಜೀವನವನ್ನು ನಿರ್ವಹಿಸುತ್ತಿದ್ದರು. ಗಾಣವನ್ನು ತಮ್ಮ ವೃತ್ತಿಯಲ್ಲಿ ಬಳಸಿಕೊಂಡು ಬಂದವರು. ಸಾಮೂಹಿಕವಾಗಿ ಇವರನ್ನು ಬೆಳಕು ಕೊಡುವ ಕುಲದವರೆಂದು ಕರೆಯಲಾಗುತ್ತದೆ. ಆದ್ದರಿಂದ ದೀಪ ಸಂಸ್ಕೃತಿ ತಂದವರು ಗಾಣಿಗರೆಂದು ಹೇಳಬಹುದು.

ಎಳ್ಳು ಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ
ಕಳ್ಳತನವ ಬಲ್ಲ ತಳವಾರ, ಬಣಜಿಗನು
ಎಲ್ಲರನು ಬಲ್ಲ ಸರ್ವಜ್ಞ

ಈ ತ್ರಿಪದಿಯಲ್ಲಿ ಎಳ್ಳಿಗೂ ಗಾಣಕ್ಕೂ ಇರುವ ಸಂಬಂಧದ ಸೂಚನೆ ಇದೆ

ಗಾಣಿಗನು ಈಶ್ವರನ ಕಾಣನೆಂಬುದು ನಿಜ
ಏಕಾಂಕಧರನು ದರೆಗಿಳಿಯಲವನಿಂದ
ಗಾಣವಾಡಿಸುವ ಸರ್ವಜ್ಞ

ಈ ತ್ರಿಪದಿಯಲ್ಲಿ ಹಾಸ್ಯಮಯವಾಗಿ ಶಿವನು ಪ್ರತ್ಯಕ್ಷನಾದರೂ ಸಹ ಅವನಿಂದ ಗಾಣಿಗರು ಗಾಣವಾಡಿಸುವನೆಂದು ತಿಳಿಸಲಾಗಿದೆ.

ಹಾರುವಾಗ ಆಳಾಗಬಾರದು, ಗಾಣಿಗನ ಎತ್ತಾಗಬಾರದು ಎನ್ನುವ ನುಡಿಗಟ್ಟು ಗಾಣಿಗನ ಶ್ರಮಜೀವನದ ಸಂಕೇತವಾಗಿದೆ.

ಗಾಣಿಗನ ಮಹತ್ವವನ್ನು ಈ ಕೆಳಗಿನ ತ್ರಿಪದಿಯಲ್ಲಿ ಮನೋಜ್ಞವಾಗಿ

ಜಾಣ ಜಾಣಗೆ ಲೇಸು, ಕೋಣ ಕೋಣಗೆ ಲೇಸು ಹೇಳಲಾಗಿದೆ.

ನಾಟ್ಯವದು ಲೇಸು ಲೋಕಕ್ಕೆ ಊರೂರಿಗೆ

ಗಾಣಿಗನು ಲೇಸು ಸರ್ವಜ್ಞ,

ಬತ್ತಿ ಎಣ್ಣೆಗಳೆರಡು ಹೊತ್ತಿ ಬೆಳಗುವ ತೆರದಿ

ಸತ್ಯ ನೀತಿಗಳು ಬೆಳಗಿದವು ಜೋಡಗಲೆ

ಕತ್ತಲೀ ಜಗವು ಸರ್ವಜ್ಞ,

ಸತ್ಯ ನೀತಿಗಳು ಬತ್ತಿ ಎಣ್ಣೆಗಳಿದ್ದಂತೆ, ಅವರೆಡೂ ಇದ್ದರೆ ಮಾತ್ರ ಬೆಳಕು ಕಾಣುವುದು. ಎರಡರಲ್ಲಿ ಒಂದು ಅಥವಾ ಎರಡು ಇಲ್ಲವಾದರೆ ಕತ್ತಲೆ ಆವರಿಸುವುದು. ಸತ್ಯ-ನೀತಿಗಳಲ್ಲಿ ಒಂದು ಇಲ್ಲವಾದರೂ ಜಗತ್ತೆ ಕತ್ತಲೆಯಲ್ಲಿ ಮುಳುಗುವುದು. ಸತ್ಯ-ನೀತಿಗಳ ಹಿನ್ನೆಲೆಯಿಟ್ಟುಕೊಂಡು ನಿಷ್ಕಾಮ ಸೇವೆಯಿಂದ ಗುರಿ ಮುಟ್ಟಬೇಕು.

ಚಿತ್ತವಿಲ್ಲದ ಗುಡಿಯ ಸುತ್ತಿದಡೆ ಫಲವೇನು

ಎತ್ತು ಗಾಣವನು ಹೊತ್ತು ತಾ ನಿತ್ಯದಿ

ಸುತ್ತಿ ಬಂದಂತೆ ಸರ್ವಜ್ಞ

ಗಾಣಿಗರ ಧರ್ಮ, ಶ್ರಮಧರ್ಮ, ಎಷ್ಟೇ ಕಷ್ಟದಲ್ಲಿದ್ದರೂ ಅವರು ರಟ್ಟೆ ಮುರಿದು ದುಡಿದೇ ತಮ್ಮ ರೊಟ್ಟಿಯನ್ನು ಸಂಪಾದಿಸಲು ಹವಣಿಸುವರೇ ಹೊರತು ತುಡುಗುಣಿತಕ್ಕೆ ಆಸೆ ಮಾಡಲಾರರು. ಹುಟ್ಟಿ ಬೆಳೆದ ಧರ್ಮವಾವುದೇ ಇರಲಿ. ನಮ್ಮ ಸಾಮೂಹಿಕ ಸಾಮಾಜಿಕ ಜೀವನದಲ್ಲಿ ಶ್ರಮ ಧರ್ಮವೇ ಸಮಾಜದ ಎಲ್ಲ ಸ್ತರಗಳಲ್ಲಿ ಸಾರ್ವತ್ರಿಕವಾಗಬೇಕು. ಆಗ ಆರ್ಥಿಕ ಭದ್ರತೆಯೊಡನೆ ನೈತಿಕ, ಉತ್ಸಾಹವೂ ಸಾಧ್ಯವಾಗುವುದು. ಅದು ಹಾಲ ತೊರೆಗೆ ಬೆಲ್ಲದ ಕೆಸರು.

ವೀರಶೈವ ಸಮಾಜದಲ್ಲಿ ಅನೇಕ ಒಳಪಂಗಡಗಳಿವೆ. ಅವುಗಳಲ್ಲಿ ಗಾಣಿಗರದು ಒಂದು. ೧೨ನೇ ಶತಮಾನದಲ್ಲಿ ಅಣ್ಣ ಬಸವಣ್ಣನವರು ಹಾಗೂ ಇತರೆ ಶಿವಶರಣದಿಂದ ವೀರಶೈವ ಧರ್ಮ ಹುಟ್ಟಿಕೊಂಡಿತು. ಈ ಧರ್ಮದ ಅಡಿಯಲ್ಲಿ ಲಿಂಗ ದೀಕ್ಷೆ ಪಡೆದವರನ್ನೆಲ್ಲಾ ಲಿಂಗಾಯತ ವೀರಶೈವರೆಂದು ಕರೆಯಲಾಯಿತು. ಈ ಧರ್ಮದ ಆಚರಣೆ, ಈ ಧರ್ಮದ ಪರಿಚಯ, ಆಧುನಿಕ ಜಗತ್ತು ಮತ್ತು ಸಮುದಾಯ, ಇವುಗಳನ್ನು ಶಿಷ್ಟ ಸಾಹಿತ್ಯದಿಂದ ತಿಳಿಯಲಾಗಿದೆ.

**ಗಾದೆಗಳು**

ಜನತೆಯ ಅನುಭವದ ಸಂಪತ್ತು ನೆನಪಿಸಲು ಸುಲಭವಾಗುವಂತೆ ಪ್ರಾಸಬದ್ಧವಾದ ಚಿಕ್ಕ ವಾಕ್ಯಗಳಾಗಿ ಗಾದೆಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಜನಪ್ರಿಯವಾದ ಸಾಹಿತ್ಯ ಪ್ರಕಾರಗಳಲ್ಲಿ ಗಾದೆಗಳು ಮುಖ್ಯವಾಗಿ

ಗಮನ ಸೆಳೆಯುತ್ತವೆ. ಒಂದು ಸಮುದಾಯದ ಮನಸ್ಸು ಗಾದೆಗಳಲ್ಲಿ ಅಡಕವಾಗಿರುವುದನ್ನು ಕಾಣಬಹುದು. ಪುರಾಣ, ಚರಿತ್ರೆ, ಸ್ಥಳಗತೆ, ಅನುದಿನದ ಘಟನೆಗಳು, ಕಷ್ಟ ಕೋಟಲೆಗಳು ಮತ್ತು ಆನಂದದ ವಿಶಾಲ ಹಿನ್ನೆಲೆ ಹೊಂದಿರುವ ಗಾದೆಗಳು ಜನತೆಯ ಮನಸ್ಸನ್ನು ಅರ್ಥಮಾಡಿಕೊಳ್ಳಲು ವಿಶೇಷವಾಗಿ ನೆರವಾಗುತ್ತಾ ಬದುಕನ್ನು ತಿದ್ದುವಲ್ಲಿ ರಹಸ್ಯಗಳ  ಬೆನ್ನಟ್ಟಿ ಹೋಗುವಲ್ಲಿ ಇವು ಯಾವಾಗಲೂ ಮುಂದಾಗಿರುತ್ತವೆ.

ಒಂದು ದೇಶದ ನಿಜವಾದ ಬಣ್ಣ ಬದುಕು ಅಲ್ಲಿನ ಗಾದೆಗಳ ಮೂಲಕ ಬಯಲಾಗುತ್ತದೆ. ಜನತೆಯ ಕಳೆದ ದಿನಗಳ ರೋಷ, ಕಿಚ್ಚು, ಮೌಢ್ಯ, ಮಾನಸಿಕ ವಿಕಾರ, ನಗೆ, ನೋವು, ನ್ಯಾಯ, ಅನ್ಯಾಯ ಮೊದಲಾದ ಎಲ್ಲಾ ಸಂಗತಿಗಳ ಮಡು ಈ ಗಾದೆಗಳು, ಇವನ್ನೆಲ್ಲಾ ವಿಂಗಡಿಸಿ ನಿತ್ಯದ ಬದುಕಿಗೆ ಹೇಗೆ ಬಳಸಿಕೊಳ್ಳಬೇಕು ಎನ್ನುವುದು ಮುಖ್ಯ ಸಂಗತಿಯಾಗಬೇಕು. ಹಿಗಾಗಿ ಸಮಾಜ, ಸಾಹಿತ್ಯ ಭಾಷೆ, ಮನಸ್ಸು, ಮಾನವ ಮುಂತಾದ ಬಗೆ ಬಗೆಯ ವಿಷಯಗಳ ಬಗ್ಗೆ ಅಧ್ಯಯನ ನಡೆಸುವವರಿಗೆ, ಗಾದೆಗಳು ಸವಾಲಾಗಿವೆ ಮತ್ತು ಹೆಚ್ಚಿನ ಗುಟ್ಟುಗಳನ್ನು ತಿಳಿಸುತ್ತವೆ.

ಗಾದೆಗಳಿಗೆ ಯಾರ, ಯಾವ ಬಗೆಯ ಹಂಗೂ ಇಲ್ಲ, ಏನು ಹೇಳ ಬೇಕೋ ಅದನ್ನು ಹೇಳಿ ಮುಗಿಸುತ್ತವೆ. ಸ್ವತಹ, ಅನುಭವಿಸಿ ಗೊಂದಲಗಳೊಡನೆ ಬೇಸತ್ತ ಜನತೆಯು ಕೊನೆಗೆ ಕಂಡುಕೊಂಡು ನಿಜವಾದ ಕಿಡಿಗಳು ಈ ಗಾದೆಗಳು.

೧. ತುಂಬಿದ ಕೊಡ ತುಳುಕುವುದಿಲ್ಲ

೨. ದುಡ್ಡೆ ದೊಡ್ಡಪ್ಪ ವಿಧ್ಯೆ ಅದರಪ್ಪ

೩. ಕುಣಿಯಲಾರದವಳಿಗೆ ನೆಲ ಡೊಂಕರಿತೆ

೪. ಊರು ಉಪಕಾರ ಅರಿಯದು, ಹೆಣ ಸಿಂಗಾರ ಅರಿಯದಂತೆ

೫. ಊರು ಹೋಗು ಎನ್ನುತ್ತದೆ. ಕಾಡು ಬಾ ಎನ್ನುತ್ತದೆ

೬. ಅಲ್ಪನಿಗೆ ಐಶ್ವರ್ಯ ಬಂದರೆ ಮಧ್ಯರಾತ್ರಿ ಕೊಡೆ ಹಿಡಿದ

೭. ಅಗಸರ ಕತ್ತೆಯಾಗಬಾರದು. ಗಾಣಗನಿಗೆ ಎತ್ತಾಗಬಾರದು

೮. ಮರ ಮುಪ್ಪಾದರೆ ಹುಳಿ ಮುಪ್ಪಾಗುವುದೆ

೯. ಹೋದೆ ಪೀಶಾಚಿ ಎಂದರೆ ಬಂದೆ ಗಾವಾಕ್ಷಿಯೊಳಗೆ

೧೦. ಹಾಗಲ ಕಾಯಿಗೆ ಬೇವಿನ ಕಾಯಿ ಸಾಕ್ಷಿಯಂತೆ

೧೧. ಕಾಮಾಲೆ ಕಣ್ಣಿಗೆ ಲೋಕವೆಲ್ಲಾ ಹಳದಿ

೧೨. ತಾಯಿಯಂತೆ ಮಗಳು, ನೂಲಿನಂತೆ ಸೀರೆ

೧೩ ಜಾಣರಿಗೆ ಮಾತಿನ ಪೆಟ್ಟು, ದಡ್ಡನಿಗೆ ದೊಣ್ಣೆಯ ಪೆಟ್ಟು

೧೪. ಹೊಲಸು ತಿನ್ನುವ ಎಮ್ಮೆ ಕೋಡು ಕೊಯ್ದರೆ ಬಿಟ್ಟಿತೆ

೧೫. ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ

೧೬. ದೇವರಿದ್ದ ಮನೆ ಸ್ವರ್ಗವಿದ್ದಂತೆ

೧೭. ಬಡವರ ಊಟ ಚಂದ, ಶ್ರೀಮಂತರ ನೋಟ ಚಂದ

೧೮. ಕೈ ಕೆಸರಾದರೆ ಬಾಯಿ ಮೊಸರು

೧೯. ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು

೨೦. ಹಸುವಿನ ಬಣ್ಣ ಕಪ್ಪಾದರೆ ಹಾಲು ಕಪ್ಪಾಗುವುದೆ

೨೧. ಗಂಡ ಹೆಂಡಿರ ಜಗಳ ಉಂಡು ಮಲಗೋ ತನಕ

೨೨. ಗಂಡ ಹೆಂಡತಿ ಜಗಳದಲ್ಲಿಕೂಸು ಬಡವಾಯ್ತು

೨೩. ಹಾಡುತ್ತಾ ಹಾಡುತ್ತಾ ರಾಗ, ಉಗುಳುತ್ತಾ ಉಗುಳುತ್ತಾ ರೋಗ

೨೪. ಶಿವಪೂಜೆಯಲ್ಲಿ ಕರಡಿ ಬಂದ ಹಾಗೆ

೨೫. ಎಣ್ಣೆ ಬಂದಾಗ ಕಣ್ಣು ಮುಚ್ಚಿ ಕೊಳ್ಳುವುದೇ

೨೬. ಸಜ್ಜನರ ಸಂಘ ಹೆಜ್ಜೇನು ಸವಿದಂತೆ

೨೭. ಹೊಟ್ಟೆಗೆ ಹಿಟ್ಟಿಲಾಂದ್ರೆ ಜುಟ್ಟಿಗೆ ಮಲ್ಲಿಗೆ ಹೂವು

೨೮. ಶ್ವಾನದ ಮಲೆಯೊಳಗೆ ಹಾಲಿದ್ದರೂ ಫಲವೇನು

೨೯. ಹಣ್ಣೆಲೆ ಉದುರುವಾಗ ಚಿಗುರೆಲೆ ನಗುವುದು

೩೦. ಗಂಜಿಯ ಕುಡಿದರೂ ಗಂಡನ ಮನೆ ಲೇಸು

೩೧. ಅತ್ತೆಗೊಂದು ಕಾಲ ಸೊಸೆಗೊಂದು ಕಾಲ

೩೨. ಹಂಗಿನ ಅರಮನೆಗಿಂತ ಹುಲ್ಲಿನ ಮನೆ ಲೇಸು

೩೩. ಪುಣ್ಯಕ್ಕೆ ಎಮ್ಮೆ ಕೊಟ್ಟಿದ್ದರೆ ಹಲ್ಲು ಹಿಡಿದು ನೋಡಿದ್ದರಂತೆ

೩೪. ಹುಟ್ಟು ಗುಣ ಸುಟ್ರು ಹೋಗೋದಿಲ್ಲ

೩೫. ಈಚಲ ಮರದ ಕೆಳಗೆ ಕುಳಿತು ಮಜ್ಜಿಗೆ ಕುಡಿದರೂ ಹೆಂಡ ಕುಡಿದಂತೆ

೩೬. ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು

೩೭. ಉಪ್ಪು ತಿಂದ ಮೇಲೆ ನೀರು ಕುಡಿಯಲೇ ಬೇಕು

೩೮. ಬೆಳೆಯುವ ಸಿರಿ ಮೊಳಕೆಯಲ್ಲಿ ನೋಡು

೩೯. ಪುರಾಣ ಹೇಳಲಿಕ್ಕೆ ಬದನೆಕಾಯಿ ತಿನ್ನಲಿಕ್ಕೆ

೪೦. ಬೆಕ್ಕಿಗೆ ಚೆಲ್ಲಾಟ: ಇಲಿಗೆ ಪ್ರಾಣ ಸಂಕಟ

೪೧. ಎರಡು ಕೈ ಕೂಡಿದರೆ ಚಪ್ಪಾಳೆ

೪೨. ಎತ್ತು ಏರಿಗೋದ್ರೆ ಕೋಣ ಕೆರೆಗೆಳಿತು

೪೩. ಮಂಗ ತಾನು ಕೆಡೋದು ಅಲ್ದೆ ವನನೆಲ್ಲಾ ಕೆಡಿಸ್ತು. ಮಂಗನ ಕೈಗೆ ಮಾಣಕ್ಯಕೊಟ್ಟಂತೆ

೪೪. ಉಪ್ಪಿಗಿಂತ ರುಚಿಯಿಲ್ಲ. ತಾಯಿಗಿಂತ ಬಂಧುವಿಲ್ಲ

೪೫. ಹುಟ್ಟುತ್ತಾ ಅಣ್ಣ ತಮ್ಮಂದಿರು, ಬೆಳೆಯುತ್ತಾ ದಾಯಾದಿಗಳು

೪೬. ಕೂಸು ಹುಟ್ಟುವ ಮೊದಲೇ ಕುಲಾಯಿ ಹೊಲಸಿದರಂತೆ

೪೭. ಅಡಿಕೆಗೆ ಹೋದ ಮಾನ ಆನೆ ಕೊಟ್ಟರು ಬಾರದು

೪೮. ಮಾತನಾಡಿದರೆ ಲಿಂಗವು ಮೆಚ್ಚಿ ಅಹುದಹುದೆನ್ನಬೇಕು

೪೯. ಮನೆಯು ಚಿಕ್ಕದಾಗಿರಬೇಕು. ಮನಸ್ಸು ದೊಡ್ಡದಾಗಿರಬೇಕು

೫೦. ಹಾಲು ಕುಡಿದ ಮಕ್ಕಳೇ ಬದುಕುವುದಿಲ್ಲ ಇನ್ನು ವಿಷ ಕುಡಿದ ಮಕ್ಕಳು ಬದುಕುತ್ತವೆಯೇ

**ಒಗಟುಗಳು**

ಒಗಟು ಬುದ್ಧಿವಂತಿಕೆ ಒಡ್ಡುವ ಸವಾಲುಗಳು. ಒಗಟುಗಳು ಅನುಮಾನದ ಮೂಲಕ ಅರ್ಥ ಹುಡುಕಲು ತೊಡಗಿಸುತ್ತವೆ. ಬುದ್ಧಿಗೆ ಕಸರತ್ತನ್ನು ನೀಡುವ ಒಗಟುಗಳು ಮನೋರಂಜನೆಗಾಗಿಯೂ ಜನರು ಇವುಗಳಿಂದ ಆನಂದವನ್ನು ಪಡೆಯುತ್ತಾ ಕಾಲ ಕಳೆಯುವಲ್ಲಿಯೂ ಉಪಯುಕ್ತವಾಗಿವೆ. ಮದುವೆ ಕಾರ್ಯದಲ್ಲಿ ಒಗಟಿನ ಪಾತ್ರವು ಮುಖ್ಯವಾಗಿರುವುದನ್ನು ಗಮನಿಸಬಹುದು.

ಪ್ರಕೃತಿಯಲ್ಲಿ ತಾನು ಕಂಡ ಅನೇಕ ವಸ್ತುಗಳನ್ನು ಬೇರೊಂದು ಕ್ರಿಯೆಯ ಮೂಲಕ ಚಮತ್ಕಾರ ಪೂರ್ವಕವಾಗಿ ಸುಂದರವಾದ ಸಾಲುಗಳಲ್ಲಿ ಹೇಳುವ ಬೆಡಗು ಒಗಟುಗಳಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಒಗಟುಗಳು ಲೆಕ್ಕಕ್ಕೆ ಸಂಬಂಧಿಸಿದ, ಬುದ್ಧಿಶಕ್ತಿಯನ್ನು ಪರೀಕ್ಷಿಸುವ ಸಾಧನಗಳಾಗಿವೆ.

ಒಗಟುಗಳ ಮಹತ್ವವನ್ನು ಕುರಿತು ಹೇಳುವುದಾದರೆ ಅವುಗಳನ್ನು ರೂಢಿಸಿ ಬಳಸುವ ಜನತೆಯ ಯುಗಧರ್ಮ, ನಂಬಿಕೆ, ಆಸಕ್ತಿ, ಹಾಗೂ ಸಂಸ್ಕೃತಿಯನ್ನು ಅವಲಂಬಿಸಿರುತ್ತದೆ. ಒಂದು ಸಮುದಾಯವನ್ನು ಕುರಿತು ತಿಳಿಯುವಲ್ಲಿ ಆ ಸಮುದಾಯದ ಒಗಟುಗಳು ಪ್ರಾಮುಖ್ಯತೆಯನ್ನು ಪಡೆಯುತ್ತವೆ ಎಂದು ಹೇಳಬಹುದು.

೧. ಬಿಳಿ ಅಂಗಿ
ಕರಿ ಟೋಪಿ
**ಉತ್ತರ:** ಬೆಂಕಿ ಕಡ್ಡಿ

೨. ಮರದೊಳಗೆ ಮರಹುಟ್ಟಿ
ಮರ ಚಿಗುರಿ ಕಾಯಾಗಿ
ತಿನ್ನಬಾರದ ಹಣ್ಣು ಬಲು ರುಚಿ
**ಉತ್ತರ:** ಮಗು

೩. ಒಬ್ಬಣ್ಣ ಅತ್ತುತ್ತಾನೆ.
ಒಬ್ಬಣ್ಣ ಇಳಿತಾನೆ.
**ಉತ್ತರ:** ರೊಟ್ಟಿ

೪. ತಾಯಿ ತರಕಿ

ಮಗಳು ಬೋಡಿ

ಮಮ್ಮಗಳು ಕಮಗಡಲೆ

**ಉತ್ತರ:** ಹಲಸಿನಹಣ್ಣ್

೫. ಅಡ್ಡ ಗೋಡೆಯ ಮೇಲೆ

ಗಿಡ್ಡಪ್ಪ ಕೂತಾನೆ.

**ಉತ್ತರ:** ಚೇಳು

೬. ಅಂಗಣ್ಣ ಇಂಗಣ್ಣ

ಅಂಗಿ ಬಿಚ್ಚಿ ನುಂಗಣ್ಣ

**ಉತ್ತರ:** ಬಾಳೆಹಣ್ಣು

೭. ಕೊಟ ಕೊಟ ಕೊರಬಾಲಾನ

ಕೋಡಿ ಗುಡ್ಡ ಪೆಟ್ಟಂದಿ

ತಿಳಿಸಿಕೆಣ್ಣೆಕೆ ಪೋತ್ರೆ

ಗಿಸಿಕೆಣ್ಣ ವಸ್ತದಿ

**ಉತ್ತರ:** ಕೇದಿಗೆ

೮. ಅಜ್ಜಿ ಗುದ್ದಿದರೆ

ಮನೆ ತುಂಬಾ ಮಕ್ಕಳು

**ಉತ್ತರ:** ಬೆಳ್ಳುಳ್ಳಿ

೯. ಇಟೇ ಹುಡುಗ

ಚೂಟಿಗಾರ

**ಉತ್ತರ:** ಸೂಜಿ

೧೦. ಒಬ್ಬಣ್ಣ ತೇಲುವುದು

ಒಬ್ಬಣ್ಣ ಮುಳುಗುವುದು

ಒಬ್ಬಣ್ಣ ಕರಗುವುದು

**ಉತ್ತರ:** ಎಲೆ. ಅಡಿಕೆ. ಸುಣ್ಣ

೧೧. ಹೊಟ್ಟೆ ಮೇಲೆ ಹೊಟ್ಟೆ

**ಉತ್ತರ:** ಬೀಸುವ ಕಲ್ಲು

೧೨. ಅಮ್ಮನ ಸೀರೆ ಮಡಿಸಲಾರೆ

ಅಪ್ಪನ ದುಡ್ಡು ಎಣಿಸಲಾರೆ

**ಉತ್ತರ:** ಮೋಡ. ನಕ್ಷತ್ರ

೧೩. ಒಂದು ಬಾವಿ

ಬಾವಿ ಮೇಲೆ ಒಂದು ಕಂಬ

ಕಂಬದ ಮೇಲೆ ಎರಡು ಪಕ್ಷಿಗಳು

ಪಕ್ಷಿಯ ಮೇಲೆ ಒಂದು ಬಂಡೆ

ಬಂಡೆ ಮೇಲೆ ಕಳ್ಳೆ

ಕಳ್ಳೆ ಮೇಲೆ ಕಳ್ಳರು ಓಡಾಡುತ್ತಾರೆ.

**ಉತ್ತರ:** ಬಾಯಿ, ಮೂಗು, ಕಣ್ಣುಗಳು, ಹಣೆ, ಕೂದಲು, ಹೇನು

೧೪. ಗಂಗನಗಡಕ್ಕೆ ಹೋಗಿ

ನನ್ನ ಗಂಡ ತೇಗಿನ ಮಟ್ಟಿ ತಂದ

**ಉತ್ತರ:** ಹೆಣ್ಣು

೧೫. ಅಂತಪ್ಪನ ತೋಟದಲ್ಲಿ

ಇಂತಿಂತಹ ತೆಂಗಿನಕಾಯಿ

**ಉತ್ತರ:** ಮುದ್ದೆ

೧೬. ಕಾಡಿಗೆ ಕಣ್ಣವಳೇ

ಕೂಡು ಹುಟ್ಟಿನವಳೇ

ಹಾಲಿಗೆಂತಹಬಂದು

ಅಯಾಯಾ ಹುಡುಕುವಳೇ

**ಉತ್ತರ:** ಬೆಕ್ಕು

೧೭. ಬೆಳ್ಳಿ ಬಟ್ಟಲದೊಳಗೆ

ಕರಿ ದಾಕ್ಷಿ

**ಉತ್ತರ:** ಕಣ್ಣು

೧೮. ಒಂದು ಹೋಳಿಗೆಯನ್ನು

೯೦೦ ಜನ ತಿಂದಿದ್ದರಂತೆ

**ಉತ್ತರ:** ವಿಭೂತಿಗಟ್ಟಿ

೧೯. ನೂರು ಜನ ಸರದಾರರಿಗೆ

ಒಂದೇ ಊಡುದಾರ

**ಉತ್ತರ:** ಪೊರಕೆ

೨೦. ಹುಡುಗುತನದಲ್ಲಿ ಹಸಿರು

ಯೌವ್ವನದಲ್ಲಿ ಕೆಂಪು

ಮುಪ್ಪಿನಲ್ಲಿ ಕಪ್ಪು

**ಉತ್ತರ:** ನೇರಳೆಹಣ್ಣು

೨೧. ತಲೆ ಅಲ್ಲಾಡಿಸುತ್ತೆ

ಬಾಯಿ ಪಿಟ ಪಿಟ ಅನ್ನುತ್ತೆ

ಹೃದಯ ನಲಿದಾಡುತ್ತೆ

**ಉತ್ತರ:** ಸಂಗೀತ

೨೨. ತವರು ಮನೆಗೆ ಹೋಗುವಾಗ

ಬರಬರನೆ ಹೋಗುತ್ತಾಳೆ.

ಗಂಡನ ಮನೆಗೆ ಬರಬೇಕಾದರೆ

ನಿಧಾನವಾಗಿ ಬರುತ್ತಾಳೇ.

**ಉತ್ತರ:** ಬಾವಿಯಿಂದ ನೀರು ಸೇದುವುದು

೨೩ ಹಸಿರು ಗಿಡದಾಗ

ಮೊಸರು ಚಲ್ಲಿದೆ

**ಉತ್ತರ:** ಮಲ್ಲಿಗೆ ಹೂವು

೨೪. ಅಲ್ಲಿ ಪಳಪಳ

ಇಲ್ಲಿ ಪಳಪಳ

ಕಲ್ಯಾಣದಲ್ಲಿ ಹೋದರು

ಪಳಪಳ

**ಉತ್ತರ:** ಕುರಿಪಿಚ್ಚಿಗೆ

೨೫. ಹಬ್ಬನ್ನ ಹಕ್ಕಿ ಪುಕ್ಕಾ ತೆಗೆದು

ಕಲ್ಲ ಮೇಲಿಟ್ಟ ಕಾರ ಅಡಿದರು

**ಉತ್ತರ:** ಕೊತ್ತುಂಬರಿ ಸೊಪ್ಪು

**ಗಾಣ-ಗೀತೆ**

ಗಾಣಿಗರು ಗಾಣಿಗರು, ಗಾಣಿಗರು,
ಕಾಯಕ ನಿಷ್ಠೆಗೆ ಹೆಸರಾಗಿ, ಉಸಿರ ಪಡೆದವರು |

ಗಾಣದಲಿ ದೇವತೆಯ ಕಾಣುವವರು
ಆ ದೇವತೆಗೆ ಕೈಯ ಮುಗಿಯುವವರು
ಸಾಧನವೇ ಸಿದ್ಧಿ ಎಂದು ದುಡಿಯುವರು
ದುಡಿಮೆಯಿಂದ ಫಲ ಉಣ್ಣುವವರು.

ದಾನ-ಧರ್ಮಕ್ಕೆ ಹೆಸರಾದವರು
ಜನಹಿತಕ್ಕೆ ಮುಂದಾಗಿ ಸಾಗುವರು
ದಾಸೋಹವನ್ನು ಮಾಡುವವರು
ಅದರ ಮೂಲಕ ಸ್ನೇಹ ಪಡೆವವರು

ಮನವ ಮಲ್ಲಿಗೆ ಮಾಡಿಕೊಂಡವರು
ಪರಿಮಳ ಭಾವದಿ ಎಲ್ಲೆಲ್ಲೂ ನಿಲ್ಲುವವರು
ಜೊತೆಗೆ ಅನರ್ಥಕವಾಗುತಿರುವವರು
ಬಾಳಿಗೆ ಅರ್ಥ ನೀಡುವವರು

ದುಃಖ ದುಮ್ಮಾನಕೆ ಅಂಜಿದವರು
ಹೊಸತನಕೆ ಹಂಬಲಿಸಿ-ಚಾಚುವವರು
ತಾರೆಗಳ ಜೊತೆಗೂಡಿ ನಲಿವವರು
ತಮ್ಮ ತನವನು ಧಾರೆ ಎರೆವವರು

ಸುಖಿನರೆಂದು ಖ್ಯಾತಿಗೊಂಡವರು
ಹೊಂಬೆಳಕ ಶಾಂತಿ ತುಂಬಿಕೊಂಡವರು
ಸಂಕೋಚದಲಿ ಒಮ್ಮೊಮ್ಮೆ ಕೊರಗುವವರು
ಬಣ್ಣದ ಬದುಕಿಗೆ ಆಶೆ ಪಡೆದವರು

ಅನುರಾಗಕೆ ಹೆಸರಾಗಿ ಬದುಕುವವರು

ಒಲುಮೆಯ ಉಡುಪಾಗಿ ಧರಿಸಿಕೊಂಡವರು

ಗಾಣದ ಸುತ್ತೆಲ್ಲ ಪ್ರೇಮ ಹರಡುವವರು

ಗಾಣ ದೇವತೆಗೆ ನಿತ್ಯ ನಮಿಸುವವರು

**ಗಾಣ ಗೀತೆಯ ಸಾರಾಂಶ**

ಗಾಣಿಗರು ಕಾಯಕ ನಿಷ್ಠೆಗೆ ಹೆಸರುವಾಸಿಯಾದವರು. ಇವರು ಗಾಣದಲ್ಲಿ ದೇವತೆಯನ್ನು ಕಂಡವರು. ಆ ದೇವತೆಗೆ ಕೈಯ ಮುಗಿದು ಸಾಧನವೇ ಸಿದ್ಧಿ ಎಂದು ದುಡಿದು ದುಡಿಮೆಯ ಫಲ ಉಣ್ಣುವವರು. ಇವರು ಧಾನ ಧರ್ಮಕ್ಕೆ ಹೆಸರಾದವರು ಜನಹಿತವನ್ನು ಬಯಸುವವರು. ದಾಸೋಹವನ್ನು ಮಾಡಿ ಅದರ ಮೂಲಕ ಸ್ನೇಹ ಬೆಳೆಸುವವರು. ಮನಸ್ಸ ಮಲ್ಲಿಗೆ ಮಾಡಿಕೊಂಡು ಪರಿಮಳ ಭಾವದಿ ಎಲ್ಲೆಲ್ಲೂ ನಿಲ್ಲುವವರು ಜ್ಯೋತಿಗೆ ಅನ್ವರ್ಥಕವಾಗುವವರು. ಬಾಳಿಗೆ ಅರ್ಥ ನೀಡುವವರು. ಇವರು ಸುಖ ದುಃಖಕ್ಕೆ ಅಂಜುವವರಲ್ಲ. ಹೊಸತನವನ್ನು ತಮ್ಮಲ್ಲಿ ಅಳವಡಿಸಿಕೊಳ್ಳುವವರು. ತನ್ನ ತನು ಮನವನ್ನು ಭೂಮಿಗೆ ಧಾರೆಯೆರೆಯುವವರು. ಸುಜನರೆಂದು ಖ್ಯಾತಿಗೊಂಡವರು ಹೊಂಬೆಳಕ ಶಾಂತಿ ತುಂಬುವವರು. ಸಂಕೋಚದಲಿ ಒಮ್ಮೊಮ್ಮೆ ಕೊರಗುವವರು ಬಣ್ಣದ ಬದುಕಿಗೆ ಆಶೆ ಪಡುವವರು. ಅನುರಾಗಕ್ಕೆ ಹೆಸರಾಗಿ ಬದುಕುವವರು, ಒಲುಮೆಯ ಉಡುಪಾಗಿ ಧರಿಸಿಕೊಂಡವರು ಗಾಣದ ಸುತ್ತೆಲ್ಲಾ ಪ್ರೇಮ ಪಡೆದವರು. ಗಾಣ ದೇವತೆಗೆ ನಿತ್ಯ ನಮಿಸುವವರು. ಈ ಮೇಲಿನ ಎಲ್ಲಾ ಲಕ್ಷಣಗಳನ್ನು ಸಜ್ಜನ ಗಾಣಿಗರು ಒಳಗೊಂಡಿದ್ದು ಇದು ಗಾಣ ಗೀತೆಯ ಸಾರಾಂಶವೂ ಕೂಡ ಆಗಿರುತ್ತದೆ.

**ಮಗು ತಾಯಿಯನ್ನು ವರ್ಣನೆ ಮಾಡುವ ಹಾಡು**

ತಾಯಿ ನಿನ್ನ ಉಪಕಾರವನು ಮರೆಯನೆಂದು ನಾನು||

ನಿನ್ನ ಮೋಹ ಮಮತೆಗಳನು ಬಣ್ಣಿಸಲು ಸಾಧ್ಯವೇನು||

ಒಂಬತ್ತು ತಿಂಗಳಲ್ಲಿ ವಡಲ ಭಾರ ತಾಪದಲ್ಲಿ

ನೊಂದು ಬಳಲಿ ಪಡೆದೆ ನನ್ನ ಜನ್ಮವನ್ನು

ನಾನು ಹುಟ್ಟುವಾಗ ಕಷ್ಟವೆಷ್ಟು ತಾಯಮ್ಮ

ನನ್ನ ಜನ್ಮದೊಂದಿಗೆ ನಿನ್ನ ಪುನರ್ ಜನ್ಮವಾಯಿತಮ್ಮ

ಮತ್ತೆ ಹುಟ್ಟಿ ಬಂದೆಯಮ್ಮ ||ತಾಯಿ||

ಮಾಂಸ ಮುದ್ದೆಯಾದ ನನ್ನ ತಿದ್ದಿ ತೀಡಿ ಬೆಳಸಿದೆಯಮ್ಮ

ಆಡಿ ಬಂದ ನನ್ನ ಅಂಗಾಲ ತೊಳೆದೆಯಮ್ಮ

ಹಸಿದ ಬಾಯಿಗೆ ಅನ್ನವಿಟ್ಟು ಆನಂದ ಪಡೆದೆಯಮ್ಮ

ದೃಷ್ಟಿದೋಷ ಬಾರದಂಗೆ ರಕ್ಷ ಬಂಧ ಕಟ್ಟಿದೆಯಮ್ಮ

ಕಪ್ಪು ಚುಕ್ಕೆ ಹಣೆಯಲಿಟ್ಟು ಆನಂದ ಪಡದೆಯಮ್ಮ

ಮೊದಲು ನುಡಿಯ ಅನುಕರಣೆಯ ಕಲಿಸಿದೆಯಮ್ಮ

ನನ್ನ ಕಲಿಕೆಯಲ್ಲಿ ಮೊದಲ ಗುರು ನೀನಾದೆಯಮ್ಮ ||ತಾಯಿ||

ಈ ಮೇಲಿನದು ತಾಯಿಯನ್ನು ಕುರಿತು ವರ್ಣನೆ ಮಾಡುವ ಹಾಡು. ತಾಯಿಯ ಉಪಕಾರವನ್ನು ಹಾಗೂ ಮಮತೆಯನ್ನು ಬಣ್ಣಿಸಲು ಸಾಧ್ಯವಿಲ್ಲ. ಮಗುವನ್ನು ಒಂಬತ್ತು ತಿಂಗಳು ಮಡಿಲಲ್ಲಿ ಹೊತ್ತು, ಕಷ್ಟವನ್ನು ಅನುಭವಿಸಿ ನನಗೆ ಜನ್ಮಕೊಟ್ಟಾಗ ಪುನರ್ ಜನ್ಮವಾಯಿತಮ್ಮ ಮತ್ತೆ ಹುಟ್ಟಿ ಬಂದಿಯಮ್ಮ ||ತಾಯಿ|| ಎಂದು ಮಗು ಹಾಡುತ್ತಾನೆ. ನನ್ನ ತಿದ್ದಿ ತೀಡಿ ಬೆಳೆಸಿದೆ ನನ್ನ ಅಂಗಾಲ ತೊಳೆದೆ ಹಸಿದ ಬಾಯಿಗೆ ಅನ್ನ ಕೊಟ್ಟೆ ದೃಷ್ಟಿ ದೋಶ ಆಗದಿರಲೆಂದು ರಕ್ಷಾಬಂಧ ಕಟ್ಟಿದೆ. ಕಪ್ಪುಚುಕ್ಕೆ ಹಣೆಗಿಟ್ಟು ಆನಂದಿಸಿದೆ, ತೊದಲು ನುಡಿಯನ್ನು ಕಲಿಸಿ ಮೊದಲ ಗುರುವಾದೆಯಮ್ಮ ||ತಾಯಿ|| ಎಂದು ಮಗು ತಾಯಿ ಕುರಿತು ಹಾಡಿದೆ.

**ಕೆಲಸದ ಹೊತ್ತಿನ ಹಾಡುಗಳು**

ಸಜ್ಜನ ಗಾಣಿಗರಲ್ಲಿ ಜಾನಪದ ಸಾಹಿತ್ಯದ ಕಂಪು ವ್ಯಾಪಕವಾಗಿ ಹಾಗೂ ವೈಶಿಷ್ಟಪೂರ್ಣತೆಯಿಂದ ಕೂಡಿದೆ. ಈ ಭಾಗದಲ್ಲಿ ಕಂಡುಬರುವ ಹಾಡುಗಳು ಪ್ರಮುಖವಾಗಿ ಹೆಂಗಸರು ಹಾಡಿರುವಂತಹ ಹಾಡುಗಳು ಸ್ತ್ರೀಯರು ತಮ್ಮ ಜೀವನವನ್ನ ಹಾಡಾಗಿ ಹಾಡಿರುವರು ಇವರು ತಮ್ಮ ಕೆಲಸದ ಸಂದರ್ಭದಲ್ಲಿ ಕಟ್ಟಿ ಹಾಡಿರುವ ಪದಗಳಿವೆ, ಆದರೆ ಈ ಹಾಡುಗಳಿಗೆ ಇಂಥವರೇ ಕರ್ತೃವೆನ್ನುವ ಹಾಗಿಲ್ಲ.

ನಿತ್ಯ ಬದುಕಿನನ ಬಗೆಯ ಸಂಸ್ಕೃತಿಯ ಪರಿಕರಗಳೂ ಅವರ ಸಾಹಿತ್ಯದಲ್ಲಿ ಮೂಡಿಸಿ ಮುಖ್ಯವಾಗಿ ಬೀಸುವಾಗ, ಹೊಲದಲ್ಲಿ ಕೆಲಸ ಮಾಡುವಾಗ, ಭತ್ತ ಕುಟ್ಟುವಾಗ, ಇತರೆ ಕಾಯಕದಲ್ಲಿ ನಿರತರಾದಾಗ ಹಾಗೂ ವಿಶೇಷ ಸಂದರ್ಭದಲ್ಲಿ ಹಾಡುವ ಹಾಡುಗಳಾಗಿವೆ.

ಕೆಲಸದ ಸಂದರ್ಭದಲ್ಲಿ ಹೆಚ್ಚು ಹಾಡುಗಳು ಬಳಕೆಗೊಂಡಿರುವುದಕ್ಕೆ ಎರಡು ರೀತಿಯ ಕಾರಣಗಳನ್ನು ನೀಡಬಹುದು. ಮೊದಲನೆಯದು ಸಾಹಿತ್ಯ ಸಲ್ಲಾಪದಲ್ಲಿ ತೊಡಗಿದರೆ ಶ್ರಮ ಗೊತ್ತಾಗದೇ ಕೆಲಸ ಸುಗಮವಾಗಿ ಸಾಗುತ್ತದೆಂದೂ ಹಾಗೂ ಎರಡನೆಯದು ಬೆಳೆ ಸಮೃದ್ಧಿಯಿಂದ ಬೆಳೆಯುತ್ತದೆಂಬ ಹಾಗೂ ಎರಡನೆಯದು ಬೆಳೆ ಸಮೃದ್ಧಿಯಿಂದ ಬೆಳೆಯುತ್ತದೆಂಬ ನಂಬಿಕೆಯಿಂದ ಮತ್ತು ಕೃಷಿ ಕಾರ್ಯ ನಡೆದ ಸಮಯದಲ್ಲಿ ಹಾಡಿದರಂತೂ ದೃಷ್ಟಿಶಕ್ತಿಗಳಿಂದ ಬೆಳೆಯ ರಕ್ಷಣೆಯಾಗುತ್ತದೆಂಬ ನಂಬಿಕೆ ಇವರಲ್ಲಿರುತ್ತದೆ. ಫಸಲು ಚೆನ್ನಾಗಿ ಬರಬೇಕಾದರೆ ಪ್ರಕೃತಿಯ ಅನುಗ್ರಹ ಮುಖ್ಯವಾದುದು. ಕೆಲವೊಂದು ಸಾರಿ ಕೃಷಿ ಕೆಲಸ ಹಾಳಾಗುವಂತಹ ಪರಿಸ್ಥಿತಿ ಬಂದೊದಗಿದಾಗ ಅದನ್ನು ಜನ ತಮ್ಮ ಹಾಡು ಕಥೆ ಇತ್ಯಾದಿಗಳಲ್ಲಿ ತೋಡಿಕೊಳ್ಳಲು ಯತ್ನಿಸುವರು. ಹೀಗೆ ಸಾಹಿತ್ಯ ಅವರಿಗೆ ಹೃದಯ ಅಥವಾ ಮನಸ್ಸನ್ನು ಬಿಚ್ಚಿಕೊಳ್ಳಲು ಅವಕಾಶ ನೀಡಿದೆ. ಆದ್ದರಿಂದ ಶ್ರಮದ ಉಪಶಮನವೂ ಆದಂತಾಗುತ್ತದೆ. ಸಜ್ಜನ ಗಾಣಿಗರ ವೃತ್ತಿ

ಎಣ್ಣೆಕಾಳುಗಳನ್ನು ಬಳಸಿ ಗಾಣದಿಂದ ಎಣ್ಣೆ ತಯಾರಿಕೆಯಾದರೂ ಇವರಲ್ಲಿ ಬಹಳಷ್ಟು ಜನ ಹೊಲಗಳಲ್ಲಿ ದುಡಿಯುತ್ತಾರೆ.

ತಮ್ಮ ಕಷ್ಟ ಸುಖಗಳನ್ನು ಆಸೆ-ಆಕಾಂಕ್ಷೆಗಳನ್ನು ಏರು-ಪೇರುಗಳನ್ನು ಮಿತಿ-ಮೇರೆಗಳನ್ನು ಒಟ್ಟಿನಲ್ಲಿ ಜೀವನದ ಎಲ್ಲ ಅನುಭವಗಳನ್ನು ಅನಿಸಿಕೆಗಳನ್ನು ಅವರು ಅಭಿವ್ಯಕ್ತಗೊಳಿಸುತ್ತಾರೆ. ತುಂಬು ಅನುಭವದ ಅತಿಶಯತೆಯಿಂದ ಗಂಭೀರವಾಗಿ ಹೊರಹೊಮ್ಮಿದ ಮಾತುಗಳು ಸುಂದರವಾದ ಗೀತೆಗಳಾಗಿ ಪರಿಣಮಿಸುತ್ತವೆ.

ಹೊಲಕ ಹೋಗೋಣ ತಂಗಿ

ಹೊಲಕ ಹೋಗೋಣ

ಹೊಲಕ ಹೋಗೋಣ ತಮ್ಮಾ

ಹೊಲಕ ಹೋಗೋಣ

ಹೊಲಗಳಿಗೆ ಹತ್ತಿದ ಕಸವನ್ನು ಕಿತ್ತು ಹಸನ ಮಾಡೋಣ. ದುಡಿಮೆಯ ಜೊತೆ ಜೊತೆಗೆ ಬಂದಿರುವ ಗೀತೆಗಳು ಅಥವಾ ಹಾಡುಗಳ ಮೂಲಕ ತನ್ನ ಮನಸ್ಸನ್ನು ಹಗುರ ಮಾಡಿಕೊಳ್ಳುವ ಮುಖಾಂತರ ಉಲ್ಲಾಸಿತಗೊಳ್ಳುತ್ತಾರೆ.

ಬೆಳಿಗ್ಗೆ ಎದ್ದ ತಕ್ಷಣ ದೇವರನ್ನು ಸಾರಿಸಿ ತಮ್ಮ ಕೆಲಸ ಕಾರ್ಯಗಳಲ್ಲಿ ತೊಡಗುವುದು ಹಳ್ಳಿಗರ ಜೀವನ ಪದ್ಧತಿಯಾಗಿದೆ.

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ

ಎಳ್ಳು ಜೀರಿಗೆ ಬೆಳೆಯೋಳೆ ! ಭೂ ತಾಯಿ

ಎದ್ದೊಂದು ಗಳಿಗೆ ನೆನೆದೇನೆ.

ಶಿವ ಶಿವ ಎಂದರೆ ಸಿಡಿಲೆಲ್ಲಾ ಬಯಲಾಗಿ

ಕಲ್ಲು ಬಂದೆರಗಿ ಕಡೆಗಾಗಿ ! ಎಲೆ ಮನವೆ

ಶಿವನೆಂಬ ಸಬುದ ಬಿಡಬ್ಯಾಡ

ಮಾದೇವ ನಿನ ಹೊರತು ನಾನ್ಯಾರ ನಂಬಿಲ್ಲ

ನಾಮಾಡೆನೆಂಬ ಅಳಿವಿಲ್ಲ ! ಮಲ್ಲಯ್ಯ

ನೀ ನಡೆಸೋ ನನ್ನ ಸರುವೆಲ್ಲ

ಈ ಕೆಲಸದ ಹೊತ್ತಿನ ಹಾಡುಗಳನ್ನು ಎರಡು ವಿಧವಾಗಿ ವರ್ಗೀಕರಿಸಿಕೊಂಡು ಸಂದರ್ಭಕ್ಕನುಸಾರವಾಗಿ ಬರೆಯಲಾಗಿದೆ.

**ಬೀಸುವ ಕಲ್ಲು**

ಜನಪದರ ದೈನಂದಿನ ಬದುಕು ಪ್ರಾರಂಭವಾಗುವುದೇ ಕಾಳು ಬೀಸುವ ಕಾರ್ಯದಿಂದ. ಬೀಸುವ ಕಲ್ಲು ತಿರುಗುತ್ತಿದ್ದರೆ ಮನೆಯಲ್ಲಿ ಎಲ್ಲವೂ ಸುಗಮವಾಗಿದೆ ಎಂದರ್ಥ. ಬೀಸುವಾಗ ಹೇಳುವ ಗೀತೆಗಳಲ್ಲಿ ಹೆಣ್ಣಿನ ಬದುಕನ್ನು ಚಿತ್ರಿಸುತ್ತದೆ. ಬಾಲ್ಯದಲ್ಲಿ ತಂದೆ-ತಾಯಿ, ಯೌವನದಲ್ಲಿ ಗಂಡನ ಹಾಗೂ ಮುಪ್ಪಿನಲ್ಲಿ ಮಕ್ಕಳ ಅಧೀನದಲ್ಲಿ ಬಾಳುವೆ ನಡೆಸುವ ಹೆಣ್ಣಿನ ಬದುಕಿನ ವಿವಿಧ ಸ್ತರದ ಶೀಲವರ್ತನೆಯ ಚಿತ್ರ ಹೀಗೆ ಗರತಿಯ ಬದುಕಿನ ಹಿರಿಮೆಯನ್ನು ಸಾರುವ ಪದಗಳು ಇವಾಗಿವೆ.

ಬೀಸು ಕಲ್ಲು ಬೇಕೋ, ಗೋಧಿ ರೊಟ್ಟಿ ಬೇಕೋ
ಬಾಳಪ್ಪನೆಂಬ ಮಗಬೇಕೋ ! ತಾಯವ್ವ
ಸಾವಿತ್ರಿಯೆಂಬ ಸೊಸೆ ಬೇಕೋ

ಬೀಸುವ ಕಲ್ಲಿಗೆ ರತ್ನದ ತುದಿಗೂಟ
ಚಂದ್ರಮತಿ ಚಟಾಯಿಯೇ
ಚಂದ್ರಮತಿಯೆಂಬ ! ಚಟಾಯಿ ಮ್ಯಾಲೆ ! ಬೀಸುವ ಕಲ್ಲನ್ನಿಟ್ಟು
ಬೀಸೋಣ ಬನ್ನೀರೆ ನೆರೆಯೋರೆ

ಬೀಸೋ ಕಲ್ಲಿಗೆ ರನ್ನದ ಮುಚ್ಚಳ
ಹೋಗಿ ಬಾ ಮಲಲಿ ತಮವರಿಗೆ !
ಹೋಗಿ ಬಾ ಮಲ್ಲಿ ತವರೂರ ಮನಿಗೆ
ಚಾನವ ಹೊಯ್ದು ಕಳಸವ್ವ

ಮದುವೆ ಕಾರ್ಯಗಳಲ್ಲಿ ಹೆಣ್ಣನ್ನು ಹಾಡು ಹೇಳಿಸುತ್ತ ಬೀಸುವ ಕುಟ್ಟುವಶಾಸ್ತ್ರ ಮಾಡುವುದರ ಮೂಲಕ ಆಯ್ಕೆ ಮಾಡುತ್ತಿದ್ದರು. ಈಗ ಇಂತಹ ಶಾಸ್ತ್ರಗಳು ಕೆಲವೊಂದು ಕಡೆಗಳಲ್ಲಿ ಮಾತ್ರ ಉಳಿದುಕೊಂಡು ಬಂದಿವೆ. ಈಗ ಹಿಟ್ಟುಮಾಡುವ ಯಂತ್ರಗಳು ಬಂದಿರುವುದರಿಂದ ಕುಟ್ಟುವ ಮತ್ತು ಬೀಸುವ ಕಾರ್ಯಗಳು ಕಡಿಮೆಯಾಗುತ್ತ ಹೋಗಿವೆ. ಒಟ್ಟಾರೆ ಹೆಂಗಸರ ಹಾಡುಗಳಲ್ಲಿ ಬೀಸುವ ಪದಗಳಿಗೆ ಮಹತ್ವ ಸ್ಥಾನವಿದೆ.

**ಕುಟ್ಟುವ ಹಾಡುಗಳು**

ಇವು ಸಹ ಬೀಸುವ ಪದಗಳಷ್ಟೆ ಮಹತ್ವ ಪೂರ್ಣವಾದವುಗಳಾಗಿವೆ. ಆದರೆ ಈ ಪದಗಳು ಭತ್ತ, ಗೋಧಿ ಕುಟ್ಟುವ ಕಾರ್ಯಕ್ಕೆ ಸೀಮಿತಗೊಂಡಂತವು. ಭತ್ತ, ಗೋಧಿ ಕುಟ್ಟುವ ಕೆಲಸವು ಶ್ರಮದಾಯಕವಾದುದು. ಆ ಶ್ರವನ್ನು ನೀಗಿಸಿಕೊಳ್ಳಲು ಕುಟ್ಟುವವರು ಕುಟ್ಟುವ ಪದಗಳನ್ನು ಹಾಡುವರು ಒರಳಲ್ಲಿ ಗೋಧಿ ಬತ್ತವನ್ನು

ಹಾಕಿ ಒನಕೆಯಿಂದ ಕುಟ್ಟುತ್ತ ಹಾಡುತ್ತಿದ್ದರಿಂದ ಅವುಗಳಿಗೆ ''ಒನಕೆಪಾಡು'' ''ಒನಕೆ ಹಾಡು'' ಗಳೆಂದು ಕರೆಯುತ್ತಾರೆ.

ಭತ್ತ ಕೊಳ್ಳೋರು ನಮ್ಮನಿಗೆ ಬನ್ನಿರೇ
ಭತ್ತ ಮನೆಯೊಂದು | ಗರಿಯಲ್ಲ ತಮ್ಮಯ್ಯ
ಕಟ್ಟಿದ ಮುಂಡಾಸರ | ಬೆಲೆ ಹೆಚ್ಚು.

ಹೊಟ್ಟೆಯ ಹಸದರ ಕೊಡುವೇನು ತಣ್ಣೀರ
ಹಿಡಿಯುವೆ ಯಂತ್ರದಂತಾ ವನಕೀಯಾ
ಹಿಡಿಯುವೆ ಯಂತ್ರದಂತಾ | ವನಕೀಯಾ ಕುಟ್ಟುವಾಗ
ನೆನೆಯುವೆ ತಾಯವ್ವನ ಮಲಿ ಹಾಲ.

ಮನೆಯಲ್ಲಿ ಊಟಕ್ಕೆ ಬೇಕಾಗುವ ಅಕ್ಕಿಗಾಗಿ ಭತ್ತ ಕುಟ್ಟುತ್ತಿದ್ದುದು ಸಾಮಾನ್ಯವಾಗಿದ್ದ ದಿನಗಳಲ್ಲಿ ಆರಾಧನೆ, ಉತ್ಸವ, ಮದುವೆಯಂತಹ ಸಾಮೂಹಿಕ ಕಾರ್ಯಗಳಿಗೆ ಕುಟ್ಟುವ ಸಂದರ್ಭಗಳು ಬರುತ್ತಿದ್ದವು. ಇತ್ತಿತ್ತಲಾಗಿ ಯಂತ್ರಗಳು ಬಂದಿರುವುದರಿಂದ ಭತ್ತ ಕುಟ್ಟುವ ಕಾರ್ಯ ಮರೆಮಾಚುತ್ತಿದೆ. ಇದರ ಜೊತೆಗೆ ಕುಟ್ಟುವ ಹಾಡುಗಳು ಮರೆತು ಹೋಗುತ್ತಿವೆ.

**ಶುಭ ಸಂದರ್ಭದ ಹಾಡುಗಳು**

ಇವು ತೊಟ್ಟಿಲ ಕಾರ್ಯ, ಋತುಮತಿ ಕಾರ್ಯ, ಮದುವೆ ಕಾರ್ಯ ಹಾಗೂ ವಿವಿಧ ಶಾಸ್ತ್ರಗಳಿಗೆ ಮಾತ್ರ ಸಂಬಂಧಿಸಿದಂತೆ ಹಾಡುವಂತಹವುಗಳಾಗಿವೆ. ಮದುವೆ ಹಾಗೂ ಋತುಮತಿ ಕಾರ್ಯಗಳಲ್ಲಿ ಬಳಸುವ ಹುಡುಗಳನ್ನೇ ಸೋಬಾನೆ ಪದಗಳೆಂದು ಕರೆಯುತ್ತಾರೆ. ಸೋಬಾನೆ ಎಂಬುವದು ಶುಭವನ್ನು ಸೂಚಿಸುವ ಮಾತು ಹಾಡುಗಳ ಮೂಲಕ ಶುಭವನ್ನು ಹಾರೈಸುವದೇ ಸೋಬಾನೆ ಶುಭವೆನ್ನಿ ಎಂಬ ಮಾತು ಸೋಬಾನೆಯಾಗಿದೆ. ಸೋಬಾನೆ ಹಾಡುಗಳನ್ನು ಹೆಂಗಸರು ಮಾತ್ರ ಹಾಡುತ್ತಾರೆ. ಸಜ್ಜನ ಗಾಣಿಗರಲ್ಲಿ ಸಂಪ್ರದಾಯ ಪದಗಳನ್ನು ಕಾಲ, ಸ್ಥಳ, ಆಚರಣೆ ಸಂದರ್ಭಕ್ಕನುಸಾರ ಹಾಗೂ ವೈವಿದ್ಯವನ್ನಾಧರಿಸಿ ಪ್ರಮುಖವಾಗಿ ಮೂರು ವಿಭಾಗಗಳಲ್ಲಿ ವರ್ಗೀಕರಿಸಲಾಗಿದೆ.

೧. ಜೋಗಳದ ಹಾಡುಗಳು
೨. ಋತುಮತಿ ಸಂದರ್ಭದ ಹಾಡುಗಳು
೩. ಮದುವೆಯ ಹಾಡುಗಳು

**ಜೋಗುಳ ಹಾಡುಗಳು (ಲಾಲಿ ಹಾಡು)**

ಕೂಸಿದ್ದ ಮನೆಗೆ ಬೀಸಣಿಕೆ ಯಾತಕೆ
ಕೂಸು ಕಂದಯ್ಯ ಒಳ ಹೊರಗೆ
ಕೂಸು ಕಂದಯ್ಯ ಒಳ ಹೊರಗೆ ಸುಳಿದರೆ ಬೀಸಣಿಕೆ ಗಾಳಿ ಸುಳಿದಾಂಗೆ ||ಪ||

ಕಂಡಲ್ಲಿ ಆಡ್ಯಾನ ಕಡೆಗೆಲ್ಲಿ ಚಲ್ಯಾವ||
ದುಂಡು ಮುತ್ತೆಲ್ಲಾ ಉದುರ್‍ಯಾವ
ದುಂಡು ಉದುರ್‍ಯಾವ ಕಂದನ್ನ
ಬಿರಿದುಲಿ ಕಂಡವರು ಕೊಡಿರವ್ವ ||೧||

ಹಾವಿನ ಹೆಡೆ ಚಂದ, ಮಾವಿನ ಮಿಡಿ ಚಂದ
ಹಾರಾಡಿ ಬರುವ ಗಿಳಿ ಚಂದ
ಹಾರಾಡಿ ಬರುವ ಗಿಳಿ ಚಂದ ನೀ ಚಂದ
ಕಂದಯ್ಯ ಚಂದ ನಮಗೆಲ್ಲಾ ||೨||

ಹಕ್ಕಿಗೆ ಗೂಡಾಸೆ, ಮಕ್ಕಳಿಗೆ ತಾಯಾಸೆ
ಬಿತ್ತಿದ ಬೆಳೆಗೆ ಮಳೆಯಾಸೆ
ಬಿತ್ತಿದ ಬೆಳೆಗೆ ಮಳೆಯಾಸೆ ನೀ ಯಾಸೆ
ಹತ್ತಿರವಿರಲು ನಮಗಾಸೆ ||೩||

ನಿನ್ನಂತ ಮಕ್ಕಳು ನೂರಾರು ಆಡಲು
ಹೊನ್ನೆ ಮರದ ನೆರಳೊಳು
ಹೊನ್ನೆ ಮರದ ನೆರಳೊಳು ಆಡಲು
ಸನ್ಯಾಸಿ ಜಪನ ಮರೆತಾನಾ ||೪||

ತೊಟ್ಟಿಲದಾಗೊಂದು ತೊಳೆದ ಮುತ್ತನು ಕಂಡೆ
ಹೊಟ್ಟೆ ಮೇಲಾಗಿ ಮಲಗ್ಯಾನ
ಹೊಟ್ಟೆ ಮೇಲಾಗಿ ಮಲಗ್ಯಾನ ಕಂದಯ್ಯ
ಮುತ್ತಿನ ದೃಷ್ಟಿ ತಗದೇನ ||೫||

**ಜೋಗುಳ ಹಾಡುಗಳು (ಲಾಲಿಹಾಡು)**

ಸಜ್ಜನ ಗಾಣಿಗರು ಮಗುವನ್ನು ಕುರಿತು ಲಾಲಿಹಾಡು ಹಾಡುತ್ತಾರೆ. ಕೂಸು ಇದ್ದಾ ಮನೆಗೆ ಬೀಸಣಿಕೆಯೇ ಬೇಡ ಕೂಸ ಕಂದಯ್ಯ ಹೊರಹೊಳಗೆ ಅಡ್ಡಾಡಿದರೆ ಬೀಸಾಣಿಕೆ ಗಾಳಿ ಸುಳಿಯುತ್ತದೆ. ಮಗುವಿನ ಚಂದವನ್ನು ಹಾವಿನ ಹೆಡೆಗೆ ಮಾವಿನ ಮಿಡಿ, ಹಾರಾಡುವ ಗಿಳಿಗೆ, ಹೋಲಿಸಿದ್ದಾರೆ. ಹಕ್ಕಿಗೆ ಗೂಡಿನಾಸೆ, ಮಕ್ಕಳಿಗೆ

ತಾಯಿಯಾಸೆ, ಬಿತ್ತಿದ ಬೆಳೆಗೆ ಮಳೆಯಾಸೆ ಮಗು ಹತ್ತಿರವಿರಲು ನಮ್ಮೆಲ್ಲರಿಗೂ ಅಸೆಯೆಂದು ಕುಟುಂಬದ ಸದಸ್ಯರು ಮಗುವಿನ ಬಗ್ಗೆ ತಿಳಿಸುತ್ತಾರೆ. ಮಕ್ಕಳ ಆಟವು ಸನ್ಯಾಸಿಯ ಜಪವನ್ನು ಸಹ ಮರೆಸುತ್ತದೆ ಎಂದು ಹಾಡಿದ್ದಾರೆ. ಸಾಮಾನ್ಯವಾಗಿ ಹೆಂಗಸರೇ ಹೆಚ್ಚು ಭಾವಹಿಸುವ ಈ ಕಾರ್ಯದಲ್ಲಿ ವಿಶೇಷವಾದ ಆಚರಣೆಗಳು ಕಂಡು ಬರುತ್ತವೆ. ಮಗುವನ್ನು ತೊಟ್ಟಿಯೊಳಗೆ ಮಲಗಿಸಿ, ಜೋ.....ಜೋ..... ಎನ್ನ ಗೋಪಿಯ ಕಂಡೆ ಜೋ.....ಜೋ..... ಎಂಬ ಪಲ್ಲವಿಯೊಡನೆ ತೊಟ್ಟಿಲು ತೂಗುತ್ತಾ ಹಾಡುವ ಹಾಡುಗಳನ್ನು ಜೋಗುಳದ ಅಥವಾ ಲಾಲಿ ಹಾಡುಗಳೆಂದೂ ಕರೆಯುತ್ತಾರೆ. ಇದರಲ್ಲಿ ಹಡೆದ ತಾಯಿಯ ವರ್ಣನೆ ಹಾಗೂ ಬಸುರಿ ಬಾಣಂತನ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯ ಸಂಪ್ರದಾಯಗಳ ವರ್ಣನೆ ತುಂಬ ಕಲಾತ್ಮಕತೆಯಿಂದ ಕೂಡಿದೆ.

ತೊಟ್ಟಿಲದಾಗೊಂದು ತೊಳೆದ ಮುತ್ತನು ಕಂಡೆ
ಹೊಟ್ಟೆ ಮೇಲಾಗಿ ಮಲಗ್ಯಾನ.
ಹೊಟ್ಟೆ ಮೇಲಾಗಿ ಮಲಗ್ಯಾನ ಕಂದಯ್ಯ
ಮುತ್ತಿನ ದೃಷ್ಟಿ ತಗದೇನ
ಆಡಿ ಬಾ ನನಕಂದ ಅಂಗಾಲ ತೊಳದೇನ
ತೆಂಗಿನ ಕಾಯಿ ತಿಳಿನೀರ
ತೆಂಗಿನಕಾಯಿ ತಿಳಿನೀರ ತಕ್ಕೊಂಡು
ಬಂಗಾರದ ಮಾರಿ ತೊಳದೇನೆ
ಅತ್ತಾರೆ ಅಳಲವ್ವ ಈಕೂಸು ನನಗಿರಲಿ
ಕೊಟ್ಟರೆ ಕೊಡಲಿ ಮನೆಗೆಲಸ
ಹಾವಿನ ಹೆಡಿ ಚಂದ ಮಾವಿನ ಮಿಡಿಚಂದ
ಹಾರಾಡಿ ಬರುವ ಗಿಳಿ ಚಂದ
ಹಾರಾಡಿ ಬರುವ ಗಿಳಿ ಚಂದ ಕಂದ್ಯ ನೀ ಚಂದ ನಮ್ಮ ಮನೆಗೆಲ್ಲಾ.

ಮಗು ಜೋಗುಳವನ್ನು ಆಲಿಸಿ ತಾನೂ ಹಾಡಲೂ ಪ್ರಾರಂಭಿಸುವುದು ತೊದಲು ನುಡಿಯಲು ತೊಡಗುವುದು. ಮಗುವಿನ ಆಟ, ನೋಟ, ತುಂಟುತನ ಇತ್ಯಾದಿ ಚಟುವಟಿಕೆಗಳನ್ನು ಬಣ್ಣಿಸಿ ಹಾಡುವದರಿಂದ ತಾಯಿಯ ಎದೆಯೊಳಲು ನಿವಾರಣೆಯಾಗಿ ಅವಳಿಗೆ ಮನೋಲ್ಲಾಸ ಸಿಗುತ್ತದೆ. ಮಗುವಿನ ಮೇಲಿನ ಮಮತೆ, ಪ್ರೀತಿ, ವಾತ್ಸಲ್ಯ ಇಮ್ಮಡಿಗೊಳ್ಳುತ್ತದೆ. ಹೀಗೆ ಜೋಗುಳದ ಹಾಡು ಸಜ್ಜನ ಗಾಣಿಗರ ಸಂಪ್ರದಾಯ ಪದಗಳಲ್ಲೊಂದು ಉತ್ತಮವಾದ ಕೊಡುಗೆಯಾಗಿದೆ.

**ಋತುಮತಿ ಸಂದರ್ಭದ ಹಾಡುಗಳು.**

ಪ್ರಕೃತಿದತ್ತವಾಗಿ ಹೆಣ್ಣು ದೈಹಿಕ ಬದಲಾವಣೆಗೊಳಗಾಗುವ ಮೊದಲ ಹಂತದಲ್ಲೇ ಮಾನಸಿಕ ಭಯ ಮತ್ತು ಅಂತಕಕ್ಕೊಳಗಾಗುವಳು. ಇಂತಹ ಸಂಕ್ರಮಣ ಸ್ಥಿತಿಯಲ್ಲಿ ಅವಳ ದೈಹಿಕ ಮತ್ತು ಮಾನಸಿಕ

ಒತ್ತಡಗಳನ್ನು ಶಾಂತ ರೀತಿಯಲ್ಲಿ ಪರಿಹರಿಸುವ ಆಚರಣೆಗಳಿಗೆ ''ಮೈನೆರದ ಶಾಸ್ತ್ರ'' ಋತುಮತಿ ಕಾರ್ಯ, ದೊಡ್ಡಾಕಿ ಶಾಸ್ತ್ರ, ಉಡಿಯಕ್ಕಿ ತುಂಬುವ ಕಾರ್ಯ, ಎಂಬಿತ್ಯಾದಿ ನಾಮಗಳಿಂದ ಹೆಸರಿಸುತ್ತಾರೆ. ದೊಡ್ಡವಳಾದವಳಿಗೆ ದೇವರ ಜಗಲಿಬಿಟ್ಟಂತೆ, ಮನೆಯ ಹೊರ ಅಂಗಳದಲ್ಲಿ ವಿಶೇಷ ಸ್ಥಾನವನ್ನು ಪಡೆದವರ ಮೂಲಕ ಮಹತ್ವದ ಆಚರಣೆಗಳಿಗೆ ಕಾರಣಳಾಗುತ್ತಾಳೆ. ಸಜ್ಜನ ಗಾಣಿಗರಲ್ಲಿ ಹೆಣ್ಣು ಋತುಮತಿಯಾದ ಸಂದರ್ಭವನ್ನು ಕುಟುಂಬದ ಆಚರಣೆಯಾಗಿ ನಡೆಸಿಕೊಂಡು ಬಂದಿರುವ ವೈವಿಧ್ಯಮಯ ಸಂಪ್ರದಾಯವನ್ನು ಈ ಮೈನೆರೆದಾಗಿನ ಹಾಡುಗಳಲ್ಲಿ ಸಂಕೇತಗಳ ಮೂಲಕ ಬಿಂಬಿಸುವ ಹಾಡುಗಳು ಅರ್ಥಗರ್ಭಿತವಾಗಿವೆ.

ಉಡಿತುಂಬುವ ದಿನ ಮನೆಯ ಆವರಣದಲ್ಲಿ ಮಾಡುವಾಗ ಐದುಜನ ಮತ್ತೈದೆಯರು ಸೇರಿ ಉಡಿ ತುಂಬಿಸಿ ಆರತಿಯನ್ನು ಬೆಳಗುವರು. ಈ ಸಂದರ್ಭ ಅಪಾರವಾದ ಸಂಖ್ಯೆಯಲ್ಲಿ ಕೂಡಿದ ಹೆಂಗಸರು ಸೋಬಾನ ಪದಗಳನ್ನು ಹೇಳುವರು.

ಆ ಮಹಲ ಈ ಮಹಲ
ಚಿಲಕ ಚಿತ್ತಾರದ ಮಹಲ
ಯಾರ ಕಟ್ಟಿಸ್ಯಾರವ್ವ ಈ ಮಹಲ
ಅವರಪ್ಪ ಕಟ್ಟಿಸ್ಯಾನವ್ವ ಹೊಸ ಮಹಲ| ಸೋಬಾನವ|
ವಡ್ಡಾರ ಕರಸ್ಯಾರ
ಒಳಬಾವಿ ತಗಸ್ಯಾರ
ಇಲ್ಲೋ ಮುನಿಯವ್ವ ಹೊಲೆಯ ನೀರ
ಇಲ್ಲೋರ ಮುನಿದರ ಮೈಲಿಗೆ ಮುಡಿಚಟ್ಟಾ.
ಹಿರೇವಾಳಿ ಗಂಗಪ್ಪನ್ನ ಹಡೆದವ್ನ |ಸೋಬಾನವ|
ಆರೆಮ್ಮೆ ಕಟ್ಟುತ
ತತ ಗೋಳಿಗುನಿಸುತ
ದಾರದ ಗಂಗಾಳ ಬೆಳಗುತ
ದಾರದ ಗಂಗಾಳ ಬೆಳಗುತ ಕಂಡಾಳ
ಕೆಂಪ ಸೀರೆಲ್ಲಿ ನಸೀಯಾಗೆಂಪ
ಕೆಂಪ ನೀರೆಲ್ಲಾ ನಸೀಯಾಗೆಂಪ (ಹೆಸರು...)
ಸಾಲ ಗೆಳತ್ಯಾರ ಕೈ ಹೊಡದಾರ
ಸಾಲ ಗೆಳತ್ಯಾರ ಕೈ ಹೊಡತ ನಗುತ
ಕುಟ್ಟಂದಾಕಿಳ ಜೀಗಳಿಯ |ಸೋಬಾನವ|
ಹತ್ತೇಷ್ಟು ಹಿಂಡುತ, ತತಗೋಳಿ ಗುಣಿಸುವ

ಮುತ್ತಿನ ಗಂಗಾಳ ಬೆಳಗುತ

ಮುತ್ತಿನ ಗಂಗಾಳ ಬೆಳಗುತ ಕಂಡಾಳ

ಶಾದಿ ಸೀರೆಲ್ಲ ನಸಿಯ ಗೆಂಪ

ಶಾದಿ ಸೀರೆಲ್ಲಿ ಸಸಿಯ ಗೆಂಪ (ಹೆಸರು)

ಅವರವ್ವ ಮಾಡೆಳೆಂದೆಳ ಸುರಳಿ ಹೋಳಿಗಿ |ಸೋ|

ಅಲಂಕೃತಗೊಂಡ ಹೆಣ್ಣಿಗೆ ಅರಿಶಿಣ, ಕುಂಕುಮ, ಕಟ್ಟೆ, ಮಲ್ಲಿಗೆ ಹೂ ಮುಡಿಸಿ, ವಿವಿಧ ಹಣ್ಣೆ, ಎಲೆ ಅಡಿಕೆ, ಬಾಳೆಹಣ್ಣು, ಇವೆಲ್ಲವನ್ನು ಉಡಿ ತುಂಬಿ, ಆರತಿ ಬೆಳಗಿ ಹಾರೈಸುತ್ತಾರೆ. ಸಾಮಾಜಿಕ ನಡವಳಿಯ ರೀತಿ ನೀತಿಗಳನ್ನು ಸೊಗಸಾಗಿ ವಿಸ್ತರಿಸುವಲ್ಲಿ ಸೋಬಾನ ಪದಗಳು ಶ್ರೀಮಂತವಾಗಿವೆ. ಒಟ್ಟಿನಲ್ಲಿ ಹೆಣ್ಣು ಬಾಲ್ಯದಿಂದ ಪ್ರೌಢಾವಸ್ಥೆಗೆ ತಲುಪುವ ಸಂಕ್ರಮಣದ ಸ್ಥಿತಿ ಅಥವಾ ಪರಿವರ್ತನಾ ಹಂತದಲ್ಲಿ ಹಲವು ಆಚರಣೆಗಳನ್ನು ಶಾಸ್ತ್ರೋಕ್ತವಾಗಿ ನಡೆಸಿಕೊಂಡು ಬಂದಿರುವದು ಈ ಜನಾಂಗದ ವೈಶಿಷ್ಟ್ಯವಾಗಿದೆ.

**ಮದುವೆಯ ಹಾಡುಗಳು**

ಮದುವೆಯ ವಿವಿಧ ಆಚರಣೆಗಳನ್ನು ಕ್ರಮಬದ್ದವಾಗಿ ಜೋಡಿಸಿ ಹಾಡುವ ಹಾಡುಗಳೇ ಮದುವೆಯ ಹಾಡುಗಳು, ಸಾಮರಸ್ಯ, ವೈವಿದ್ಯತೆ ಹಾಗೂ ಸಾಂಸ್ಕೃತಿಕ ಸಮನ್ವಯತೆಯನ್ನು ಸಮರ್ಪಕವಾಗಿ ಕಾಪಾಡಿಕೊಂಡು ಬರಲು ಇವುಗಳ ಪಾತ್ರ ಮಹತ್ವದ್ದು. ಹೀಗೆ ಹತ್ತಾರು ದಿನಗಳ ಕಾಲ ನಡೆಯುತ್ತಿದ್ದಾ ಮದುವೆಯ ಹಾಡುಗಳು ಕಡಿಮೆಯಾಗುತ್ತಾ ಬಂದಿವೆ. ಆದರೂ ಸಜ್ಜನ ಗಾಣಿಗರಲ್ಲಿ ಜನಾಂಗದಲ್ಲಿ ಇಂದಿಗೂ ಈ ಹಾಡುಗಳು ಉಳಿಸಿಕೊಂಡು ಬಂದಿದ್ದಾರೆ. ಈ ಸಂದರ್ಭದಲ್ಲಿ ಸೋಬಾನೆ ಹಾಡು ಹಾಡುತ್ತಾರೆ. ನಿಶ್ಚಿತಾರ್ಥ ಸಮಯದಲ್ಲಿ, ಬೀಗರನ್ನು ಎದುರುಗೊಳ್ಳುವಾಗ, ಅರಿಶಿಣ ಹಚ್ಚುವಾಗ, ಆರತಿ ಮಾಡುವಾಗ, ಐರಾಣಿ ತರುವಾಗ, ಹಾಲಗಂಭ ನೆಡುವಾಗ, ಧಾರೆ ಮೂಹೂರ್ತದ ಹೊತ್ತಿನಲ್ಲಿ, ಕಾಲು ತೊಳೆಯುವಾಗ, ಹೆಣ್ಣನ್ನು ಮನೆದುಂಬಿಸಿಕೊಳ್ಳುವಾಗ (ಗೃಹ ಪ್ರವೇಶ) ಹೀಗೆ ಹಲವಾರು ಶಾಸ್ತ್ರಗಳು ಹಾಡಿನ ಮೂಲಕ ನಡೆಯುತ್ತವೆ. ವಧು-ವರರಿಗೆ ಅರಿಶಿಣ ಹಚ್ಚುವಾಗ ಹೆಂಗಸರು ಹಾಡು ಹೇಳುತ್ತಾರೆ.

ಅರಿಶಿಣ ಹಚ್ಚಿರಿ, ನನ ಈ ರಾಜ ಕುಮರಾಗ

ಗಣಪತಿ ಹಡದ ಮಗನಿಗೆ

ಎಣ್ಣೆ ಹಚ್ಚಿರಿ ನನ್ನ ಈ ರಾಜ ಕುಮರಾಗ

ಕೀಣಕವ್ವ ಹಡದ ಈ ಮಗನಿಗೆ

ದಂಡಿ ಕಟ್ಟಿರಿ ನನ್ನ ದುಂಡಗಣ್ಣಕಿಗೆ

ನಾಗಪ್ಪ ಹಡದ ಮಗಳಿಗೆ

ನಾಗಪ್ಪ ನೀ ಹಡದ ಮಗಳಿಗೆ

ರಾಜೇಶ್ವರಿಗೆ ದಂಡಿ ಕಟ್ಟಿರಿ ಶುಭದಿಂದ

ಇಲ್ಲಿ ವರನಿಗೆ ಅರಿಶಿಣ ಹಚ್ಚುವ ಹಾಗೂ ಹಣೆಗೆ ವಿಭೂತಿಯನ್ನು ಹಚ್ಚುವಂತೆ ಕರೆ ಕೊಡುವಂಥ ಪದಗಳು ಸೋಬಾನೆ ಪದಗಳಲ್ಲಿ ಮೂಡಿಬರುತ್ತವೆ.

ಧಾರೆಯಾದ ನಂತರ ವಧು-ವರರ ಕಾಲು ತೊಳೆಯುವ ಶಾಸ್ತ್ರ, ಈ ಸಂಪ್ರದಾಯವು ಸಜ್ಜನ ಗಾಣಿಗರ ಜನಾಂಗದಲ್ಲಿ ಇಂದಿಗೂ ಕೂಡ ಉಳಿದುಕೊಂಡು ಬಂದಿದೆ. ವರನ ಅಕ್ಕ ಅಥವಾ ತಂಗಿಯರು ಈ ಶಾಸ್ತ್ರವನ್ನು ಮಾಡುತ್ತಾರೆ. ಕಾಲು ತೊಳೆದ ಅಕ್ಕ-ತಂಗಿಯರು ವಧು-ವರರನ್ನು ಏನು ಕೇಳುತ್ತಾರೆಂಬ ಕುತೂಹಲ ಅಲ್ಲಿರುತ್ತದೆ. ಮುಂದೆ ಆಕೆಯ ಹೊಟ್ಟೆಯಲ್ಲಿ ಜನಿಸಿದ ಮಗನಿಗೆ ಹೆಣ್ಣಿ ಕೊಡಬೇಕೆಂಬುದು ಮುಖ್ಯ ಬೇಡಿಕೆಯಾಗಿರುತ್ತದೆ. ಈ ಸಂದರ್ಭದಲ್ಲಿ ಹಾಡು ಅಲ್ಲಿ ಕೇಳಿಬರುತ್ತದೆ.

ಬಾಗಿಲ ತೋಳ ಬಿಡ ತಂಗಿ ಕಾಲ||

ಆನೆ ಆನೆಯ ಕೊಡುವೆ

ಆನೆ ಮರಿಯನು ಕೊಡುವೆ

ಬಾಗಿಲ ತೋಳ ಬಿಡ ತಂಗಿ ಕಾಲ||

ಕುದುರೆ ಕುದುರೆಯ ನಾ ಕೊಡುವೆ

ಕುದುರೆ ಮರಿಯನು ಕೊಡುವೆ

ಬಾಗಿಲ ತೋಳ ಬಿಡ ತಂಗಿ ಕಾಲ||

ಓಲೆಯ ನಾ ಕೊಡುವೆ

ಬೆಳ್ಳಿ ಬಂಗಾರ ನಾ ಕೊಡುವೆ

ಬಾಗಿಲ ತೋಳ ಬಿಡ ತಂಗಿ ಕಾಲ||

ಜನಿಸಿದ ದಿನ ಮಗಳ್ನ

ನನ ಮಗನ ನಾ ಕೊಡುವೆ

ಬಾಗಿಲ ತೋಳ ಬಿಡ ತಂಗಿ ಕಾಲ||

ಅಣ್ಣ ತಂಗಿಯ ಸಂವಾದದಲ್ಲಿ ತಂಗಿಯು, ಅವೇನೂ ನನಗೆ ಬೇಡ ನೀನು ಹಡೆದು ಮಾಡಿಕೊಂಡು ಉಣ್ಣಿವ ಮಗಳನು ಕೊಡು ಎಂದು ತನ್ನ ಬೇಡಿಕೆಯನ್ನು ಹೇಳಿಕೊಂಡಾಗ ಅಣ್ಣ-ತಂಗಿಯಮಗನಿಗೆ ತನ್ನ

ಮಗಳನ್ನು ಕೊಡಲು ಒಪ್ಪಿಕೊಳ್ಳುತ್ತಾನೆ. ಈ ಸಜ್ಜನ ಗಾಣಿಗ ಜನಾಂಗದಲ್ಲಿ ಇಂದಿಗೂ ಇಂತಹ ವಿವಾಹಗಳು ನಡೆಯುತ್ತವೆ. ಕಾಲು ತೊಳೆದ ಮಾವ ಮತ್ತು ಅಕ್ಕನಿಗೆ ಅಥವಾ ತಂಗಿಗೆ, ಬೆಳ್ಳಿ, ಬಂಗಾರ, ದುಡ್ಡು ಕೊಡುವ ಪದ್ದತಿ ಇದೆ. ಈ ಸಂದರ್ಭದಲ್ಲಿ ಅಕ್ಕ ತಂಗಿ ಕೇವಲ ಹೆಣ್ಣನ್ನು ಮಾತ್ರ ಕೇಳುತ್ತಾರೆ.

**ಹಬ್ಬದ ಹಾಡುಗಳು**

**ನಾಗರ ಪಂಚಮಿ**

ನಾಗರ ಪಂಚಮಿ ಎಂದರೆ ಹೆಣ್ಣು ಮಕ್ಕಳನ್ನು ತವರಿಗೆ ಕರೆಸಿಕೊಳ್ಳುವ ಸಂಭ್ರಮದ ಹಬ್ಬವಾಗಿದೆ ನಾಗಚೌತಿಯಂದು ನಾಗ ಪೂಜೆ ಮಾಡಿ ನೈವೇದ್ಯ ಸಲ್ಲಿಸಿ ಸ್ತ್ರೀಯರು ಹಾವಿನ ಹುತ್ತಗಳಿಗೆ ಹಾಗೂ ವಿಗ್ರಹಗಳಿಗೆ ಹಾಲನ್ನೆರೆದು ತಮ್ಮ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಲು ಬೇಡಿಕೊಳ್ಳುತ್ತಾರೆ. ಈ ನಾಗರ ಪಂಚಮಿಗೆ ಅಕ್ಕ ತಂಗಿಯರನ್ನು ಕರೆಯಲು ಅಣ್ಣ ಹೋಗುವದು ವಾಡಿಕೆ. ಅಣ್ಣ ಹಬ್ಬಕ್ಕೆ ಕರೆಯಲು ಬರದಾದಾಗ ಅಕ್ಕ ಅಥವಾ ತಂಗಿ ಹೀಗೆ ತಮ್ಮ ಅಳಲನ್ನು ಹಾಡಿನ ಮೂಲಕ ಹೇಳುವರು.

ಪಂಚಮಿ ಬಂತವ್ವ ಸನಿಯಾಕ
ನಮಣ್ಣ ಬರಲಿಲ್ಲ ಕರಿಯಾಕ
ಅವರ್‍ಯಾಕ ಬರತಾರ ಸಾವಕಾರು
ನಾವ್ಯಾಕ ಹೋಗತೇವ ಬಡವರು

ಪಂಚಮಿ ಹಬ್ಬ ಉಳಿದಿದ್ದ ದಿನಾಕ
ಅಣ್ಣ ಬರಲಿಲ್ಯಾಕ ಕರಿಯಾಕ
ನನ್ನ ತವರೂರ ನಂದನವನ
ಮನೆಯಂತಾಽಽ ರಾಜ ಮಂದಿರ
ನನ್ನ ಅಣ್ಣ ಭಾರಿ ಸಾವುಕಾರ
ಅಣ್ಣ ಬರಲಿಲ್ಲ್ಯಾಕ ಕರಿಯಾಕ
ನನ್ನ ತವರಲ್ಲಿ ಪಂಚಮಿ ಭಾರಿ
ಹರಳು ಅವಲಕ್ಕಿ ತಂಬಿಟ್ಟು ಸೂರಿ
ನೀನು ತಿನ್ನೋಕೆ ಮನೆಗೆ ಬಾಗ
ಹೆಂಗಾದೀತು ತಂಗಿ ಮರೆಯಾಕ
ನನ್ನ ಗೆಳತ್ಯಾರು ಮಾಡ್ತಾರೆ ಗೇಲಿ
ಅವ್ರು ಆಡೋದು ಅಲ್ಲಿ ಜೋಕಾಲಿ

ಹಬ್ಬ ಬಂದ್ರು ಬರಲಿಲ್ಲ ಅಣ್ಣ ಯಾಕ

ಮನಸ್ಸು ಹರಿತ್ತೈತೆ ತವರಿಗೋಗಾಕ||

ಹೀಗೆ ಅಕ್ಕ - ತಂಗಿಯರು ಹಬ್ಬದ ಸನಿಹದಲ್ಲಿ ತವರೂರ ನೆನಪಾಗಿ ಕರೆಯಲು ಬರದ ಅಣ್ಣನ ಹಾದಿಯನ್ನು  ಕಾಯುತ್ತಾ ಕುಳಿತಿರುವ ದೃಶ್ಯ ವರ್ಣನೆ ಈ ಹಾಡುಗಳಲ್ಲಿ ಕಾಣಬಹುದು.

**ಮಕ್ಕಳ ಹಾಡುಗಳು**

ಜಾನಪದ ಸಾಹಿತ್ಯದಲ್ಲಿ ಶಿಶುಗೀತೆ ಅಥವಾ ಶಿಶುಪ್ರಾಸಗಳದೊಂದು ಪ್ರಕಾರವಾಗಿದೆ. ಇವುಗಳಿಗೆ ಮಕ್ಕಳ ಹಾಡುಗಳೆಂದು ಕರೆಯುತ್ತಾರೆ. ಪಾಠ ಬೇಸರ ತಂದಾಗ ಆಟಗಳಿಗೆ ಹೊಂದಿಕೊಂಡು ಬರುವ ಈ ಹಾಡುಗಳಲ್ಲಿ ವಿನೋದ, ಹಾಸ್ಯ, ಅಣಕ ರಂಜನೀಯ ವಿಷಯಗಳನ್ನೊಳಗೊಂಡಿರುತ್ತವೆ. ಈ ವಿಧದ ವಿಶಿಷ್ಟ ಬಗೆಯ ಶಿಶುಪ್ರಾಸಗಳಲ್ಲಿ ಸಜ್ಜಾನ ಗಾಣಿಗರ ಜನಾಂಗದ ಸಮೂಹದಿಂದ ಸಂಗ್ರಹಣೆ ಮಾಡಿ ವಿಶ್ಲೇಷಣೆಗೆ ಕೆಲವು ಮಾತ್ರ  ತೆಗೆದುಕೊಳ್ಳಲಾಗಿದೆ.

'ಶಿಶುಪ್ರಾಸ'ಗಳ ಗುಣವೆಂದರೆ 'ಪದ ಚಮತ್ಕಾರ' ವಿರಳವಾಗಿ ಅರ್ಥ ಕಾಣಿಸಿಕೊಳ್ಳುವ ಕೆಲವು ರಚನೆಗಳಂತೂ ನೇರ ಅಥವಾ ಸರಳ ಸ್ವರೂಪದವು ಒಟ್ಟಿನಲ್ಲಿ ರಂಜನೆಯೇ ಅವುಗಳ ಮುಖ್ಯ ಗುರಿ, ಇವುಗಳಲ್ಲಿ ಕಲಾತ್ಮಕ ಅಂಶವಿಲ್ಲದಿದ್ದರೂ ಚಿಕ್ಕಮಕ್ಕಳು ಬಹಳವಾಗಿ ಪ್ರೀತಿಸುವ, ಬಹಳಹೊತ್ತು ಅಥವಾ ಬಹುದಿನ ನೆನಪಿನಲ್ಲಿಟ್ಟುಕೊಳ್ಳುವ ಲಯಬದ್ಧ ರಚನೆಗಳೆಂಬುದರಲ್ಲಿ ಎರಡು ಮಾತಿಲ್ಲ. ಇವುಗಳು ನಮ್ಮನ್ನು ವ್ಯಾವಹಾರಿಕ ಲೋಕದಿಂದ ಕುತೂಹಲ ಬರಿತ ರಮ್ಯಲೋಕಕ್ಕೆ ಕೊಂಡೊಯ್ಯುತ್ತಾರೆ ಇವು ಮಕ್ಕಳಲ್ಲಿ ಪರಂಪರಾಗತವಾಗಿ ವಾಕ್ ಪರಂಪರೆಯಲ್ಲಿ ಹರಿದು ಬಂದಿರುವವು.

ಮಕ್ಕಳಿಗೆ ಉಚ್ಚರಿಸಲು ಸುಲಭವಾಗುವಂತೆ ಇವುಗಳಿಗೆ ಪ್ರಾಸ ಮತ್ತು ಲಯ ಬದ್ಧತೆಯಿರುತ್ತದೆ. ಮಕ್ಕಳ ಸ್ಮರಣಶಕ್ತಿಯನ್ನು ಇವು ಅವಲಂಬಿಸಿದಕ್ಕಾಗಿರುತ್ತವೆ. ಮಕ್ಕಳು ಆಡುವಾಗ ಕುಳಿತಲ್ಲಿ, ನಿಂತಲ್ಲಿ ಹಿರಿಯರು ಯಾರೂ ಯಾರೋ ಸುಮ್ಮನೆ ಪ್ರಾಸ ಮುಖವಾಗಿ ಕಟ್ಟಿ ಇಡುವುದರಿಂದ ಇವುಗಳಿಗೆ ನಿರ್ಧಿಷ್ಟ ಅರ್ಥವಂತಿಕೆಯಿರುವುದಿಲ್ಲ. ಮಕ್ಕಳ ವಿನೋದ ಕ್ರೀಡೆಗಳಿಗಾಗಿ ಸಾಮೂಹಿಕವಾಗಿ ಸೇರುವುದರಿಂದ ಈ ಸಂದರ್ಭದಲ್ಲಿ ಹಾಡುವ ಹಾಡುಗಳಿಗೆ ಸಾಮೂಹಿಕತೆ ಇರುತ್ತದೆ. ಲೇವಡಿ ತುಂಟಾಟ, ಕಿಲಾಡಿತನಗಳು, ಬಾಲ ಬಾಲೆಯರ ನೈಸರ್ಗಿಕ ಗುಣಗಳು ಈ ಎಲ್ಲಾ ವೈಶಿಷ್ಟ್ಯಗಳು ಶಿಶು ಪ್ರಾಸಗಳಲ್ಲಿ ಇಣುಕು ಹಾಕಿವೆ. ಬಂಧು-ಬಳಗದಲ್ಲಿ ಮಕ್ಕಳು ಮುಜುಗರ ಬಿಟ್ಟು ಅತೀಸಲಿಗೆಯಿಂದ ವ್ಯವಹರಿಸುವ ವ್ಯಕ್ತಿ ಮಾವನನ್ನು ತನ್ನ ತಾಯಿಯ ಸೋದರ ಆದ್ದರಿಂದಲೇ ಮಕ್ಕಳಿಗೆ ಅವನಲ್ಲಿ ಪ್ರೀತಿ ಹಾಗೂ ಬಗೆಯ ವಿನೋದಿತ ಸಂಬಂಧಿವಿರುತ್ತದೆ. ಅಂತಹ ಮಾವನನ್ನು ಮಕ್ಕಳು ಕೆಲವು ಸಲ ಲೇವಡಿ ತಮಾಷೆ ಮಾಡಿ ಸಂತೋಷಗೊಳ್ಳುವ ಶಿಶುಗೀತೆ ಹೀಗಿದೆ.

ಮಾವ ಮಾವ ಮಾತಾಡೋ

ಮಾವಿನ ಗಿಡಕ ಜೋತಾಡೋ

ಆಟದ ವೇಳೆಯ ಪದಗಳು ಇತರೆ ಸಾಂಸ್ಕೃತಿಕ ಸಂದರ್ಭಗಳಲ್ಲಿ ದೊರೆಯುವದಾದರೂ ಅವುಗಳ ತಿರುಳು ಒಂದೇ ಆಗಿರುತ್ತವೆ. 'ಏಕರೂಪತೆ' ಆಟದ ಹಾಡುಗಳ ಗಮನಾರ್ಹ ಲಕ್ಷಣ, ಒಂದೇ ಬಗೆಯ ಆಟಗಳನ್ನು ಹಳ್ಳಿಯ ಮತ್ತು ಪೇಟೆಯ ಮಕ್ಕಳು ಆಡುತ್ತಾರೆ. ಬೇರೆ ಬೇರೆ ಹಿನ್ನೆಲೆ, ಪರಿಸರ, ವಾತಾವರಣವುಳ್ಳ ಮಕ್ಕಳು ಕೆಲಸಗಾರರ ಸಮುದಾಯದ ಉಪನಗರಗಳಲ್ಲಿ ವಾಸಿಸುವ ಮಕ್ಕಳಂತೆ ಮೂಲಭೂತವಾಗಿ ವಿನೋಧ ಆಟಗಳನ್ನು ಪ್ರದರ್ಶಿಸುತ್ತಾರೆ, ನಾಗರಿಕ ಹಿನ್ನೆಲೆ ಹಾಗೂ ಸೌಕರ್ಯಗಳಿಗನುಗುಣವಾಗಿ ಅವು ವ್ಯತ್ಯಾಸಗೊಳ್ಳುತ್ತವೆ.

ಬಟ್ಟ ಬಟ್ಟ ಬರೊಬ್ಬರಿ
ಭಟನ ಜುಟ್ಟಾ ಇಲಿಮರಿ
ಹಡದಾನಪ್ಪ ಹಂದಿಮರಿ

ಹೀಗೆ ಗ್ರಾಮಾಂತರ ಮಕ್ಕಳು ಹಾಡುತ್ತಾರೆ. ಮಕ್ಕಳ ಆಟಗಳ ಪ್ರಚೋದನೆಯಂತೆಯೇ ಪರಿಸರ ಸ್ಫೂರ್ತಿಯಿಂದಲೂ ಶಿಶುಪ್ರಸಂಗಗಳು ಹುಟ್ಟಿಕೊಳ್ಳುತ್ತವೆ. ಇದಕ್ಕೆ ಹೊಂದಿಕೊಳ್ಳುವಂತೆ ಒಂದು ಹಾಡು ಹೀಗಿದೆ.

ಕೈ ಕೈ ಎಲ್ಲೋಯ್ತು
ಕದ ಸಂದ್ಯಾಗ ಹೋಯ್ತು
ಕದ ಏನ ಕೊಟ್ತು
ಕಟ್ಟಿಗೆ ಕೊಟ್ತು
ಕಟಗಿ ಏನ ಮಾಡ್ದಿ
ವಲ್ಯಾಗ ಹಾಕಿದೆ
ವಲಿ ಏನ ಕೊಡತು
ಬೂದಿ ಕೊಡತು
ಬೂದಿ ಏನ ಮಾಡ್ದಿ
ಹೊಲಕ್ಕೆ ಹಾಕ್ದೆ
ಹೊಲ ಏನ ಕೊಡತು

ಹೀಗೆ ಪ್ರಾಸದ ಹಾಡು ಉದ್ದಕ್ಕೂ ಬೆಳೆದು ಮುಂದೆ ಹಸುವಿನ ಬಗ್ಗೆ ಹಾಲಕೊಟ್ಟ ವಿಚಾರ ಸಂಗತಿ ಮಕ್ಕಳಿಗೆ ಖುಷಿ ಕೊಡುವಂತದ್ದು.

ಶಿಶು ಪ್ರಾಸಗಳಲ್ಲಿ ಕೇವಲ ಖುಷಿಕೊಡುವ ಸಂಗತಿಗಳ ಹಾಡುಗಳಷ್ಟೇ ಇರುವುದಿಲ್ಲ. ಅವುಗಳ ಜೊತೆಗೆ ಬದುಕಿಗೆ ಹಾಗೂ ವ್ಯವಸಾಯಕ್ಕೆ ಸಂಬಂಧಿಸಿದ ವಿಭಿನ್ನ ಸಂಗತಿಗಳೂ ಇವೆ. ವ್ಯವಸಾಯ ಮಳೆಯನ್ನು ಆಧರಿಸಿರುವದರಿಂದ ಹೊಲವನ್ನು ಉತ್ತುವುದು ಬಿತ್ತುವುದು ಮಳೆ ಬಾರದಿದ್ದಾಗ ಪೈರುಗಳು ಸರಿಯಾಗಿ

ಬೆಳೆಯದಿದ್ದಾಗ ಮಳೆ ಬರದೆ ಕೆರೆ ಬಾವಿಗಳು ಒಣಗಿದಾಗ ಹಳ್ಳಿಗರ ಜೀವನ ಕಷ್ಟಮಯವಾಗುತ್ತದೆ. ಇಂತಹ ಸ್ಥಿತಿ ಬರಬಾರದೆಂದು ಮಕ್ಕಳು ಬಯಸಿ ಬೇಡಿಕೊಳ್ಳುವ ಹಾಡು ಹೀಗಿದೆ.

ಹುಯ್ಯೋ ಹುಯ್ಯೋ ಮಳೆರಾಯ

ಹೂವಿನ ತೋಟಕೆ ನೀರಿಲ್ಲ

ಕೆಚ್ಚೋ ಕೆಚ್ಚೋ ಮಳೆರಾಯ

ಕಟ್ಟೆ ಕೆರೆಗೆ ನೀರಿಲ್ಲ

ಬಾರೋ ಬಾರೋ ಮಳೆರಾಯ

ಬಾಳೆ ತೋಟಕೆ ನೀರಿಲ್ಲ

ಮಕ್ಕಳು ಆಡುವ ಆಟಗಳು ಬರಿ ಆಟಗಳಲ್ಲಿ ಅವುಗಳ ಜೊತೆಯಲ್ಲಿಯೇ ಮಾತುಗಳು ಸೇರಿ ಹಾಡುಗಳು ಹುಟ್ಟುತ್ತವೆ. ಆಡುವದು ಮತ್ತುಹಾಡುವುದೂ ಎರಡೂ ಉಂಟು, ಹೆಣ್ಣು ಮಕ್ಕಳೇ ಹೆಚ್ಚಾಗಿ ಆಟವಾಡುವ ಹಾಡೊಂದು ಹೀಗಿದೆ.

ರತ್ತೋ ರತ್ತೋ ರಾಯನ ಮಗಳೆ

ಬಿತ್ತೋ ಬಿತ್ತೋ ಭೀಮನ ಮಗಳೆ

ಹದಿನಾರೆಮ್ಮೆ ಕರಿಯಲಾರೆ

ಹದಿನಾರೆಮ್ಮೆ ಕಾಯಲಾರೆ

ಬೈಟ್ ಗುಬ್ಬಿ ಬಾಳೆಕಂಬ

ಕುಕ್ಕರೆ ಬಸವಿ ಕೂರ ಬಸವಿ

ಇಬ್ಬರು ಹೆಣ್ಣು ಮಕ್ಕಳು ಎದುರು ಬದುರಾಗಿ ನಿಂತು ಇಬ್ಬರೂ ತಮ್ಮ ಕೈಗಳನ್ನು ಮುಂದಕ್ಕೆ ಚಾಚಿ ಕೈ ಹಿಡಿದು ಗಿರಿಗಿಟ್ಟಿ ಸುತ್ತುತ್ತಾರೆ. ಹಾಗೆ ಸುತ್ತುವಾಗ ಈ ಹಾಡನ್ನು ಹಾಡುತ್ತಾರೆ.

ಶಿಶುಪ್ರಾಸಗಳ ವಸತು ಮತ್ತು ರಚನೆಯಲ್ಲಿ ಎಷ್ಟೇ ಏಕತಾನತೆ ಇದ್ದರೂ ಅವುಗಳ ಸಾಹಿತ್ಯಿಕ ಪ್ರಕಾರಗಳಿಗೆ ಹೋಲಿಸಿದರೆ ಶಿಶುಪ್ರಾಸಗಳಲ್ಲಿ ಸಾಹಿತ್ಯ ಅಂಶ ಕಡಿಮೆ ಆದರೆ ಅವುಗಳಲ್ಲಿನ ಪ್ರಾಸ, ನಾದ ಮತ್ತು ಲಯಗಾರಿಕೆಗಳು ಪರಿಣಾಮಕಾರಿಯಾದವು. ಇದರಿಂದಾಗಿಯೇ ಇವುಗಳಲ್ಲಿ ಆನಂದಗೊಳಿಸುವ ಗುಣವಿದೆ. ಹಾಸ್ಯ ವಿಡಂಬನೆ, ಶಕ್ಯಾಚಿತ್ರ, ಅನ್ಯೋಕ್ತಿ, ನಾಟಕೀಯತೆ, ಕಥನ ಪ್ರಾಸ, ಬಿಡಿ ಬಿಡಿ ಚಿತ್ರಗಳಿಂದಾಗಿ ನಮ್ಮನ್ನು ಆಕರ್ಷಿಸುವವು.

ಕಣ್ಣಾ ಮುಚ್ಚೆ ಕಾಡೆಗೂಡೆ

ಮುದ್ದಿನ ಮೂಟೆ ಚಿಟ್ಟೆ ಬಿಟ್ಟೆ

ನಿಮ್ಮಯ ಹಕ್ಕಿ ಮುಚ್ಚಿಕೊಳ್ಳಿ (ಅಡಗಿಸಿಕೊಳ್ಳಿ)

ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ

ಉಭಯತರು ಆಡುವ ಕಣ್ಣೆ ಮುಚ್ಚಾಲೆಯಾಟದಲ್ಲಿ ಇಲ್ಲಿ ಇವರ ಬಿಟ್ಟು ಇವರ್‍ಯಾರು? ಎಂಬುದು ಗೇಯ ಗುಣವನ್ನು ಹೊಂದಿದೆ.

ಗಣಪ್ಪ ಬಂದ ಹೊಟ್ಟೆ ಮೇಲೆ ಗಂಧ
ಕಾಯ ಕಡುಬ ತಿಂದ ಬಾವ್ಯಾಗ ಬಿದ್ದ
ಮುಣಗಿ ಮುಣಗಿ ಎದ್ದ.
ಜೇನು ಜೇನು ಎಂತಹ ಜೇನು
ನಿನ್ನಯ ಜೇನು ಎಂತಹ ಜೇನು
ಕಣ್ಣೆ ಕಣ್ಣೆ ಎಂತಹ ಕಣ್ಣೆ
ನಿನ್ನಯ ಕಣ್ಣೆ ಕಮಲದ ಕಣ್ಣೆ ಎಂತಹ ಕಣ್ಣೆ
ತುಟಿ ತುಟಿ ಎಂತಹ ತುಟಿ
ಸಂಪಿಗೆ ತುಟಿ
ಕನ್ನೆ ಕನ್ನೆ ನಿನ್ನಯ ಕೆನ್ನೆ
ಎಂತಹ ಕೆನ್ನೆ ಕಮಲದ ಕೆನ್ನೆ.

ಅನೀರಿಕ್ಷಿತವಾಗಿ ಆಟವು ಮಗುವಿಗೆ ಆನಂದವನ್ನಿತ್ತಾಗ ಆ ಆನಂದವನ್ನು ಮತ್ತೊಂದು ಮಗುವಿನೊಂದಿಗೆ ಹಂಚಿಕೊಳ್ಳುವ ಉದ್ದೇಶದಿಂದ ಮಗು ತನ್ನ ಅರಿವಿಲ್ಲದೆಯೇ ಕೆಲವು ವಿಶಿಷ್ಟ ಪದಗಳನ್ನು ಜೋಡಿಸಿ ಉಚ್ಚಾರಿಸಿರಬೇಕು. ಹಿರಿಯರಿಗೆ ನೆರವಾಗುವವ ಕಾಯದಲ್ಲಿ ದಣಿವು ಆರಿಸಿಕೊಳ್ಳಲು ವಿನೋದ ನಡೆದಾಗ ಅಲ್ಲಿರುವ ಮಕ್ಕಳು ಪ್ರಾಸಗಳನ್ನು ರಚಿಸುತ್ತಿದ್ದರು. ಅಂಥ ಸಮಯದಲ್ಲಿ ಪ್ರಾಸಗಳು ಉಗಮಗೊಂಡಿರಬಹುದು. ಹೀಗಾಗಿ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಶಿಶುಪ್ರಾಸಗಳು ಮಹತ್ವದ ಪಾತ್ರವನ್ನು ವಹಿಸಿವೆ.

• • •

ಅಧ್ಯಾಯ : ಏಳು

# ಸಜ್ಜನ ಗಾಣಿಗ ಸಮುದಾಯದ ಮಹಿಳೆ

## ಅಧ್ಯಾಯ : ಏಳು

## ಸಜ್ಜನ ಗಾಣಿಗ ಸಮುದಾಯದ ಮಹಿಳೆ

### ೭.೧. ಮಹಿಳೆಯ ಪಾತ್ರ

ಭಾರತೀಯ ಹಿಂದೂ ಪರಂಪರೆಯು ಪುರುಷ ಪ್ರಧಾನ ಸಮುದಾಯವಾಗಿದ್ದು, ಇದರಲ್ಲಿ ಮಹಿಳೆಗಿರುವ ಪಾತ್ರಗಳೆಂದರೆ, ಮಹಿಳೆಯು ಬಾಲ್ಯದಲ್ಲಿ ತಂದೆಯ ಅಧೀನ, ಯೌವನದಲ್ಲಿ ಗಂಡನ ಅಧೀನ ಮತ್ತು ಮುಪ್ಪಿನಲ್ಲಿ ಮಕ್ಕಳ ಅಧೀನದಲ್ಲಿರಬೇಕು. ಇದು ಮಹಿಳೆಗಿರುವ ಪಾತ್ರ. ಸಜ್ಜನ ಗಾಣಿಗರ ಸಮುದಾಯದ ಮಹಿಳೆಯು ತನ್ನ ಗಂಡನಿಗೆ ಹೆಂಡತಿಯಾಗಿ, ಮಕ್ಕಳಿಗೆ ತಾಯಿಯಾಗಿ, ಮೊಮ್ಮಕ್ಕಳಿಗೆ ಅಜ್ಜಿಯಾಗಿ, ತನ್ನ ಪಾತ್ರವನ್ನು ಮಾಡುತ್ತಿದ್ದಳು. ಇಲ್ಲಿ ತನ್ನ ಗಂಡನಿಗೆ ಲೈಂಗಿಕ ಕ್ರಿಯೆಯಲ್ಲಿ ಭಾಗವಹಿಸುತ್ತಿದ್ದಳು. ಮಗುವಿನ ಜನನ ಹಾಗೂ ಮಗುವಿಗೆ ತಾಯಿ ಪ್ರೀತಿ ಮತ್ತು ಪ್ರೇಮವನ್ನು ಒದಗಿಸುವ ಕಾರ್ಯವನ್ನು ಮಹಿಳೆ ಮಾಡುತ್ತಿದ್ದಳು. ಧಾರ್ಮಿಕ ಕಾರ್ಯದಲ್ಲಿಯೂ ಗಂಡ ಹೆಂಡತಿ ಇಬ್ಬರು ಭಾಗಿಗಳಾಗಬೇಕಾಗಿತ್ತು. ಇಲ್ಲಿ ''ಸತಿ ಪತಿಯರೊಂದಾದ ಭಕ್ತಿ ಶಿವಂಗೆ ಹಿತವಾದುದು ನೋಡ'' ಎಂಬ ನುಡಿಯು ಸತಿ ಪತಿಯರ ಭಕ್ತಿಯ ಸಂಬಂಧವನ್ನು ತಿಳಿಸುವುದಾಗಿದೆ. ಸಜ್ಜನ ಗಾಣಿಗರಲ್ಲಿ ಮಹಿಳೆಯು ಮನೆಗೆಲಸದ ಜೊತೆಗೆ ವ್ಯವಸಾಯ, ಹೈನುಗಾರಿಕೆ, ಕೆಲಸಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಕೆಲಸ ಮಾಡುತ್ತಿದ್ದಳು.

ಕುಟುಂಬದಲ್ಲಿ ಮಹಿಳೆಗೆ ಪುರುಷನಷ್ಟು ಸ್ವಾತಂತ್ರ್ಯತೆಗಳಿಲ್ಲ. ಕಾರಣ ಸಜ್ಜನ ಗಾಣಿಗ ಸಮುದಾಯವು ಪುರುಷನನ್ನು ಎತ್ತಿ ಇಡಿದು ಮಹಿಳೆಯನ್ನು ಕಡೆಗಣಿಸಿದೆ. ವಿಧವಾ ಮರು ವಿವಾಹಕ್ಕೆ ಅವಕಾಶಗಳಿಲ್ಲ. ಸಜ್ಜನ ಗಾಣಿಗರಲ್ಲಿ ಗಂಡ ತೀರಿಹೋದ ವಿಧವೆ ಮಹಿಳೆಯು ಪುನರ್ ವಿವಾಹವಾಗಲು ಅವಕಾಶವನ್ನು ಕೊಟ್ಟಿಲ್ಲ. ಗಂಡ ಸತ್ತಿದ್ದರೂ ಗಂಡನ ಸವಿನೆನಪಿನಲ್ಲಿ ವಿಧವೆಯಾದವಳು ಜೀವನ ಮುಂದುವರೆಸಬೇಕಾಗಿತ್ತು. ವಿಧವೆಯಾದವಳು ತಾನು ಸಾಯುವವರೆಗೂ ವಿವಾಹವಾಗುವಂತಿಲ್ಲ.

### ೭.೨. ಹಬ್ಬ ಹರಿದಿನಗಳಲ್ಲಿ ಮಹಿಳೆ

ಮಹಿಳೆಗೆ ಹಬ್ಬ ಹರಿದಿನಗಳಲ್ಲಿ ಪ್ರಧಾನ ಸ್ಥಾನವನ್ನು ನೀಡಲಾಗಿದೆ. ಸಂಕ್ರಾಂತಿ, ನಾಗರ ಪಂಚಮಿ, ಗೌರಿ ಗಣೇಶ, ಮಹಾನವಮಿ, ದೀಪಾವಳಿ, ಯುಗಾದಿ ಮುಂತಾದ ಹಬ್ಬಗಳನ್ನು ಸಂಪ್ರದಾಯಕ್ಕೆ

ಅನುಗುಣವಾಗಿ ವಿಶೇಷವಾಗಿ ಆಚರಿಸುತ್ತಾರೆ. ಈ ಹಬ್ಬ ಹರಿದಿನಗಳಲ್ಲಿ ಪುರುಷರಿಗಿಂತ ಮಹಿಳೆಯರಿಗೆ ವಿಶೇಷವಾದ ಸ್ಥಾನಮಾನಗಳಿವೆ. ಅದರಲ್ಲಿಯೂ ನಾಗರ ಪಂಚಮಿಯು ಮಹಿಳೆಯರು ಹುತ್ತಕ್ಕೆ ಪೂಜೆ ಸಲ್ಲಿಸಿ ಒಂದು ಬಾಳೆಯ ಎಲೆಯಲ್ಲಿ ಉಂಡಿಗಳನ್ನಿಟ್ಟು ಇಡೀ ಕುಟುಂಬದ ಮಹಿಳೆ ಮತ್ತು ಪುರುಷರೆಲ್ಲರೂ ನಾಲ್ಕು ಉಂಡಿಗಳನ್ನು ಎಲೆ ಅಡಿಕೆ ಹಾಗೂ ಬಾಳೇಹಣ್ಣು, ಚಿಗಳಿ, ಟೊಮಟೊ ಇವುಗಳನ್ನು ಅಲ್ಲಿ ಬಂದ ನಾಲ್ಕೂ ಜನ ಮಹಿಳೆಯರಿಗೆ ಉಡಿದುಂಬುವ ಶಾಸ್ತ್ರವನ್ನು ಮಾಡಿ, ಒಂದು ಉಂಡಿಯನ್ನು ನಾಗರ ಹುತ್ತಕ್ಕೆ ಹಾಕುತ್ತಾರೆ. ಹಾಗೂ ಅಲ್ಲಿ ಸೇರಿದವರೆಲ್ಲಾ ಮಹಿಳೆಯರೊಟ್ಟಾಗಿ ಹುತ್ತಕ್ಕೆ ಹಾಲೆರೆದು ಪೂಜಿಸುತ್ತಾರೆ. ಹುತ್ತವಿಲ್ಲದ ಕಡೆಗಳಲ್ಲಿ ದೇವಸ್ಥಾನಗಳ ಮುಂದೆ ಇರುವ, ದೇವರ ಕಟ್ಟಿಯಲ್ಲಿ ಕಲ್ಲಿನಿಂದ ಮಾಡಿದ ನಾಗರ ಪ್ರತಿಮೆ ಇರುತ್ತದೆ.

ಮಹಿಳೆಯು ಹಬ್ಬ ಹರಿದಿನಗಳಲ್ಲಿ ವಿಶೇಷವಾದ ಸಿಹಿ ಅಡಿಗೆಯನ್ನು ಮಾಡಿ ಇಡೀ ಕುಟುಂಬದ ಸದಸ್ಯರೆಲ್ಲರೂ ಸೇರಿರುತ್ತಾರೆ. ಜೊತೆಗೆ ಕುಟುಂಬದ ನೆಂಟರಿಷ್ಟರುಗಳು ಹಬ್ಬ ಹರಿದಿನಗಳಿಗೆ ಬರುವುದುಂಟು. ಪೂಜೆಯ ಜೊತೆಗೆ ಸಹ ಬೋಜನವನ್ನು ಇಲ್ಲಿ ಮಾಡುವರು. ಪುರುಷರ ಊಟದ ನಂತರ ಮನೆಯ ಮಹಿಳೆಯರೆಲ್ಲರೂ ಸೇರಿ ಊಟ ಮಾಡುವರು. ಈ ಹಬ್ಬ ಹರಿದಿನಗಳು ಸಜ್ಜನ ಮಹಿಳೆಯರಿಗೆ, ವಿಶೇಷ ಸ್ಥಾನಮಾನವನ್ನು ಕಲ್ಪಿಸಿ ಕೊಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

### ೭.೩. ವ್ಯಾಪಾರ ಮತ್ತು ವ್ಯವಸಾಯದಲ್ಲಿ ಮಹಿಳೆ

ಸಜ್ಜನ ಗಾಣಿಗರಲ್ಲಿ ಮಹಿಳೆಯು ವ್ಯಾಪಾರದಲ್ಲಿ ಭಾಗವಹಿಸುವುದನ್ನು ಗಮನಿಸುತ್ತೇವೆ. ಇವರಲ್ಲಿ ಕೆಲವು ಮಹಿಳೆಯರಿಗೆ ಕಿರಾಣಿ ಅಂಗಡಿಯನ್ನು ಇಟ್ಟು ಕೊಡುತ್ತಿದ್ದಾರೆ. ಇದರಲ್ಲಿ ವಿವಿಧ ವಸ್ತುಗಳ ಜೊತೆಗೆ ವಿವಿಧ ಬಗೆಯ ಎಣ್ಣೆಗಳನ್ನು ಮಾರಾಟ ಮಾಡುತ್ತಾರೆ. ಲಾಭವನ್ನು ಸಹ ಇದರಿಂದ ಪಡೆಯುತ್ತಾರೆ. ಸಜ್ಜನ ಗಾಣಿಗ ಮಹಿಳೆಯರು ವಾರ ಸಂತೆಗಳಲ್ಲಿ ತಮ್ಮ ಪಾತ್ರವನ್ನು ತೋರಿಸುತ್ತಾರೆ. ಜೊತೆಗೆ ಕಿರಾಣಿ ಅಂಗಡಿಗಳಲ್ಲಿ ಬೇರೆ ವಸ್ತುಗಳ ಜೊತೆಗೆ ವಿಶೇಷವಾಗಿ ವಿವಿಧ ಮಿಲ್‌ಗಳು ತಯಾರುಮಾಡಿದ ವಿವಿಧ ಬಗೆಯ ಎಣ್ಣೆಗಳನ್ನು ಇವರು ವ್ಯಾಪಾರ ಮಾಡುತ್ತಾರೆ. ಇದರಲ್ಲಿ ಮಹಿಳೆಯ ಪಾತ್ರವು ವ್ಯಾಪಾರದಲ್ಲಿ ಪ್ರಮುಖವಾಗಿದೆ. ಕಾರಣವೇನಂದರೆ ಪುರುಷರು ವ್ಯವಸಾಯ ಅಥವಾ ಬೇರೆ ವೃತ್ತಿ ಮಾಡುತ್ತಿರುವಾಗ ಕಿರಾಣಿ ಅಂಗಡಿಗಳನ್ನು ನೋಡಿಕೊಂಡು ನಿಭಾಹಿಸುವವರು ಕಲಿತ ಮಹಿಳೆಯರೇ ಆಗಿದ್ದಾರೆ.

ಸಜ್ಜನ ಗಾಣಿಗರಿಗೂ ಮತ್ತು ವ್ಯವಸಾಯಕ್ಕೂ ಬಹಳಷ್ಟು ನಂಟಿದೆ. ಕಾರಣವೆಂದರೆ ಇವರು ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಸುಮಾರು ೮೦ರಷ್ಟು ಜನ ವ್ಯವಸಾಯದಲ್ಲಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ಮಹಿಳೆಯು ಮನೆಗೆಲಸಗಳೊಂದಿಗೆ, ವ್ಯವಸಾಯದಲ್ಲಿ ಕೂಲಿಗಳಿಂದ ಕಳೆತೆಗೆಸುವುದು ಬೀಜ ಬಿತ್ತಿಸುವುದು ಬೆಳೆ ಕಟಾವು ಮಾಡಿಸುವುದು, ಮುಂತಾದ ವೃತ್ತಿಗಳಲ್ಲಿ ಸಜ್ಜನ ಗಾಣಿಗ ಮಹಿಳೆಯರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ವ್ಯವಸಾಯದಲ್ಲಿ ಪುರುಷನಿಗೆ ಕೈಜೋಡಿಸಿ ಮಹಿಳೆಯು ಸಹ

ದುಡಿಯುತ್ತಿರುವುದನ್ನು ಗಮನಿಸುತ್ತೇವೆ. ಇತ್ತೀಚಿನ ಯಂತ್ರಗಳ ಮೂಲಕ ಬಿತ್ತನೆ ಮತ್ತು ಕೊಯ್ಲನ್ನು ಮಾಡುತ್ತಿದ್ದರೂ, ಇದರಲ್ಲಿ ಮಹಿಳೆಯ ಜವಾಬ್ದಾರಿ ತುಂಬಾ ಇದೆ.

**೭.೪. ನಿರ್ಣಯ ತೆಗೆದುಕೊಳ್ಳುವ ಸಂದರ್ಭದಲ್ಲಿ ಮಹಿಳೆ ಪಾತ್ರ**

ವೇದಗಳ ಸಂಪ್ರದಾಯದ ಕಾಲದಲ್ಲಿ ಮಹಿಳೆಯರಿಗೆ ಎಲ್ಲಾ ಸಿಗುವುದು ಕಷ್ಟವಾಯಿತು. ಇತ್ತೀಚೆಗೆ ಅವಕಾಶವಿದೆ. ಅಂದರೆ ಕೌಟುಂಬಿಕ ವಿಚಾರಗಳ ಬಗ್ಗೆ, ವೈವಾಹಿಕ ವಿಚಾರಗಳ ಬಗ್ಗೆ ಮತ್ತು ಕುಟುಂಬದ ಆಸ್ತಿಯನ್ನು ಕೊಡುವ ಮತ್ತು ತೆಗೆದು ಕೊಳ್ಳುವುದರ ಬಗ್ಗೆ ನಿರ್ಣಯ ತೆಗೆದು ಕೊಳ್ಳುವಲ್ಲಿ, ಪುರುಷರಂತೆ ಮಹಿಳೆಯರಿಗೂ ವಿಶೇಷ ಸ್ಥಾನ ಕೊಡಲಾಗಿದೆ. ಮಕ್ಕಳ ಶಿಕ್ಷಣ ಕೊಡುವಾಗ ನಿರ್ಣಯ ತೆಗೆದುಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ.

**೭.೫. ಸ್ವಂತ ಉದ್ಯೋಗದಲ್ಲಿ ಮಹಿಳೆ**

ಸಜ್ಜನ ಗಾಣಿಗ ಮಹಿಳೆಯರು ಸ್ವಂತ ಉದ್ಯೋಗಸ್ಥರಾದಲ್ಲಿ ಇಂದು ಸ್ವತಂತ್ರ್ಯ ಬದುಕನ್ನು ನಡೆಸಲು ಹಾತೊರೆಯುತ್ತಿರುತ್ತಾರೆ. ಸ್ವಂತ ಉದ್ಯೋಗಸ್ಥ ಮಹಿಳೆಯರು ಪುರುಷನಷ್ಟೇ ಸ್ಥಾನಮಾನಗಳನ್ನು ಬಯಸುತ್ತಾಳೆ. ಜೊತೆಗೆ ಮಹಿಳೆಯರ ದುಡಿಮೆ ನಿರ್ಧಿಷ್ಟ ವೇತನವನ್ನು ಪಡೆಯುತ್ತಿರುವ ಸಜ್ಜನ ಮಹಿಳೆಯು ವಿಶೇಷವಾಗಿ ಅರ್ಥಿಕ ಸ್ವಾವಲಂಬನೆಯನ್ನು ಪಡೆಯಲು ಹಾತೊರೆಯುವುದು, ಒಂದೆಡೆಯಾದರೆ, ಪುರುಷನಿಗೆ ದುಡಿಮೆಯಲ್ಲಿ ನಾನೇನು ಕಡಿಮೆಯಿಲ್ಲ ಎಂಬ ಮನೋಭಾವನೆ ಮೂಡುತ್ತಿದೆ. ಒಟ್ಟಿನಲ್ಲಿ ಸ್ವಂತ ಉದ್ಯೋಗಸ್ಥ ಮಹಿಳೆ ಪುರುಷನಷ್ಟೇ ನಾನು ಕೂಡ ಆರ್ಥಿಕವಾಗಿ ಸರಿ ಸಮಾನ ಎಂಬ ಭಾವನೆ ಮಹಿಳೆಯರಲ್ಲಿ ಆಧುನಿಕವಾಗಿ ಬೆಳೆಯತೊಡಗಿದೆ.

ಒಟ್ಟಿನಲ್ಲಿ ಸಜ್ಜನ ಗಾಣಿಗರ ಮಹಿಳೆಯು ಆಧುನಿಕ ದಿನಮಾನಗಳಿಗೆ ತಕ್ಕಂತೆ ಸಮಕಾಲೀನ ಬದುಕಿನಲ್ಲಿ ಹೊಸತನವನ್ನು ಕಂಡುಕೊಂಡು ಮುನ್ನಡೆಯುವಲ್ಲಿ ಪ್ರಯತ್ನಿಸುತ್ತಿದ್ದಾಳೆ.

**ಮಹಿಳೆಯ ಸ್ಥಾನ ಮಾನಗಳಲ್ಲಾಗಿರುವ ಬದಲಾವಣೆ**

**"ಎಲ್ಲಿ ಸ್ತ್ರೀಯರು ಗೌರವಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ಸಂತೋಷ ಪಡೆತ್ತಾರೆ." ಆರ್‍ಯೋಕ್ತಿ**

ಈ ಮೇಲಿನ ಮಾತನ್ನು ಗಮನಿಸಿದಾಗ ಎಷ್ಟರ ಮಟ್ಟಿಗೆ ಸ್ತ್ರೀಯರಿಗೆ ಮಹತ್ವವನ್ನು ನೀಡಿದ್ದೇವೆಂಬುದನ್ನು ತಿಳಿಯುವುದು ಅವಶ್ಯವಾಗಿದೆ. ಮನು ತನ್ನ ಮನುಸ್ಮೃತಿಯಲ್ಲಿ ತಿಳಿಸಿರುವಂತೆ ನಃಸ್ತ್ರೀ ಸ್ವಾಂತಂತ್ರ್ಯಂ ಅರ್ಹತಿ ಎಂದು ಹೇಳಿ ಅವಳಿಗೆ ಸ್ವಾತಂತ್ರ್ಯವಿಲ್ಲ. ಅವಳು ಬಾಲ್ಯದಲ್ಲಿ ತಂದೆ ಯೌವನದಲ್ಲಿ ಗಂಡ ಮುಪ್ಪಿನಲ್ಲಿ ಮಕ್ಕಳ ಆಧೀನದಲ್ಲಿರಬೇಕು. ಆದರೆ ಕಾಲಮಾನ ಬದಲಾದಂತೆ ಬದುಕಿನ ವಿವಿಧ ಹಂತಗಳಲ್ಲಿ ಬದಲಾವಣೆ ಮಾಡುವುದು ಅವಶ್ಯವಿದೆ. ''ಬೌದ್ಧಿಕವಾಗಿ ಬೆಳದಂತೆ ವಿಕಾಸವಾಗುತ್ತದೆ. ವಿಕಾಸವಾಗುತ್ತಾ ಹೊಂದಂತೆ ಬದಲಾವಣೆಯಾಗುತ್ತದೆ. ಬದಲಾವಣೆಯಾಗುತ್ತ ಹೊಂದಂತೆ ಪ್ರಗತಿ ಹೊಂದುತ್ತದೆ''. ಇದರ ತಾತ್ಪರ್ಯ ಯಾವುದು ಸ್ಥಿರವಾಗಿ ಉಳಿಯಲಾರದು ಎಂಬ ಮಾತು ಸತ್ಯ. ಬದುಕಿನಲ್ಲಿ ಗಂಡು-ಹೆಣ್ಣು ಎರಡು ಮುಖ್ಯ

ಇವು ಒಂದು ನಾಣ್ಯದ ಎರಡು ಮುಖಗಳು. ಬಂಡಿಯ ಎರಡು ಗಾಲಿಗಳು ಎಂದು ಹೇಳುತ್ತೇವೆ. ಆದರೆ ಸ್ತ್ರೀಯರ ವಿಷಯಕ್ಕೆ ಬಂದಾಗ ದೂರ ಸರಿಯುತ್ತೇವೆ. ಇದನ್ನು ಸ್ತ್ರೀಯರು ತಿಳಿಯಬೇಕಾಗಿದೆ. ಒಂದು ಮನೆಯಲ್ಲಿ ಪರಸ್ಪರ ಮನ ಸಮಾನವಾಗಿರಬೇಕು ಎಂಬುದನ್ನು ಅರಿತವರಾಗಬೇಕು.

೧೨ನೇ ಶತಮಾನದಲ್ಲಿ ಮಹಾ ಮಾನವತಾವಾದಿ ಬಸವಣ್ಣ ಸ್ತ್ರೀಯರಿಗೆ ಸಮಾನತೆ ತಂದು ಕೊಟ್ಟರು. ನೂರು ವರ್ಷಗಳಾಗಿದ್ದರೂ ನಾವು ಬದಲಾಗಿದ್ದೇವೆಯೇ ಎಂದು ಅಂತರಾವಲೋಕನ ಮಾಡಿಕೊಳ್ಳಬೇಕಾಗಿದೆ.

''ಮನೆಯೇ ಮೊದಲ ಪಾಠಶಾಲೆ

ಜನನಿ ತಾನೇ ಮೊದಲ ಗುರು

ಜನನಿಯಿಂದ ಪಾಠ ಕಲಿತ ಜನರು ಧನ್ಯರು'' ಎಂದು ಹಿರಿಯರು ಹೇಳುತ್ತಾರೆ. ತಾಯಿಯ ಋಣವನ್ನು ಅಥವಾ ಉಪಕಾರವನ್ನು ಈ ಜನ್ಮದಲ್ಲಿ ತೀರಿಸಲು ಸಾಧ್ಯವಿಲ್ಲವೆಂದು ಜನಪದರು ಹಾಡಿ ಹೊಗಳಿದ್ದಾರೆ. ''ಕುಪುತ್ರ ಜಾಯತೆ, ಕುಮಾತಾಪಿನ ಜಾಯತೆ'' ಕೆಟ್ಟ ಮಕ್ಕಳು ಹುಟ್ಟಬಹುದು. ಆದರೆ ಕೆಟ್ಟ ತಾಯಿ ತಪ್ಪಿಯೂ ಸಹ ಹುಟ್ಟುವುದಿಲ್ಲ ಎಂದು ೧೨೦೦, ವರ್ಷಗಳ ಹಿಂದೆಯೇ ಆದಿಶಂಕರಚಾರ್ಯರು ಹೇಳಿದ್ದಾರೆ. ಹೆಣ್ಣಿನ ಇಡೀ ಜೀವನವು ಗಂಧದ ಕೊರಡಿನಂತೆ ತೇಯುವುದರಲ್ಲಿಯೇ ಹೋಗುತ್ತದೆ. ಹೀಗೆ ಜೀವ ತೇಯುವ ಹೆಣ್ಣಿಗೆ ಎಷ್ಟು ಮಹತ್ವ ಕೊಟ್ಟಿದ್ದೇವೆ.

ಲಿಂಗ ಅನುಪಾತತೆಯಲ್ಲೂ ಅಸಮತೋಲನವಿದೆ. ೧೯೦೧ರಲ್ಲಿ ಪ್ರಮಾಣ ೧೦೦೦ ಪುರುಷರಿಗೆ ೯೭೨ ಇತ್ತು ೧೯೯೧ರಲ್ಲಿ ೧೦೦೦ಕ್ಕೆ ೯೨೯ ಮಹಿಳೆಯರು ೨೦೦೧ರಲ್ಲಿ ೯೩೩ ಮಹಿಳೆಯರಿದ್ದಾರೆ. ಇದನ್ನು ನೋಡಿದಾಗ ಮಹಿಳೆಯರಲ್ಲಿ ಇಳಿಕೆ ಕ್ರಮ ಇದೆ.

ಇದಕ್ಕೆ ಕಾರಣಗಳು ಹಲವಾರು ಇವೆ.

ಲಿಂಗಾನುಪಾತದ ಪಟ್ಟಿ

| ಜನಗಣತಿಯ ವರ್ಷ | ೧೦೦೦ ಜನ ಪುರುಷರಿಗೆ ಮಹಿಳೆಯರ ಸಂಖ್ಯೆ |
|---|---|
| ೧೯೦೧ | ೯೭೨ |
| ೧೯೯೧ | ೯೨೯ |
| ೨೦೦೧ | ೯೩೩ |

ಪುರುಷರಷ್ಟು ಸಮಾನವಾಗಿ ಮಹಿಳೆಗೆ ಸ್ಥಾನಮಾನವಿಲ್ಲ

ಸಾಮಾಜಿಕ ಮತ್ತು ಆರ್ಥಿಕ ಸೌಲಭ್ಯಗಳ ಕೊರತೆ

ಮಹಿಳೆಯರು ಕಡಿಮೆ ಪೌಷ್ಠಿಕ ಆಹಾರ ಸೇವನೆ

ಆರೋಗ್ಯ ಸೇವೆಯ ಲಭ್ಯತೆಯ ಕೊರತೆ

ಉತ್ತಮ ಶಿಕ್ಷಣ ನೀಡಲು ಅವಕಾಶವಿಲ್ಲ

ಗಂಡು ಮಕ್ಕಳ ಬಗ್ಗೆ ಹುಚ್ಚು ಹಂಬಲ

ಹೆಣ್ಣು ಭ್ರೂಣಗಳ ಪತನ ಅಧಿಕವಾಗಿರುವುದು

ಹೆಣ್ಣು ಮಗು ಹುಟ್ಟಿದಾಗ ತಾತ್ಸಾರವಾಗಿ ಕಾಣುವುದು

ಮಹಿಳೆಯರಿಗೆ ಅಜ್ಞಾನದಿಂದ ಬೇಗ ಮದುವೆ, ಬಾಲ್ಯ ವಿವಾಹವು ಮಾಡುವುದುಂಟು.

ಹೀಗೆ ಹೆಣ್ಣಿನ ಬಗೆಗೆ ಕೀಳರಿಮೆ ಭಾವನೆ ಎದ್ದು ಕಾಣುತ್ತದೆ. ಎಷ್ಟೋ ಸಲ ಬೇಗ ಮದುವೆ ಮಾಡಿದಾಗ ಆಡುವ ಕೂಸಿಗೆ ಕಾಡುವ ಕೂಸು ಜೋಡಿಯಾದಂತೆಯೇ ಸರಿ. ೨೦೦೧ರ ಪ್ರಕಾರ ಭಾರತದ ಸಾಕ್ಷರತೆ ಪ್ರಮಾಣ ೬೬% ಇದರಲ್ಲಿ ಪುರುಷರದು ೭೫% ಮಹಿಳೆಯರದು ೫೫% ಮನೆಗಳು ದೊಡ್ಡವಾಗುವುದಕ್ಕಿಂತ ಮನಗಳು ದೊಡ್ಡವಾಗಬೇಕು ಅದಕ್ಕೆ ವಿಶಾಲವಾದ ತಿಳುವಳಿಕೆ ಅವಶ್ಯ.

ಮನೆಯಲ್ಲಿ ಎಲ್ಲಾ ರಂಗದಲ್ಲಿ ಅವಕಾಶ ಕಲ್ಪಿಸಬೇಕು ಸುಖದುಃಖವನ್ನು ಪರಸ್ಪರ ಹಂಚಿಕೊಳ್ಳಬೇಕು.

ಹೆಣ್ಣು ಮಕ್ಕಳಿಗೆ ಶಾಲೆ ಕಲಿತರೆ ಮನೆತನಕ್ಕೆ ಮತ್ತು ಸಮಾಜಕ್ಕೆ ಕಲಿಸಬಲ್ಲರು.

ಆತ್ಮ ವಿಶ್ವಾಸ, ಸ್ವಾಭಿಮಾನ, ಮತ್ತು ಧೈರ್ಯ ತಂದು ಕೊಡುವ ಪರಿಸರ ನಿರ್ಮಿಸುವದು.

ಆರೋಗ್ಯ ಮತ್ತು ಆಧುನಿಕ ಸೌಲಭ್ಯಗಳ ಬಗ್ಗೆ ಮಾಹಿತಿ ನೀಡುವದು.

ಲಿಂಗ ತಾರತಮ್ಯವನ್ನು ಮನೆಯಿಂದಲೇ ಹೋಗಲಾಡಿಸುವುದು.

ವರದಕ್ಷಿಣೆ ಕುರಿತು ಮನೆಯ ಹೆಣ್ಣು ಮಕ್ಕಳಿಂದಲೇ ಅಳಿಸುವ ಪ್ರಯತ್ನವಾಗಬೇಕು.

ಮಹಿಳೆಗೆ ಎಲ್ಲಾ ವಿಷಯದಲ್ಲಿ ನಿರ್ಣಯಿಸಲು ಸ್ವಾತಂತ್ರ್ಯವನ್ನು ನೀಡಬೇಕು.

ಸಭೆ ಸಮಾರಂಭಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಬೇಕು.

ಮನೆಯಲ್ಲಿ ಅನಾಹುತ ಘಟನೆ ನಡೆಯುತ್ತವೆಂದು ತಿಳಿದಾಗ ಮುಂಜಾಗೃತಿಯನ್ನು ವಹಿಸಬೇಕು.

ಹೆಣ್ಣು ಶೋಷಣೆಗೆ ಒಳಗಾಗಬಾರದೆಂದು ಕ್ರಿ.ಶ.೧೯೧೦ರಲ್ಲಿ ಅಂತರರಾಷ್ಟ್ರೀಯ ಮಹಿಳಾ ಕಾಂಗ್ರೇಸ್ ಉದ್ದೇಶಿಸಿ ಮಾತನಾಡಿದಳು. ರಷ್ಯಾದ ಕ್ರಾಂತಿಕಾರಿ ಮಹಿಳೆ ಕ್ಲಾರಾ, ಅದಕ್ಕಾಗಿ ಪ್ರತಿವರ್ಷ ಮಾರ್ಚ್ ಎಂಟನ್ನು ಮಹಿಳಾ ದಿನವಾಗಿ ಆಚರಿಸಲು ಕರೆಕೊಟ್ಟಳು. ಸಂವಿಧಾನದ ೧೫(A) ೧೬(A) ಮಹಿಳೆಗೆ ಸಮಾನ ಅವಕಾಶ ನೀಡಬೇಕೆಂದು ಒತ್ತಿ ಹೇಳಿದೆ. ಮಕ್ಕಳನ್ನು ನೋಡಿಕೊಳ್ಳುವಲ್ಲಿ ತಾಯಿ ಪಾತ್ರ ಬಹಳ ಮುಖ್ಯ. ನೂರು ಜನ ಉಪನ್ಯಾಸಕರಿಗಿಂತಲೂ ಒಬ್ಬ ಶ್ರೇಷ್ಠ ತಾಯಿ ಮಿಗಿಲು.

ಆಧುನಿಕ ಜಾಗತೀಕ ಮಟ್ಟದಲ್ಲಿ ಮಹಿಳೆ ಎಲ್ಲಾ ಕ್ಷೇತ್ರಗಳಲ್ಲಿಯೂ ದುಡಿಯುತ್ತಿರುವುದನ್ನು ಕಾಣುತ್ತೇವೆ. ಮಹಿಳೆ ದೃಢ ಸಂಕಲ್ಪ ಮಾಡಿದಲ್ಲಿ ಅಡಿಗೆ ಮನೆಯಿಂದ ಅಂತರಿಕ್ಷಕ್ಕೆ, ತೊಟ್ಟಿಲಿನಿಂದ ದೇಶ ಆಳುವ ಸಾಹಸಕ್ಕೆ, ಮೌನದಿಂದ ಆಧ್ಯಾತ್ಮಕ್ಕೆ ಏರಬಲ್ಲಳು. ಹೀಗೆ ಹಲವಾರು ರೀತಿಯಿಂದ ಸ್ತ್ರೀಯರು ಮನಸ್ಸು ಮಾಡಿ ಮುಂದೆ ಬಂದಿದ್ದಾರೆ. ಪ್ರಜಾಪ್ರಭುತ್ವ ರಾಷ್ಟ್ರ ಪ್ರಗತಿ ಸಾಧಿಸಿದಂತಾಗುತ್ತದೆ.

ಚಿತ್ರದುರ್ಗ ಜಿಲ್ಲೆಯ ಸಜ್ಜನ ಗಾಣಿಗರಲ್ಲಿ ಮಹಿಳೆಯ ಸ್ಥಾನಮಾನಗಳು ಹಿಂದಿನ ಸ್ಥಿತಿಯಂತಿರದೆ ಬದಲಾಗುತ್ತಿವೆ. ಅವುಗಳನ್ನು ಗುರುತಿಸುವ ಪ್ರಯತ್ನಗಳಾಗಬೇಕಾಗಿದೆ. ಇಂದು ಕುಟುಂಬದ ಅಗು ಹೋಗುಗಳಲ್ಲಿ ಮಹಿಳೆಯರ ಅಭಿಪ್ರಾಯಗಳನ್ನು ಕೇಳುವುದುಂಟು. ಮೊದಲಿನಂತೆ ಶಿಕ್ಷಣವನ್ನು ಪುರುಷರಿಗಷ್ಟೇ ನೀಡದೆ ಮಹಿಳೆಯರಿಗೂ ಸಮಾನ ಶ್ರದ್ಧೆ ಮತ್ತು ಜವಾಬ್ದಾರಿಯಿಂದ ಮಹಿಳೆಯನ್ನು ನೋಡಿ ಕೊಳ್ಳುತ್ತಿದ್ದಾರೆ. ಇವರಲ್ಲಿ ಮಹಿಳೆಯರಿಗೆ ಗಂಡ ಸತ್ತಲ್ಲಿ ವಿವಾಹವಿಲ್ಲ. ಅಂದರೆ ವಿಧವೆಗೆ ಮರುವಿವಾಹಗಳಲ್ಲಿ. ಆದರೆ ಇತ್ತಿತ್ತಲಾಗಿ ಮೂರು ಅಥವಾ ನಾಲ್ಕು ಸಂಖ್ಯೆಯಲ್ಲಿ ಮರುವಿವಾಹಕ್ಕೆ ಅವಕಾಶ ನೀಡಲಾಗಿದೆ. ಆದರೆ ಈ ವಿಚಾರದಲ್ಲಿ ಈ ಸಮುದಾಯದಲ್ಲಿ ೧೦೦ಕ್ಕೆ ೧೦೦ ಭಾಗ ಬದಲಾಗಿಲ್ಲ. ಸಂಪೂರ್ಣ ಈ ವಿಚಾರವಾಗಿ ಬದಲಾಗಬೇಕೆಂದರೆ ಇನ್ನೂ ಸುಮಾರು ವರ್ಷಗಳೇ ಬೇಕು. ಹಳೆಯ ತಲೆಮಾರು ಸಂಪೂರ್ಣ ನಶಿಸಿದ ಮೇಲೆ ಏನಾದರೂ ವಿಧವಾ ಮರುವಿವಾಹದಲ್ಲಿ ಸಂಪೂರ್ಣ ಬದಲಾಗಲೂ ಸಾದ್ಯತೆ ಇದೆ. ಇಂದು ಗಂಡಾಗಲಿ ಹೆಣ್ಣಾಗಲಿ ಮಕ್ಕಳೆರಡೇ ಇರಲಿ ಎಂಬ ತತ್ವಕ್ಕೆ ಈ ಸಮುದಾಯ ಒಳಗಾಗುತ್ತಿದೆ.

• • •

ಅಧ್ಯಾಯ : ಎಂಟು

# ಆಧುನಿಕತೆ ಮತ್ತು ಗಾಣಿಗರು

೮.೧. ಗಾಣಿಗರ ಮೂಲ ವೃತ್ತಿ

೮.೨. ಎಣ್ಣೆ ತಯಾರಿಕೆಯ ಪರ್ಯಾಯ ವ್ಯವಸ್ಥೆಗಳು

೮.೩. ಬೇರೆಯವರ ಸ್ಪರ್ಧೆಗಳು

೮.೪. ಹೊಸ ನಮೂನೆಯ ಎಣ್ಣೆಗಳು ಮತ್ತು ಅವುಗಳ ಪರಿಣಾಮಗಳು

೮.೫. ಪ್ಯಾಕಿಂಗ್ ಸಿಸ್ಟಮ್

೮.೬. ಮೀಸಲಾತಿಯಲ್ಲಿ ಪರಿವರ್ತನೆಗಳು

## ಅಧ್ಯಾಯ : ಎಂಟು

# ಆಧುನಿಕತೆ ಮತ್ತು ಗಾಣಿಗರು

ಆಧುನಿಕತೆ ಎಂದರೆ ಹೊಸತನವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು, ಹಾಗೂ ಆಧುನಿಕ ಬದಲಾವಣೆಗೆ ಹೊಂದಿಕೊಳ್ಳುವುದು. ಗಾಣಿಗರು ಆಧುನಿಕತೆಗೆ ತಕ್ಕಂತೆ ಹೊಂದಿ ಕೊಳ್ಳುತ್ತಿದ್ದಾರೆ. ಇಲ್ಲಿ ಇವರು ಹಳೆಯ ಸಂಪ್ರದಾಯ ಕಂದಾಚಾರ, ಮೂಢ ನಂಬಿಕೆಗಳು, ಹಾಗೂ ಜಾತೀಯತೆಗೆ ಅನುಗುಣವಾಗಿ ಹೊಂದಿಕೊಂಡು ನಡೆಯುವುದು ಆಧುನಿಕ ದಿನಮಾನಗಳಲ್ಲಿ ಮಾಯವಾಗುತ್ತಿದೆ.

ಹಳೆಯ ಕಾಲದಲ್ಲಿ ಮತ್ತು ಪ್ರಾಚೀನ ಕಾಲದಲ್ಲಿ ಗಾಣಿಗರ ವ್ಯಕ್ತಿಯೆಂದರೆ ಹಳೆಯ ಎತ್ತಿನ ಗಾಣದಿಂದ ಎಣ್ಣೆಯನ್ನು ತೆಗೆದು ಅದನ್ನು ಸಮಾಜದ ಜನತೆಗೆ ಮಾರಾಟ ಮಾಡಿ ಜೀವನ ತೆಗೆಯುವವರಾಗಿದ್ದಾರೆ. ಹಿಂದಿನ ಕಾಲದಿಂದ ಆಧುನಿಕ ಕಾಲದವರೆಗೂ ದೇವರಿಗೆ ಎಣ್ಣೆ ದೀಪವನ್ನು ಹಚ್ಚುವುದು ಸಾಂಪ್ರದಾಯಕವಾಗಿ ಕಂಡುಬರುತ್ತಿದೆ. ಇಲ್ಲಿ ದೇವರಿಗೆ ಎಣ್ಣೆಯನ್ನು ಎಳ್ಳೆಣ್ಣೆ ಅರಳೆಣ್ಣೆಯನ್ನು ಹೆಚ್ಚಾಗಿ ಬಳಸುತ್ತಾರೆ.

ಹಳೆಯ ಕಾಲದಿಂದಲೂ ಗಾಣಿಗರಲ್ಲಿ ಎಳ್ಳೆಣ್ಣೆ ತೆಗೆಯುವುದು ಪಾಪಕೃತ್ಯ ಎಂಬ ಭಾವನೆ ಇವರಲ್ಲಿದೆ. ಎಳ್ಳೆಣ್ಣೆಯನ್ನು ದೇವರಿಗೆ ಉಪಯೋಗಿಸಲು ಮಾತ್ರ ತೆಗೆಯುತ್ತಾರೆ.

ಗಾಣಿಗರಲ್ಲಿ ಆಧುನಿಕತೆಗೆ ತಕ್ಕಂತೆ ಹೊಂದಿಕೊಳ್ಳುವ ಮನೋಭಾವ ಕಂಡುಬರುತ್ತಿದೆ. ಆಧುನಿಕ ದಿನಗಳಲ್ಲಿ ಗಾಣಿಗರಿಗೆ ವೃತ್ತಿ ಬದಲಾವಣೆಗೆ ಮುಕ್ತವಾದ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಅದರಲ್ಲೂ ಸಜ್ಜನ ಗಾಣಿಗರಲ್ಲಿ ಬಹಳಷ್ಟು ಜನ ತಮ್ಮ ಮೂಲ ವ್ಯಕ್ತಿಯನ್ನು ಬಿಟ್ಟು ಹೊಸ ಹೊಸ ಲಾಭದಾಯಕ ವೃತ್ತಿಗಳನ್ನು ಇವರು ಕೈಗೊಳ್ಳುತ್ತಿದ್ದಾರೆ. ಇವರಲ್ಲಿ ಸುಮಾರು ೮೦ರಷ್ಟು ಜನ ಇಂದು ವ್ಯವಸಾಯವನ್ನು ಅವಲಂಬಿಸಿಕೊಂಡಿದ್ದಾರೆ. ಇನ್ನುಳಿದಂತೆ ಸುಮಾರು ೨೦ರಷ್ಟು ಜನ ವ್ಯವಸಾಯೇತರ ವ್ಯಕ್ತಿಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಆಧುನಿಕತೆಗೆ ತಕ್ಕಂತೆ ಹೊಂದಿಕೊಳ್ಳುತ್ತಿದ್ದಾರೆ.

### ೮.೧. ಗಾಣಿಗರ ಮೂಲ ವೃತ್ತಿ

ಗಾಣಿಗರು ಹಿಂದಿನ ಕಾಲದಿಂದಲೂ ಎತ್ತಿನ ಗಾಣಗಳನ್ನು ಬಳಸಿಕೊಂಡು ಸಮಾಜಕ್ಕೆ ಅವರ ಕಾರ್ಯವನ್ನು ನೀಡುತ್ತಿದ್ದರು. ಇವರ ಹಾಗೆ ಬಡಗಿಗಳು ಕಟ್ಟಿಗೆ ಕೆಲಸವನ್ನು, ಕಮ್ಮಾರನು ಕಬ್ಬಿಣದ ಕೆಲಸವನ್ನು,

ಮಡಿವಾಳನು ಬಟ್ಟೆಗಳನ್ನು ತೊಳೆದು ಶುದ್ಧೀಕರಣ ಮಾಡುವುದು, ಮಾದಿಗರು ಪಾದರಕ್ಷೆಯನ್ನು ಮಾಡುವುದು, ಅದೇ ರೀತಿ ಗಾಣಿಗರು ಗಾಣದಿಂದ ಎಣ್ಣೆ ತೆಗೆದು ಸಮಾಜದ ಜನತೆಗೆ ಎಣ್ಣೆಯನ್ನು ಒದಗಿಸುತ್ತಿದ್ದರಿಂದ ಇವರನ್ನು ಗಾಣಿಗ ವೃತ್ತಿಯವರು ಎಂಬುದಾಗಿ ಕರೆದಿದ್ದಾರೆ.

ಆದರೆ ಇಂದು ಗಾಣಿಗರು ಆಧುನಿಕತೆಗೆ ತಕ್ಕಂತೆ ತಮ್ಮ ಜೀವನದಲ್ಲಿ ಬದಲಾಗಿದ್ದಾರೆ. ಜೊತೆಗೆ ತಮ್ಮ ಮೂಲ ವೃತ್ತಿಯನ್ನು ಬಿಟ್ಟು ತಮ್ಮ ಜೀವನಾವಶ್ಯಕತೆಗೆ ಬೇಕಾದಂತ ವೃತ್ತಿಗಳನ್ನು ಇಂದು ಅಳವಡಿಸಿಕೊಳ್ಳುತ್ತಿದ್ದಾರೆ. ಇವರಿಗಷ್ಟೇ ಅಲ್ಲ ಜೀವನದಲ್ಲಿ ಎಲ್ಲಾ ವೃತ್ತಿ ಮಾಡುವವರು ತಮ್ಮ ಜಾತಿಯ ಅಡಿಯಲ್ಲಿ ಬೆಳೆದು ಬಂದಂತಹ ಕುಲಕಸುಬನ್ನು ಬಿಡತೊಡಗಿದ್ದಾರೆ. ಆಧುನಿಕ ಸಮಾಜವೂ ಕೂಡ ಇವರಿಗೆ ವೃತ್ತಿಯಲ್ಲಿ ಮುಕ್ತವಾದ ವಾತಾವರಣವನ್ನು ಕಲ್ಪಿಸಿಕೊಟ್ಟಿದೆ. ಈ ಹಿನ್ನೆಲೆಯಲ್ಲಿ ವೃತ್ತಿಯ ಅಡಿಯಲ್ಲಿ ತಮ್ಮದೇ ಆದ ಅಂತಸ್ತು ಅಥವಾ ಸ್ಥಾನಮಾನಗಳನ್ನು ಪಡೆಯುತ್ತಿದ್ದಾರೆ.

ಆಧುನಿಕತೆಗೆ ಅನುಗುಣವಾಗಿ ಗಾಣಿಗರು ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಹೊಸ ಹೊಸ ವೃತ್ತಿಗಳನ್ನು ತಾವು ಅಳವಡಿಸಿಕೊಳ್ಳುತ್ತಿದ್ದಾರೆ.

ಇಂದಿನ ಆಧುನಿಕ ದಿನಗಳಲ್ಲಿ ಎಣ್ಣೆ ಗಾಣದಿಂದ ಎಣ್ಣೆಯನ್ನು ತೆಗೆದು ಇಂದು ಆಧುನಿಕವಾಗಿ ನಿರ್ಮಾಣವಾಗಿರುವ ಎಣ್ಣೆ ಮಿಲ್ಲುಗಳಿಗೆ ಸರಿ ಸಾಟಿಯಾಗಿ ನಿಲ್ಲುವಲ್ಲಿ ಅಸಮರ್ಥವಾಗಿದ್ದಾರೆ. ಒಳ್ಳೆಯ ಗುಣಮಟ್ಟ ಹಾಗೂ ಹೆಚ್ಚುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಎಣ್ಣೆ ಒದಗಿಸುವಲ್ಲಿ ಗಾಣಿಗರು ಅಸಮರ್ಥವಾದ ಕಾರಣದಿಂದ ಆಧುನಿಕವಾಗಿ ಇವರು ಬದಲಾಗಿದ್ದಾರೆ.

**೮.೨. ಎಣ್ಣೆ ತಯಾರಿಕೆಯ ಪರ್ಯಾಯ ವ್ಯವಸ್ಥೆಗಳು**

ಹಿಂದಿನ ಕಾಲದಲ್ಲಿ ಗಾಣಿಗರು ಮರದ ಅಥವಾ ಕಲ್ಲಿನ ಒರಳು ಇವುಗಳ ಜೊತೆಗೆ ಗಾಣವನ್ನು ಸುತ್ತಲೂ ಒಂಟೆತ್ತು ಅಥವಾ ಜೋಡಿ ಎತ್ತುಗಳನ್ನು ಬಳಸಿ ವಿವಿಧ ಬಗೆಯ ಎಣ್ಣೆಗಳನ್ನು ತೆಗೆಯುತ್ತಿದ್ದರು. ಇದರಲ್ಲಿ ಶೆಂಗಾ ಎಣ್ಣೆ, ಕೊಬ್ಬರಿ ಎಣ್ಣೆ, ಅರಳೆಣ್ಣೆ ಇವುಗಳನ್ನು ಹೆಚ್ಚಾಗಿ ಬಳಸುತ್ತಿದ್ದರು. ಗಾಣಗಳು ಸಹ ಈ ಎಣ್ಣೆಯನ್ನು ಜನರಿಗೆ ಒದಗಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವು. ಎಳ್ಳೆಣ್ಣೆಯನ್ನು ದೇವರಿಗೆ ದೀಪಹಚ್ಚಲು ಉಪಯೋಗಿಸುತ್ತಾರೆ.

ಇಂದಿನ ದಿನಗಳಲ್ಲಿ ಎಲ್ಲಾ ಕಾಳುಗಳಿಂದ ಎಣ್ಣೆ ತೆಗೆಯುವವರು ಗಾಣಿಗರೇ ಆಗಿರಬೇಕೆಂಬ ನಿಯಮವೇನು ಇಲ್ಲ. ಇಂದು ಎಣ್ಣೆ ತೆಗೆಯಲು ಬೃಹತ್ ಗಾತ್ರದ ಯಂತ್ರದಿಂದ ಕೂಡಿದ ಆಯಿಲ್ ಮಿಲ್‌ಗಳು ಸ್ಥಾಪನೆಯಾಗಿವೆ. ಇವು ಗಾಣಕ್ಕೆ ಬದಲಾಗಿ ಬೃಹತ್ ಪ್ರಮಾಣದ ಎಣ್ಣೆಕಾಳುಗಳನ್ನು ಬಳಸಿಕೊಂಡು ಹೆಚ್ಚು ಎಣ್ಣೆಯನ್ನು ತಯಾರಿಸುತ್ತಿದ್ದಾರೆ. ಗುಣಟ್ಟದಲ್ಲಿಯೂ ಉತ್ತಮ ಎಣ್ಣೆಯನ್ನು ಆಯಿಲ್ ಮಿಲ್‌ಗಳಿಂದ ತೆಗೆಯುತ್ತಿದ್ದಾರೆ. ಗಾಣದಿಂದ ತೆಗೆದ ಎಣ್ಣೆಗೂ ಆಯಿಲ್ ಮಿಲ್‌ಗಳಿಂದ ತೆಗೆದ ಎಣ್ಣೆಗೂ ಬಹಳಷ್ಟು ಅಂತರವಿರುವುದನ್ನು ಗಮನಿಸುತ್ತೇವೆ. ಎಣ್ಣೆ ಅಥವಾ ಪ್ಯಾಕಿಂಗ್ ಸಿಸ್ಟಮ್ ಮುಂತಾದವು ಜನಾಕರ್ಷಕವಾಗಿರುತ್ತವೆ.

ಜನಸಂಖ್ಯೆ ಹೆಚ್ಚಿದಂತೆಲ್ಲಾ ಗಾಣದಿಂದ ಎಣ್ಣೆ ತೆಗೆದು ಪೂರೈಸುವುದು ಅಸಾಧ್ಯವಾಯಿತು. ಆಧುನಿಕತೆಯಿಂದ ಯಂತ್ರಗಳನ್ನು ಬಳಸಿ ಎಣ್ಣೆಯನ್ನು ವಿದ್ಯುತ್‌ಶಕ್ತಿಯಿಂದ ತೆಗೆದು ಆರ್ಥಿಕ ಲಾಭ ಮಾಡಿಕೊಳ್ಳುತ್ತಿದ್ದಾರೆ. ಮರುಕಟ್ಟೆಗೆ ತಕ್ಕಂತೆ ಎಣ್ಣೆಯನ್ನು ತಯಾರಿಸುವವರು ಹೆಚ್ಚುತ್ತಲಿದ್ದಾರೆ. ಇಂದು ಎಣ್ಣೆ ತಯಾರಿಕೆಯಲ್ಲಿ ಜಾತಿ ಕುಲ ಕಸುಬುಗಳು ಎಲ್ಲವೂ ನಶಿಸಿ ಅದರಲ್ಲಿ ಹಾಗೂ ಉತ್ಪಾದನೆಯಲ್ಲಿ ಹೊಸತನವನ್ನು ಅಳವಡಿಸಿಕೊಂಡು ಬೃಹತ್ ಗಾತ್ರದ ಆಯಿಲ್ ಮಿಲ್‌ಗಳನ್ನು ಸ್ಥಾಪಿಸಿಕೊಂಡು ಸಮಾಜಕ್ಕೆ ತಕ್ಕಂತೆ ಮಾರುಕಟ್ಟೆಗೆ ತಕ್ಕಂತೆ ಎಣ್ಣೆಗಳನ್ನು ಉತ್ಪಾದಿಸಿಕೊಳ್ಳುತ್ತಿದ್ದಾರೆ. ಈ ಆಯಿಲ್ ಮಿಲ್‌ಗಳನ್ನು ಗಾಣಿಗರೇ ನಡೆಸಬೇಕೆಂದಿಲ್ಲ. ಸಮಾಜ ಇಂದು ಉದ್ಯೋಗಮಾಡಲು ಮುಕ್ತವಾದ ಅವಕಾಶಗಳನ್ನು ಕಲ್ಪಿಸಿಕೊಟ್ಟಿದೆ. ಇಂದು ಅದನ್ನು ಬಳಸಿಕೊಂಡು ಬಂಡವಾಳವಿದ್ದ ಬೇರೆ ಕುಲದವರು ಸಹ ಎಣ್ಣೆ ತೆಗೆಯಲು ಆಧುನಿಕ ದಿನಮಾನಗಳಲ್ಲಿ ಹೆಚ್ಚುತ್ತಲಿದ್ದಾರೆ. ಇದರಿಂದ ಗುಣಮಟ್ಟದ ಹೆಚ್ಚು ಎಣ್ಣೆಯನ್ನು ತೆಗೆಯುವ ಸಾಮರ್ಥ್ಯವನ್ನು ಇಂದಿನ ಆಧುನಿಕ ಆಯಿಲ್ ಮಿಲ್‌ಗಳು ಹೊಂದಿರುವುದರಿಂದ ಸಜ್ಜನ ಗಾಣಿಗರಲ್ಲಿ ವೃತ್ತಿಯಲ್ಲಿ ಸಂಪೂರ್ಣ ಬದಲಾಣೆಯಾಗಿದೆ.

ಇವರು ಸಾಂಪ್ರದಾಯಕ ಕುಲಕಸುಬನ್ನು ಬಿಟ್ಟು ಆಧುನಿಕತೆಗೆ ತಕ್ಕಂತೆ ಹೊಸ ಮಾದರಿಯ ಪರ್ಯಾಯ ವ್ಯವಸ್ಥೆಯನ್ನು ಎಣ್ಣೆತಯಾರಿಕೆಯಲ್ಲಿ ಮಾಡಿಕೊಳ್ಳತೊಡಗಿದ್ದಾರೆ. ಅದರಲ್ಲಿಯೂ ಇಂದು ಕೇವಲ ಗಾಣಿಗರಷ್ಟೇ ಎಣ್ಣೆ ತೆಗೆದು ಇಡೀ ಸಮಾಜಕ್ಕೆ ಒದಗಿಸಬೇಕೆಂಬ ನಿಯಮಗಳೇನು ಇಲ್ಲ. ಸಮರ್ಥವಿರುವ ಯಾರುಬೇಕಾದರೂ ಆಧುನಿಕ ದಿನಮಾನಗಳಲ್ಲಿ ಎಣ್ಣೆ ತೆಗೆಯಲು ಸಮರ್ಥರಾಗತೊಡಗುತ್ತಿದ್ದಾರೆ. ಇದರಿಂದ ಮಾರುಕಟ್ಟೆಗೋಸ್ಕರ ಎಣ್ಣೆತಯಾರಿಕೆಯನ್ನು ಆಧುನಿಕ ದಿನಮಾನಗಳಲ್ಲಿ ಮಾಡಲಾಗುತ್ತದೆ. ಇಂದು ಲಾಭದ ಜೊತೆಗೆ ಉತ್ತಮ ಗುಣಮಟ್ಟದ ಎಣ್ಣೆಯನ್ನು ತಯಾರಿಸಬೇಕಾಗುತ್ತದೆ.

ಹಿಂದಿನ ಗಾಣಿಗರ ವೃತ್ತಿಯನ್ನು ಹೊರತುಪಡಿಸಿ ಎಣ್ಣೆ ಬ್ಯಾರಲ್ ಪ್ರಮಾಣದಲ್ಲಿ ತೆಗೆಯುವ ಸಾಮರ್ಥ್ಯವನ್ನು ಹೊಂದಿದ ಆಯಿಲ್ ಮಿಲ್‌ಗಳು ಆಧುನಿಕತೆಗೆ ತಕ್ಕಂತೆ ಹೊಸತನಕ್ಕೆ ತಕ್ಕಂತೆ ಎಣ್ಣೆ ಉತ್ಪಾದಿಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಎಣ್ಣೆ ತಯಾರಿಕೆಯ ಪರ್ಯಾಯ ವ್ಯವಸ್ಥೆಗಳು ಆಧುನಿಕ ದಿನಮಾನಗಳಲ್ಲಿ ಸ್ಥಾಪನೆಯಾಗಿದ್ದು, ಆಧುನಿಕ ದಿನಮಾನಗಳಿಗೆ ತಕ್ಕಂತೆ ಎಣ್ಣೆ ಉತ್ಪಾದನೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿವೆ.

**೮.೩. ಬೇರೆಯವರ ಸ್ಪರ್ಧೆಗಳು**

ಹಿಂದಿನ ದಿವಸಗಳಲ್ಲಿ ಹುಟ್ಟಿನ ಆಧಾರದ ಮೇಲೆ ಅನುವಂಶೀಯತೆಯ ಆಧಾರದ ಮೇಲೆ ಇಡೀ ವ್ಯವಸ್ಥೆಯ ಹಿನ್ನೆಲೆಯಲ್ಲಿ ಕುಲಕಸುಬುಗಳು ಅಸ್ತಿತ್ವಕ್ಕೆ ಬಂದಿದ್ದವು. ಪ್ರತಿಯೊಂದು ಜಾತಿಯೂ ತನ್ನದೇ ಆದ ವೃತ್ತಿಯನ್ನು ಹೊಂದಿರುತ್ತಿತ್ತು. ಅವತ್ತಿನ ದಿನದಲ್ಲಿ ಒಂದು ಕುಲಕಸುಬು ಮಾಡುವವನು ಬೇರೊಂದು ವೃತ್ತಿಯಲ್ಲಿ ಹಸ್ತಕ್ಷೇಪ ಮಾಡುವ ರೀತಿ ಇರಲಿಲ್ಲ. ಹಾಗಾಗಿ ಆ ದಿವಸಗಳಲ್ಲಿ ಬೇರೆಯವರ ಸ್ಪರ್ಧೆಗಳು ಇರಲಿಲ್ಲ ಯಾರು ಕೆಲಸ ಮಾಡುತ್ತಾರೆಯೋ ಅದೇ ಕೆಲಸವನ್ನು ಅನುವಂಶೀಯವಾಗಿ ಮುಂದುವರೆಸಿಕೊಂಡು

ಬರಬೇಕಾಗಿತ್ತು. ಜಾತಿ ವ್ಯವಸ್ಥೆಯು ಹುಟ್ಟಿನ ಆಧಾರದ ಮೇಲೆ ಅವರಿಗೆ ಕುಲಕಸುಬನ್ನು ಒದಗಿಸಿರುವುದರಿಂದ ಹೊಸ ವೃತ್ತಿಗಳನ್ನು ಹುಡುಕುವ ಅಥವಾ ಆಚರಿಸುವ ಅವಶ್ಯಕತೆ ಇರಲಿಲ್ಲ. ಜೊತೆಗೆ ಒಂದು ವೃತ್ತಿ ಮಾಡುವವನು ಬೇರೆ ವೃತ್ತಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವಂತಿರಲಿಲ್ಲ. ಇದರಿಂದ ವೃತ್ತಿ ಭದ್ರತೆಯು ಸಾಂಪ್ರದಾಯಕ ದಿನಮಾನಗಳಲ್ಲಿ ಎಲ್ಲಾ ವೃತ್ತಿಬಾಂಧವರಿಗೂ ಸಿಕ್ಕಿತ್ತು. ಹಿಂದೆ ವೃತ್ತಿಗೆ ಸಂಬಂಧಿಸಿದಂತೆ ಜಾತಿ ಪಂಚಾಯಿತಿಗಳು ತನ್ನದೇ ಆದ ಜಾತಿಯ ಸದಸ್ಯರ ಮೇಲೆ ನಿರ್ಬಂಧನೆಗಳನ್ನು ಹೇರುತ್ತಿದ್ದವು. ಇಲ್ಲಿ ವೃತ್ತಿ ಬದಲಾವಣೆಗೆ ಅವಕಾಶಗಳಿರಲಿಲ್ಲ ಹಾಗೂ ಬೇರೆಯವರ ಸ್ಪರ್ಧೆಯೂ ಸಹ ಹಿಂದನ ಜಾತಿ ಆಧಾರಿತ ಕಾಲದಲ್ಲಿ ಇರಲಿಲ್ಲ. ಇದರಿಂದ ಅಂದಿನ ದಿನದಲ್ಲಿ ಜಾತಿಯು ವ್ಯಕ್ತಿ ಸ್ವತಂತ್ರ್ಯತೆಗೆ, ಸಮಾನತೆಗೆ, ಸಹೋದರತ್ವ ಭಾವನೆ, ಜಾತ್ಯಾತೀತತೆ, ಮತಾತೀತತೆ ಮುಂತಾದ ಪ್ರಜಾಪ್ರಭುತ್ವ ಮೌಲ್ಯಗಳಿಗೆ ಹೆಚ್ಚು ಅವಕಾಶವನ್ನು ಕೊಟ್ಟಿರಲಿಲ್ಲ.

ಇಂದಿನ ಸಮಕಾಲೀನ ಸಾಮಾಜಿಕ ವಾತಾವರಣವನ್ನು ಗಮನಿಸಿದಾಗ ಆಧುನಿಕ ದಿವಸಗಳಲ್ಲಿ ವ್ಯಕ್ತಿಗೆ ಹೆಚ್ಚು ಸ್ವಾತಂತ್ರ್ಯತೆ ದೊರಕಿಸಿಕೊಟ್ಟಿದೆ. ಇಂದು ಸಜ್ಜನ ಗಾಣಿಗರಲ್ಲಿ ಎಲ್ಲರೂ ವ್ಯವಸಾಯ ಅಥವಾ ವ್ಯವಸಾಯೇತರ ವೃತ್ತಿಗಳನ್ನು ಹೊಂದಿದ್ದಾರೆ. ಇದರಿಂದ ಈ ಜನಾಂಗ ತಮ್ಮ ಮೂಲ ವ್ಯಾಪ್ತಿಯಾದ ಎಣ್ಣೆ ತೆಗೆದು ಮಾರುವುದನ್ನು ನಿಲ್ಲಿಸಿದೆ.

ಆಧುನಿಕ ಸಮಾಜದಲ್ಲಿ ಬೇರೆ ಬೇರೆ ಸಮುದಾಯದ ಜನರು ಇಂದು ಆಯಿಲ್ ಮಿಲ್‌ಗಳನ್ನು ನಡೆಸುತ್ತಿದ್ದು ದೊಡ್ಡ ದೊಡ್ಡ ಯಂತ್ರಗಳನ್ನು ಬಳಸಿ ಆಯಿಲ್ ಉತ್ಪಾದನೆಯನ್ನು ಆಧುನಿಕತೆಗೆ ತಕ್ಕಂತೆ ನವೀಕರಣಗೊಳಿಸಿಕೊಳ್ಳುತ್ತಲಿವೆ.

ಆಧುನಿಕತೆಗೆ ತಕ್ಕಂತೆ ಇಂದು ಬೇರೆ ಬೇರೆಯವರ ಸ್ಪರ್ಧೆ ಇದ್ದರೂ ಲಾಭದಾಯಕ ಹುದ್ದೆಯಾಗಿ ಈ ವೃತ್ತಿಯನ್ನು ಅನುಸರಿಸುತ್ತಿದ್ದಾರೆ. ಆಧುನಿಕ ಜಗತ್ತು ಸ್ಪರ್ಧಾತ್ಮಕ ಜಗತ್ತು. ಇಂದು ಆಧುನಿಕತೆಯಲ್ಲಿ ವ್ಯಕ್ತಿ ತನ್ನ ಅರ್ಹತೆ, ಅಭಿಲಾಶೆ, ಅಭಿರುಚಿಗೆ ಅನುಗುಣವಾಗಿ ಉದ್ಯೋಗಗಳನ್ನು ಹುಡುಕಿಕೊಳ್ಳುತ್ತಿದ್ದಾನೆ. ಉದ್ಯೋಗಕ್ಕೆ ಅನುಗುಣವಾಗಿ, ಹೊಸ ಹೊಸ ಮಾರುಕಟ್ಟೆಗಳ ಸೃಷ್ಠಿಯೂ ಸಹ ವಸ್ತುಗಳ ಅಧಿಕ ಪ್ರಮಾಣದ ಉತ್ಪಾದನೆ ಹೆಚ್ಚು ಪ್ರೋತ್ಸಾಹವನ್ನು ನೀಡುತ್ತಿವೆ. ಇದರಿಂದ ಜಾತಿ ಆಧಾರಿತ ವೃತ್ತಿಗಳು ಆಧುನಿಕ ದಿನಮಾನಗಳಲ್ಲಿ ಮಾಯವಾಗುತ್ತಿವೆ. ಇಂದು ಆಧುನಿಕ ದಿನಮಾನಗಳಲ್ಲಿ ಬಂಡವಾಳವಿರುವವರು ತಮಗೆ ಬೇಕಾದ ಕಾರ್ಖಾನೆಗಳನ್ನು ಸ್ಥಾಪಿಸಿ ಅಧಿಕ ಪ್ರಮಾಣದ ಎಣ್ಣೆ ಬೀಜಗಳನ್ನು ಬಳಸಿಕೊಂಡು ಅಧಿಕ ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆ.

ಆಧುನಿಕ ದಿನಮಾನಗಳಲ್ಲಿ ಯಾರು ಬೇಕಾದರೂ ವೃತ್ತಿ ಬದಲಾಯಿಸಿರುವುದರಿಂದ ಸಜ್ಜನ ಗಾಣಿಗರಿಗೆ ಬೇರೆ ಜಾತಿಯವರು ಸಹ ಸ್ಪರ್ಧಾಳುಗಳಾಗಿರುವುದನ್ನು ಗಮನಿಸುತ್ತೇವೆ. ಮೂಲ ವೃತ್ತಿಯಾಗಿ ಹಿಂದಿನಿಂದ ಎತ್ತು ಅಥವಾ ಗಾಳದಿಂದ ಎಣ್ಣೆ ತೆಗೆಯುವುದು ಇಂದು ನಿಂತುಹೋಗಿದೆ. ಇದಕ್ಕೆ ಬದಲಾಗಿ ಬೇರೆ ಜಾತಿಯವರು ಸಹ ಬಂಡವಾಳವಿರುವವರು ಹಾಗೂ ಈ ವೃತ್ತಿಯ ಬಗ್ಗೆ ಒಲವಿರುವವರು ಆಧುನಿಕತೆಗೆ

ತಕ್ಕಂತೆ ಉತ್ತಮ ಅಥವಾ ಹೆಚ್ಚಿನ ಪ್ರಮಾಣದಲ್ಲಿ ಎಣ್ಣೆ ಹೊಸ ಹೊಸ ಜನಾಕರ್ಷಕ ಮಾದರಿಯಲ್ಲಿ ಪ್ಯಾಕ್‌ಮಾಡಿ ಮಾರಾಟಕ್ಕೆ ಮಾರುಕಟ್ಟೆಗೆ ಕಳಿಸುತ್ತಾರೆ. ಇಂದು ಜನತೆಗೆ ತಕ್ಕಂತೆ ಎಣ್ಣೆ ಉತ್ಪಾದನೆಯಲ್ಲಿ ಆಯಿಲ್ ಮಿಲ್‌ಗಳು ಪ್ರಮುಖ ಪಾತ್ರವಹಿಸುತ್ತಿವೆ. ಸಮಾಜದ ಬೇರೆ ಬೇರೆ ವರ್ಗಗಳು ಸಹ ಎಣ್ಣೆ ಉತ್ಪಾದನೆಯಲ್ಲಿ ಸ್ಪರ್ಧೆ ನೀಡುತ್ತಲಿವೆ. ಹಿಂದು, ಮುಸ್ಲಿಂರು ಹಾಗೂ ಇತರೆ ಜಾತಿಯವರು ಎಣ್ಣೆ ಉತ್ಪಾದನೆಯಲ್ಲಿ ಸ್ಪರ್ಧೆಗಿಳಿಯುತ್ತಿದ್ದಾರೆ.

ಆಧುನಿಕ ದಿವಸಗಳಲ್ಲಿ ಕುಲಕಸುಬುಗಳು ಬದಲಾವಣೆಗೊಂಡುದ್ದು, ಕುಲ ಅಥವಾ ಸಂಬಂಧ ಇಲ್ಲದವರು ತಮಗೆ ಬೇಕಾದ ವೃತ್ತಿಯನ್ನು ಆಯ್ಕೆಮಾಡಿಕೊಳ್ಳಲು, ಲಾಭಾಂಶವನ್ನು ಪಡೆಯಲು ಮುಕ್ತವಾತಾವರಣವನ್ನು ಕಲ್ಪಿಸಿಕೊಟ್ಟಿರುವುದರಿಂದ ಒಂದು ಕಡೆ ಗಾಣಿಗರು ತಮ್ಮ ವೃತ್ತಿ ಬಿಟ್ಟು ಬೇರೆ ಬೇರೆ ವೃತ್ತಿಯನ್ನು ತಾವು ಮೈಗೂಡಿಸಿಕೊಳ್ಳುತ್ತಿದ್ದಾರೆ, ಬೇರೆ ಬೇರೆ ಜಾತಿಗಳು ಇಂದು ಎಣ್ಣೆ ಉತ್ಪಾದನೆಯಲ್ಲಿ ತಮ್ಮನ್ನು ತಾವು ಸ್ವ-ಇಚ್ಛೆಯಿಂದ ತೊಡಗಿಸಿಕೊಂಡು ಲಾಭ ಪಡೆಯುತ್ತಿದ್ದಾರೆ. ಇದರಲ್ಲಿ ಹೆಚ್ಚಾಗಿ ಗಾಣಿಗರಲ್ಲದವರಲ್ಲಿ ಸ್ಪರ್ಧೆಗಳು ಹೆಚ್ಚತೊಡಗಿವೆ.

ಆಧುನಿಕತೆಯು ಸಾಮಾಜಿಕ ಬದಲಾವಣೆಯನ್ನು ಹಾಗೂ ವೃತ್ತಿ ಬದಲಾವಣೆಯನ್ನು ಸೂಚಿಸುವಂತದ್ದಾಗಿದೆ. ಇಂದು ಪ್ರತಿಯೊಂದು ಉದ್ಯೋಗದಲ್ಲಿಯೂ ಸ್ಪರ್ಧೆಗಳು ಹೆಚ್ಚುತ್ತಿರುವುದರಿಂದ ಜೊತೆಗೆ ಯಾರು ಯಾವ ಉದ್ಯೋಗವನ್ನು ಬೇಕಾದರೂ ಬದಲಾಯಿಸಲು ಅವಕಾಶ ಕೊಟ್ಟಿರವುದರಿಂದ, ಹಿಂದೆ ಗಾಣಿಗರು ಮಾಡುತ್ತಿದ್ದ ವೃತ್ತಿಗಳಲ್ಲಿ ಬದಲಾಗಿ ವ್ಯವಸಾಯ ಅಥವಾ ವ್ಯವಸಾಯೇತರ ಉದ್ಯೋಗಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರೆ ಸಮಾಜದಲ್ಲಿ ಬೇರೆ ಜಾತಿಯವರು ಇಂದು ಗಾಣಿಗ ವೃತ್ತಿ ಆಚರಿಸಿ ಹೊಸ ಯಂತ್ರಗಳ ಮೂಲಕ ಅಧಿಕ ಉತ್ಪಾದನೆ ಮಾಡಿ ತಾವು ಲಾಭವನ್ನು ಪಡೆಯುತ್ತಿದ್ದಾರೆ. ಇದರಿಂದ ಬೇರೆ ಜಾತಿಯವರ ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತಿವೆ.

**೮.೪. ಹೊಸ ನಮೂನೆಯ ಎಣ್ಣೆಗಳು ಮತ್ತು ಅವುಗಳ ಪರಿಣಾಮಗಳು**

ಹಿಂದೆ ಗಾಣದಿಂದ ತಯಾರಿಸಿದ ಎಣ್ಣೆಯನ್ನು ಹಳ್ಳಿಹಳ್ಳಿಗೆ ತಿರುಗಿ ವ್ಯಾಪಾರ ಮಾಡುತ್ತಿದ್ದರು. ನಿರ್ದಿಷ್ಟ ಹಳ್ಳಿಗೆ ನಿರ್ದಿಷ್ಟ ದಿವಸದಂದು ಎಣ್ಣೆ ವ್ಯಾಪಾರಕ್ಕೆ ತೆಗೆದುಕೊಂಡು ಹೋಗುತ್ತಿದ್ದರು. ಆ ದಿನಗಳಲ್ಲಿ ಎಣ್ಣೆ ಉತ್ಪಾದನೆಯ ಬಗ್ಗೆ ಸ್ಪರ್ಧೆ ಕಡಿಮೆ ಇತ್ತು.

ಆದರೆ ಇಂದು ಆಧುನಿಕ ದಿವಸಗಳಲ್ಲಿ ಹೊಸ ಹೊಸ ನಮೂನೆಯ ಎಣ್ಣೆಯನ್ನು ತಯಾರಿಸುತ್ತಿದ್ದಾರೆ. (ಕೆ.ಓ.ಎಫ್) ಕರ್ನಾಟಕ ಎಣ್ಣೆ ಉತ್ಪಾದನಾ ಮಹಾಮಂಡಳಿ ಈ ಉತ್ಪಾದನಾ ಮಹಾ ಮಂಡಳಿಯ ಎಣ್ಣೆಯೇ Safola. ಇದು ತನ್ನದೇ ಆದ ಪ್ಯಾಕಿಂಗ್ ಸಿಸ್ಟಮ್‌ನಲ್ಲಿ ಮಾರಾಟವಾಗುತ್ತಿದೆ. ಈ ಎಣ್ಣೆಗೆ ನಿಗಧಿತ ಬೆಲೆ ಅಥವಾ ನಿಗಧಿತ ಅವಧಿ ನಮೂದಿಸಲ್ಪಟ್ಟಿರುತ್ತದೆ. ಇದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯ ಬೆಳವಣಿಗೆ.

ಇಂದು ಎಣ್ಣೆಯಲ್ಲಿ ಒಂದು ಕೆ.ಜಿ.ಗೆ ೧೦೦೦ ಗ್ರಾಂ ಬರುತ್ತದೆ. ಆಧುನಿಕ ಪ್ಯಾಕಿಂಗ್ ಸಿಸ್ಟಮ್‌ನಲ್ಲಿ ೯.೧೦ ಗ್ರಾಂ ಬರುತ್ತದೆ. ಲಾಭದ ದೃಷ್ಟಿಯಿಂದ ಪ್ರಚಾರದ ದೃಷ್ಟಿಯಿಂದ ವ್ಯಾಪಾರಗಾರರಿಗೆ ಪ್ಯಾಕಿಂಗ್

ಸಿಸ್ಟಮ್ ಉತ್ತಮ. ಯಾವುದೇ ಎಣ್ಣೆ ಡಬ್ಬಿ ಇಲ್ಲದೇ ಹೋದರೂ ಪ್ಯಾಕಿಂಗ್ ಸಿಸ್ಟಮ್‌ನಲ್ಲಿ ಆಕರ್ಷಕ ಮತ್ತು ಪ್ಯಾಕಿಂಗ್‌ನ್ನು ಮಾಡುತ್ತಾರೆ. ಇದರಿಂದ ಒಂದು ಪ್ಯಾಕೆಟಿಗೆ ೯೦ಗ್ರಾಂ ಎಣ್ಣೆ ಮಾರಾಟದಿಂದ ಉಳಿತಾಯವಾಗುತ್ತದೆ.

ಹೊಸ ಎಣ್ಣೆ ನಮೂನೆಗಳನ್ನು ಈ ಕೆಳಗಿನಂತೆ ತಿಳಿಯಬಹುದು. ಔಡಲ ಬೀಜದಿಂದ ಔಡಲ ಎಣ್ಣೆ ತಯಾರಿಕೆ ಮತ್ತು ಪ್ಯಾಕಿಂಗ್ ವ್ಯವಸ್ಥೆ ಮಾಡುತ್ತಾರೆ. ಇದನ್ನು ಆಧುನಿಕವಾಗಿ ತಲೆಗೆ ಹಚ್ಚಿಕೊಳ್ಳಲು ಹಾಗೂ ದೇವರ ದೀಪಕ್ಕೆ ಈ ಎಣ್ಣೆಯನ್ನು ಬಳಸುತ್ತಾರೆ.

ಉತ್ತರ ಭಾರತದಲ್ಲಿ ಸಾಸುವೆ ಎಣ್ಣೆಯನ್ನು ಬಳಸುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಕೊಬ್ಬರಿ ಎಣ್ಣೆಯನ್ನು ತಲೆಗೆ ಹಚ್ಚಿಕೊಳ್ಳಲು ಹಾಗೂ ಅಡಿಗೆಗೂ ಬಳಸುತ್ತಾರೆ.

ಆಧುನಿಕತೆಯ ಹಿನ್ನೆಲೆಯಲ್ಲಿ ವಿವಿಧ ನಮೂನೆಯ ಎಣ್ಣೆಗಳನ್ನು ದೊಡ್ಡ ದೊಡ್ಡ ಎಣ್ಣೆ ಮಿಲ್‌ಗಳಿಂದ ತಯಾರಿಸಲಾಗುತ್ತದೆ. ಅವುಗಳೆಂದರೆ

೧. ಹತ್ತಿ ಕಾಳಿಂದ ಎಣ್ಣೆ ತಯಾರಿಕೆ

೨. ಭತ್ತದ ತೌಡಿನಿಂದ ಎಣ್ಣೆ ತಯಾರಿಕೆ

೩. ಸೊಯಾಬಿನ ಅವರೆಯಿಂದ ಎಣ್ಣೆ ಉತ್ಪಾದನೆ

೪. **ಎಳ್ಳೆಣ್ಣೆ :** ಇದನ್ನು ಉತ್ಪಾದಿಸಿ ದೇವರ ದೀಪಕ್ಕೆ ಮಾತ್ರ ಬಳಸುತ್ತಾರೆ. ಈ ಎಣ್ಣೆ ಬಳಸುವುದು ಉತ್ಪಾದಿಸುವುದು ಎರಡು ಸಹ ಪಾಪಕೃತ್ಯಗಳು ಎಂದಿರುವುದರಿಂದ ಈ ಎಣ್ಣೆಯನ್ನು ದೇವರಿಗೆ ಅರ್ಪಿಸುತ್ತಾರೆ. ಮಾನವರು ಈ ಎಣ್ಣೆಯನ್ನು ಉಪಯೋಗಿಸುವುದಿಲ್ಲ.

೫. ತಾಳೆ ಎಣ್ಣೆ (Ruchi gold)

**೬. ಹೊಂಗೆ ಬೀಜದ ಎಣ್ಣೆ :** ಇದನ್ನು ಮಾನವರು ಉಪಯೋಗಿಸದಿದ್ದರೂ ಹೊಂಗೆ ಬೀಜದ ಎಣ್ಣೆಯನ್ನು ಗಿಡಗಳ ಬೆಳವಣಿಗೆಗೆ ಹೆಚ್ಚು ಬಳಸುತ್ತಾರೆ.

**೭. ಕೊಬ್ಬರಿ ಎಣ್ಣೆ :** ಇದನ್ನು ದಕ್ಷಿಣ ಕರ್ನಾಟಕದಲ್ಲಿ ತಲೆಗೆ ಹಚ್ಚಿಕೊಳ್ಳುವುದರ ಜೊತೆಗೆ ಅಡಿಗೆಗೂ ಸಹ ಇದನ್ನು ಬೆಳಸುತ್ತಾರೆ. ಇದರಲ್ಲಿ ಪ್ಯಾರಾಚೂಟ್, ಬಹು ಹೆಸರನ್ನು ಮಾಡಿದ ಹಾಗೂ ಬಹುಜನರಿಗೆ ಆಕರ್ಷಣೀಯವಾದ ಎಣ್ಣೆಯಾಗಿದೆ.

**೮. ಶೇಂಗಾ ಎಣ್ಣೆ :** ಶೇಂಗಾ ಬೀಜದಿಂದ ಶೇಂಗಾ ಎಣ್ಣೆ ತೆಗೆದು ಅದನ್ನು ಪ್ಯಾಕ್‌ಗಳನ್ನು ಮಾಡಿ ಮಾರಾಟಮಾಡುತ್ತಾರೆ. ಇವುಗಳಲ್ಲಿ Safola ಹಾಗೂ ಲಕ್ಷ್ಮಿ ಎಣ್ಣೆ ಪ್ಯಾಕ್‌ಗಳು, ಶೇಂಗಾ ಎಣ್ಣೆಯನ್ನು ಉತ್ಪಾದಿಸುವಲ್ಲಿ ಆಸಕ್ತಿತೋರಿವೆ.

ಸೂರ್ಯಕಾಂತಿ ಬೀಜದಿಂದಲೂ ಅಡಿಗೆ ಎಣ್ಣೆಯನ್ನು ಉತ್ಪಾದಿಸುತ್ತಾರೆ. ಹಾಗೂ ''ಕುಸುಬಿ''ಯಿಂದ ಎಣ್ಣೆಯನ್ನು ತೆಗೆದು ಮಾರಾಟ ಮಾಡುತ್ತಾರೆ.

ಈ ಮೇಲಿನಂತೆ ಆಧುನಿಕತೆಗೆ ತಕ್ಕಂತೆ ಹೊಸ ಹೊಸ ಮಾದರಿಯ ಎಣ್ಣೆಯನ್ನು ತಯಾರಿಸಿ ಇಂದು ಮಾರುಕಟ್ಟೆಯ ವ್ಯಾಪಾರಕ್ಕಾಗಿ ಹೊಸ ಹೊಸ ಮಾದರಿಯ ಎಣ್ಣೆಗಳ ಉತ್ಪಾದನೆಯನ್ನು ಮಾಡುತ್ತಿದ್ದಾರೆ. ಇಂದು ಈ ಉದ್ದಿಮೆ ಜನಗಳಿಗೆ ಲಾಭದಾಯಕ ಉದ್ದಿಮೆಯಾಗಿದೆ. ಆಧುನಿಕತೆಯ ಹಿನ್ನೆಲೆಯಲ್ಲಿ ಯಾರು ಬೇಕಾದರೂ ಯಾವ ಜಾತಿಯವರು ಬೇಕಾದರೂ ಎಣ್ಣೆ ಉತ್ಪಾದಿಸಲು ಮುಂದಾಗಬಹುದಾಗಿದೆ.

ಚಳ್ಳಕೆರೆ ತಾಲ್ಲೂಕಿನಲ್ಲಿ ಸಜ್ಜನ ಗಾಣಿಗರ ಎಣ್ಣೆ ಮಿಲ್‌ಗಳು ಇದ್ದು ಇದರಿಂದ ಉತ್ಪಾದನೆ ಮತ್ತು ಗುಣಮಟ್ಟವನ್ನು ಎಣ್ಣೆ ಉತ್ಪಾದನೆಯಲ್ಲಿ ಕಾಯ್ದುಕೊಂಡು ಮುನ್ನಡೆಯುತ್ತಿದ್ದಾರೆ. ಈ ಹೆಚ್ಚಿನ ಉತ್ಪಾದನೆಯಿಂದ ಆಂಧ್ರ ಮತ್ತು ತಮಿಳು ನಾಡಿಗೆ ಎಣ್ಣೆ ಕಳುಹಿಸಿ ಎಣ್ಣೆಯಿಂದ ಆಧುನಿಕ ದಿನಮಾನಗಳಲ್ಲಿ ಅಂತರ್ ರಾಜ್ಯ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಿದ್ದಾರೆ.

ಆಧುನಿಕತೆಗೆ ತಕ್ಕಂತೆ ಇಂದು ಬಂಡವಾಳವಿದ್ದವರು ಯಾವ ಜಾತಿಯವರು ಬೇಕಾದರೂ ಎಣ್ಣೆ ಉದ್ಯಮವನ್ನು ಕೈಗೊಳ್ಳಬಹುದಾಗಿದೆ. ಇದರಿಂದ ಈ ಮೇಲ್ಕಾಣಿಸಿದ ಹೊಸ ನಮೂನೆಯ ಎಣ್ಣೆಗಳು ಅಸ್ತಿತ್ವಕ್ಕೆ ಬಂದಿವೆ. ಹಾಗೂ ಇದರ ಲಾಭವನ್ನು ಉತ್ಪಾದಕರು ಆಧುನಿಕವಾಗಿ ತೆಗೆದುಕೊಳ್ಳುತ್ತಾರೆ.

**ಎಣ್ಣೆಗಳ ಪರಿಣಾಮಗಳು**

ಹೊಸ ನಮೂನೆಯ ಎಣ್ಣೆಗಳು ಹೆಚ್ಚಿದಂತೆ ಅದರ ಪರಿಣಾಮವಾಗಿ ಹಳೆಯ ಗಾಣಗಳು ತನ್ನ ಅಸ್ತಿತ್ವವನ್ನು ಕಳೆದುಕೊಂಡಿವೆ. ಇಂದು ಹೊಸ ನಮೂನೆಯ ಎಣ್ಣೆಯ ಉತ್ಪಾದನೆಯನ್ನು ಯಂತ್ರಗಳ ಮೂಲಕ ಅಂದರೆ ಆಯಿಲ್ ಮಿಲ್‌ಗಳ ಮೂಲಕ ಉತ್ಪಾದಿಸಲಾಗುತ್ತದೆ.

ಹೊಸ ನಮೂನೆಯ ಎಣ್ಣೆಗಳ ಉತ್ಪಾದನೆಗಳು ಅಂತರ್ ರಾಜ್ಯ ಸಂಬಂಧಗಳನ್ನು ಹೆಚ್ಚಿಸಿಕೊಳ್ಳುವಲ್ಲಿ ಸಹಕಾರಿಯಾಗಿವೆ. ಆಂಧ್ರ ಮತ್ತು ತಮಿಳು ನಾಡಿಗೆ ಹೆಚ್ಚು ಕರ್ನಾಟಕದಿಂದ ಎಣ್ಣೆಯು ಪೂರೈಕೆಯಾಗುತ್ತಿದೆ.

ಆಧುನಿಕ ದಿನಮಾನಗಳಲ್ಲಿ ದೊಡ್ಡ ದೊಡ್ಡ ಎಣ್ಣೆ ಮಿಲ್‌ಗಳಿಂದ ಎಣ್ಣೆಯ ಉತ್ಪಾದನೆ ಜನಸಂಖ್ಯೆಗನುಗುಣವಾಗಿ ಹೆಚ್ಚಾಗುತ್ತಲಿದೆ. ಇದರಿಂದ ಜನಸಾಮಾನ್ಯರೂ ಇದನ್ನು ಕೊಂಡುಕೊಳ್ಳಬಹುದಾಗಿದೆ.

ಹೊಸ ನಮೂನೆಯ ಎಣ್ಣೆಗಳನ್ನು ಬಂಡವಾಳವಿದ್ದವರು ಯಾರು ಬೇಕಾದರೂ ಯಾವ ಜಾತಿಯವರಾದರೂ ಈ ವೃತ್ತಿಯನ್ನು ಕೈಗೊಳ್ಳಬಹುದಾಗಿದೆ. ಇಲ್ಲಿ ಬಂಡವಾಳಗಾರರಿಗೆ ಲಾಭ ಪಡೆಯುವ ಉದ್ದೇಶವನ್ನು ಹೊಂದಿದ್ದಾರೆ.

**೧. ಹೃದಯ ಸ್ಥಂಭನ**

ಕೊಬ್ಬಿನ ಅಂಶ ಹೆಚ್ಚಿರುವ ಎಣ್ಣೆಯನ್ನು ಉಪಯೋಗಿಸುವುದರಿಂದ, ಕೊಬ್ಬಿನಾಂಶಗಳ ಪ್ರಭಾವದಿಂದ ಹೃದಯನಾಳಗಳು ಕಟ್ಟಿಕೊಳ್ಳುವವು. ಇದರಿಂದ ರಕ್ತವು ಹೃದಯಕ್ಕೆ ಹೋಗುವುದು ನಿಂತುಹೋಗುತ್ತದೆ. ಜೊತೆಗೆ ಆಮ್ಲಜನಕದ ಪೂರೈಕೆ ಕಡಿಮೆಯಾಗುತ್ತದೆ. ಇದರಿಂದ ಹೃದಯಾಘಾತ ಸಂಭವಿಸುತ್ತದೆ.

೨. ಎಣ್ಣೆಗಳ ಸಂಮಿಶ್ರಣ

ಎಣ್ಣೆಗಳಲ್ಲಿ ಯಾವ ಎಣ್ಣೆಯೂ ಕಡಿಮೆ ಕೀಚ್ ಇರುತ್ತದೆಯೋ ಅದಕ್ಕೆ ಬೆಲೆ ಹೆಚ್ಚಿರುವ ಎಣ್ಣೆಯನ್ನು ಮಿಕ್ಸ್‌ಮಾಡಿ ಮಾರಾಟಮಾಡಿ ಲಾಭ ಮಾಡಿಕೊಳ್ಳುವ ಎಣ್ಣೆ ಮಿಲ್‌ಗಳಿಗೆನೂ ಆಧುನಿಕ ದಿನಗಳಲ್ಲಿ ಕೊರತೆಯಿಲ್ಲ. ಇಂತಹ ಸಂಮಿಶ್ರಣಗಳ ಎಣ್ಣೆಯಿಂದ ವ್ಯಕ್ತಿಯ ಆರೋಗ್ಯಕೆಡುವ ಸಾಧ್ಯತೆಗಳು ಹೆಚ್ಚಿವೆ.

ಹಿಂದಿನ ಕಾಲದಲ್ಲಿ ಸಜ್ಜನ ಗಾಣಿಗರು ನಿಷ್ಠೆ ಮತ್ತು ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿದ್ದರು. ಇಲ್ಲಿ ಇವರ ಗುರಿ ಲಾಭಗಳಿಸಬೇಕೆಂಬುದಾಗಿರಲಿಲ್ಲ. ಸಮಾಜದಲ್ಲಿರುವ ಜನರ ಎಣ್ಣೆಯ ಬೇಡಿಕೆಯನ್ನು ಪೂರೈಸುವ ಗುರಿ ಉದ್ದೇಶವನ್ನು ಗಾಣಿಗರು ಹೊಂದಿದ್ದರು. ಬಡಗಿ ಮರದ ಕೆಲಸ, ಕಮ್ಮಾರ ಕಬ್ಬಿಣದ ಕೆಲಸ, ಮಡಿವಾಳ ಬಟ್ಟೆ ಶುದ್ಧೀಕರಣಗೊಳಿಸುವ ಕಾರ್ಯ, ಈ ರೀತಿಯಾಗಿ ಸಜ್ಜನ ಗಾಣಿಗರು ಸಮಾಜಕ್ಕೆ ನಿಷ್ಠೆಯಿಂದ ದುಡಿದು ಎಣ್ಣೆ ಪೂರೈಕೆ ಮಾಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದರು. ಆಧುನಿಕ ದಿಮಾನಗಳಲ್ಲಿ ಸಜ್ಜನ ಗಾಣಿಗರಲ್ಲಿ ವೃತ್ತಿ ಪರಿವರ್ತನೆಯಾಗಿದೆ. ಸುಮಾರು ೮೦% ರಷ್ಟು ತಮ್ಮ ಮೂಲವೃತ್ತಿ ತ್ಯಜಿಸಿ ವ್ಯವಸಾಯದಲ್ಲಿ ದುಡಿಯುತ್ತಿದ್ದಾರೆ. ಇನ್ನುಳಿದ ೨೦% ಜನರು ವ್ಯವಸಾಯೇತರ ಹಾಗೂ ವ್ಯವಸಾಯಕ್ಕೆ ಪೂರಕವಾದ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಇಂದು ಎಣ್ಣೆಯ ಉತ್ಪಾದನೆಯನ್ನು ಯಾರುಬೇಕಾದರೂ ಯಾವಜಾತಿಯವರು ಆದರೂ ಉತ್ಪಾದಿಸಲು, ವೃತ್ತಿ ಬದಲಾವಣೆಗೆ ಆಧುನಿಕ ದಿವಸಗಳಲ್ಲಿ ಮುಕ್ತ ಅವಕಾಶಗಳಿರುವುದರಿಂದ ಸಜ್ಜನ ಗಾಣಿಗರನ್ನು ಹೊರತಾಗಿ ಬೇರೆಯವರೂ ಸಹ ಈ ವೃತ್ತಿಯನ್ನು ಮಾಡಲು ಮುಂದಾಗಿದ್ದಾರೆ.

೮.೫. ಪ್ಯಾಕಿಂಗ್ ಸಿಸ್ಟಮ್

ಹಿಂದೆ ಎಣ್ಣೆಯನ್ನು ಕೊಂಡುಕೊಳ್ಳಲು ಕೊಳ್ಳುವವರೇ ಪಾತ್ರೆಗಳನ್ನು ತೆಗೆದುಕೊಂಡು ಹೋಗಿ ಅದರಲ್ಲಿ ಗಾಣದಿಂದ ಉತ್ಪಾದಿಸಿದ ಎಣ್ಣೆಯನ್ನು ಹಾಕಿಸಿಕೊಂಡು ಬರುತ್ತಿದ್ದರು. ಅಂದು ಎಣ್ಣೆಯನ್ನು ಗಾಡಿಯಲ್ಲಿ ತಂದು ಹಳ್ಳಿಯ ಜನತೆಗೆ ಮಾರಾಟ ಮಾಡುತ್ತಿದ್ದರು. ಗಾಣದಿಂದ ಎಣ್ಣೆ ತೆಗೆಯುವ ಸಂದರ್ಭದಲ್ಲಿ ಒಂದು ಗಾಣದಿಂದ ಉತ್ಪಾದಿಸಿದ ವಿವಿಧ ಬಗೆಯ ಎಣ್ಣೆಯನ್ನು ತಮ್ಮ ಹಳ್ಳಿಯ ಸುತ್ತಮುತ್ತಲಿರುವ ಗ್ರಾಮಗಳಿಗೆ ದಿನವನ್ನು ನಿಗದಿ ಪಡಿಸಿ ಒಂದೊಂದು ದಿವಸ ಗಾಡಿಯಲ್ಲಿ ಎಣ್ಣೆ ಇಟ್ಟುಕೊಂಡು ಹೋಗಿ ಮಾರಾಟ ಮಾಡಿ ಬರುವ ಸಂಪ್ರದಾಯವಿತ್ತು. ಎಳ್ಳೆಣ್ಣೆಯನ್ನು ಮಾತ್ರ ದೇವರ ದೀಪಕ್ಕೆ ಮಾತ್ರ ಬಳಸಲು ಜನರು ಕೊಂಡುಕೊಳ್ಳುತ್ತಿದ್ದರು. ಗ್ರಾಮಗಳಲ್ಲಿ ಎಣ್ಣೆ ಮಾರಾಟದ ಒಂದು ದಿವಸವನ್ನು ನಿಗದಿ ಪಡಿಸಿಕೊಂಡು ಮಾರಿದ್ದೇ ಅಲ್ಲದೆ ಎಣ್ಣೆ ಉತ್ಪಾದನೆ ಇಲ್ಲದ ಗ್ರಾಮಗಳಿಗೂ ದಿನವನ್ನು ನಿಗದಿ ಪಡಿಸಿಕೊಂಡು ಗಾಡಿಯಲ್ಲಿ ಎಣ್ಣೆ ತೆಗೆದುಕೊಂಡು ಹೋಗಿ ಮಾರಿಕೊಂಡು ಬರುತ್ತಿದ್ದರು. ಇದರಿಂದ ಎಣ್ಣೆ ಉತ್ಪಾದಕರಿಗೆ ಲಾಭವು ಹೆಚ್ಚು ಸಿಗುತ್ತಿತ್ತು.

ಆಧುನಿಕ ದಿನಮಾನಗಳಲ್ಲಿ ಗಾಣಗಳು ಮಾಯವಾಗಿವೆ. ಗಾಣವನ್ನು ಬಳಸಿ ಎಣ್ಣೆ ಉತ್ಪಾದಿಸುತ್ತಿದ್ದ ಸಜ್ಜನ ಗಾಣಿಗರು ಸಹ ಈ ವ್ಯಕ್ತಿ ಬಿಟ್ಟು ಬೇರೆ ಬೇರೆ ವೃತ್ತಿಯನ್ನು ಅವಲಂಬಿಸಿ ಜೀವಿಸುತ್ತಿದ್ದಾರೆ. ಈ

ಸಮಕಾಲೀನ ದಿವಸಗಳಲ್ಲಿ ಎಣ್ಣೆ ಉತ್ಪಾದಿಸುವವರು ಜನರ ಆಕರ್ಷಣೆ ಹಾಗೂ ಲಾಭಾಂಶ ಈ ಎರಡನ್ನು ಆಧಾರವಾಗಿಟ್ಟು ಕೊಂಡು ಎಣ್ಣೆ ಪ್ಯಾಕೆಟ್‌ಗಳನ್ನು ತಯಾರಿಸುತ್ತಿದ್ದಾರೆ. ಈ ಪ್ಯಾಕ್‌ಗಳಲ್ಲಿ ೧ ಕೆ.ಜಿ.ಗೆ ೧೦೦೦ ಗ್ರಾಂ ಗೆ ಬದಲಾಗಿ ೯.೧೦ ಗ್ರಾಂ ಎಣ್ಣೆಯನ್ನು ತುಂಬಿದ ಪ್ಯಾಕ್‌ಗಳು ಅಸ್ತಿತ್ವಕ್ಕೆ ಬಂದಿವೆ. ಇಲ್ಲಿ ಇದರಿಂದ ಉತ್ಪಾದಕರಿಗೆ ಹಾಗೂ ಮಾರಾಟಗಾರರಿಗೆ ಇಬ್ಬರಿಗೂ ಹೆಚ್ಚಿನ ಲಾಭವು ದೊರೆಯುತ್ತದೆ.

ಆಧುನಿಕ ದಿವಸಗಳಲ್ಲಿ ೧೫ ಕೆ.ಜಿ.ಯ ಟಿನ್‌ಗಳಲ್ಲಿ ಎಣ್ಣೆಯು ಮಾರಾಟವಾಗುತ್ತಿದೆ. ಹಾಗೂ ೪೫ ಕೆ.ಜಿಯ ಎಣ್ಣೆ ಟಿನ್‌ಗಳು ಅಸ್ತಿತ್ವಕ್ಕೆ ಬಂದಿವೆ. ಹಾಗೂ ಇಂದು ನೀರಿನ ಬಾಟಲಿಗಳು ಹಾಗೂ ಪ್ಲಾಸ್ಟಿಕ್‌ನ ಕವರ್‌ಗಳನ್ನು ಬಳಸಿಕೊಂಡು ೯.೧೦ ಗ್ರಾಂನ ಪ್ಯಾಕೆಟ್‌ಗಳು ಅಸ್ತಿತ್ವಕ್ಕೆ ಬಂದಿವೆ.

ಆಧುನಿಕ ದಿವಸಗಳಲ್ಲಿ ಎಣ್ಣೆಯ ಪ್ಯಾಕೆಟ್ ಸಿಸ್ಟಮ್‌ಗಳು ಜನರ ಆಕರ್ಷಣೆಯನ್ನು ಪಡೆದುಕೊಳ್ಳುತ್ತಿವೆ. ಇದರ ಪರಿಣಾಮವಾಗಿ ಎಣ್ಣೆಯ ಮಾರಾಟವು ಒಂದು ಕಡೆ ಹೆಚ್ಚಾಗುತ್ತದೆ. ಇದರಿಂದ ಮಾರಾಟಗಾರರಿಗೆ ಲಾಭವಾದಂತೆ, ಇದನ್ನು ಉತ್ಪಾದಿಸಿಕೊಡುವಂತಹ ಎಣ್ಣೆ ಮಿಲ್‌ಗಳೂ ಬೇಡಿಕೆಗೆ ಅನುಗುಣವಾಗಿ ಎಣ್ಣೆ ಉತ್ಪಾದಿಸಿ ಲಾಭವನ್ನು ಪಡೆಯುತ್ತಾರೆ.

ಪ್ಯಾಕೇಟ್ ಸಿಸ್ಟಮ್‌ಗಳು ಜನರನ್ನು ಆಕರ್ಷಿಸುವಂತೆ ರೂಪಿಸಿರುವುದರಿಂದ ಕೊಳ್ಳುವಿಕೆಯ ಪ್ರಮಾಣ ಹೆಚ್ಚುತ್ತದೆ. ಮಾರಾಟ ಹೆಚ್ಚಾದಂತೆ ಇದರಿಂದ ಉತ್ಪಾದನೆ ಹೆಚ್ಚುತ್ತದೆ. ಉತ್ಪಾದನೆ ಹೆಚ್ಚಿದಂತೆ ಲಾಭಾಂಶ ಹೆಚ್ಚುತ್ತದೆ.

**೮.೬. ಮೀಸಲಾತಿಯಲ್ಲಿ ಪರಿವರ್ತನೆಗಳು**

ಕರ್ನಾಟಕದಲ್ಲಿ ಕಂಡು ಬರುವ ಗಾಣಿಗ ಸಮುದಾಯವು ಬಹಳ ಹಳೆಯದಾದ ಸಮುದಾಯವಿದ್ದು ತಮ್ಮದೇ ಆದ ಕೃಷಿ ಚಟುವಟಿಕೆ ಮತ್ತು ಗಾಣದಿಂದ ಎಣ್ಣೆ ತೆಗೆಯುವ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡು ಬಂದಿದ್ದು ಇರುತ್ತದೆ. ಸದರಿ ಸಮುದಾಯವು ಚಿತ್ರದುರ್ಗ ಜಿಲ್ಲೆಯಾದ್ದಂತ ಸದರಿ ಉದ್ಯೋಗಗಳನ್ನು ಕೈಗೊಂಡಿದ್ದೂ ಕೂಡ ಇರುತ್ತದೆ. ಗಾಣಿಗ ಸಮುದಾಯವು ಆರ್ಥಿಕವಾಗಿ ಅಷ್ಟೇನು ಪ್ರಬಲವಾಗಿದ್ದು ಕಂಡು ಬರುವುದಿಲ್ಲ.

ಕ್ರಿ.ಶ.೧೨ ನೇ ಶತಮಾನದಲ್ಲಿ ಜಗಜ್ಯೋತಿ ಬಸವೇಶ್ವರರ ಸಾಮಾಜಿಕ ಕ್ರಾಂತಿಯಿಂದ ಗಾಣಿಗ ಸಮುದಾಯವು ಕೂಡ ಪ್ರಭಾವಕ್ಕೊಳಗಾಗಿದ್ದು ಕೆಲವು ಗಾಣಿಗ (ಸಮುದಾಯ) ಸಮಾಜದ ಸಮುದಾಯಗಳು ವೀರಶೈವ ಧರ್ಮಕ್ಕೆ ಮತಾಂತರಗೊಂಡಿದ್ದೂ ಇರುತ್ತದೆ. ಸಮಾಜದ ಇನ್ನುಳಿದ ಕೆಲವು ಸಮುದಾಯಗಳು ಹಾಗೆಯೇ ಹಿಂದೂ ಗಾಣಿಗ ಸಮುದಾಯದಲ್ಲಿಯೇ ಉಳಿದುಕೊಂಡು ಬಂದಿದ್ದು ಅದು ಸರ್ಕಾರಿ ಕಾಗದ ಪತ್ರಗಳಲ್ಲಿ ಕಾಣಸಿಗುತ್ತದೆ. ಆದರೆ ಪ್ರಸ್ತುತ ಹಿಂದೂ ಗಾಣಿಗ ಮತ್ತು ಲಿಂಗಾಯಿತ ಗಾಣಿಗ ಎರಡು ಸಮುದಾಯಗಳಲ್ಲಿ ಹೇಳಿಕೊಳ್ಳುವಂತಹ ಭಿನ್ನತೆಗಳೇನು ಕಂಡು ಬರುವುದಿಲ್ಲ. ಎರಡು ಸಮುದಾಯಗಳವರು ಇಂದಿಗೂ ಕೂಡ ತಮ್ಮ ಮೂಲ ಉದ್ಯೋಗವನ್ನೇ ಮುಂದುವರೆಸಿಕೊಂಡು ಬಂದಿರುತ್ತಾರೆ.

ಬಸವಣ್ಣನವರ ತತ್ವಾದರ್ಶಗಳಿಗೆ ಒಳಗಾಗಿ ತಮ್ಮ ಜಾತಿಯನ್ನು ಲಿಂಗಾಯಿತ ಗಾಣಿಗ ಎಂದೂ ಸರ್ಕಾರಿ ಕಾಗದ ಪತ್ರಗಳಲ್ಲಿ ತೋರಿಸಿಕೊಂಡಿರುತ್ತಾರೆ. ಸರ್ಕಾರವು ಗಾಣಿಗ ಸಮುದಾಯದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸ್ಥಿತಿಗತಿಗಳನ್ನು ಅವಲೋಕಿಸಿ, ಅವರ ಸಮಸ್ಯೆಗಳಿಗೆ ಸರಿಪಡಿಸಲು ಮೀಸಲಾತಿಯನ್ನು ಕೊಟ್ಟಿದ್ದು ಇರುತ್ತದೆ. ಆದರೆ ಎರಡು ಸಮುದಾಯಗಳಲ್ಲಿ ಯಾರಿಗೆ ಮೀಸಲಾತಿಯನ್ನು ಕೊಡಬೇಕೆನ್ನುವ ಜಿಜ್ಞಾಸೆ ಉಂಟಾಗಿದ್ದು ಅದು ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದಲ್ಲೂ ಕೂಡ ಕಂಡು ಬರುತ್ತದೆ. ಸರ್ಕಾರವು ತನ್ನ ಸುತ್ತೋಲೆಯಲ್ಲಿ ಮೀಸಲಾತಿಯನ್ನು ಕೇವಲ ಹಿಂದೂ ಗಾಣಿಗ ಎಂದು ನಮೂದಿಸಿದ್ದ ಕುಟುಂಬಗಳಿಗೆ ಮಾತ್ರ ಕೊಡುತ್ತಾ ಬಂದಿದೆ. ಆದರೆ ಲಿಂಗಾಯತ ಗಾಣಿಗ ಸಮುದಾಯಕ್ಕೆ ಸರ್ಕಾರವು ಮೀಸಲಾತಿಯನ್ನು ಕೊಡುತ್ತಾ ಬಂದಿರುವುದಿಲ್ಲ. ವೀರಶೈವ ಧರ್ಮಕ್ಕೆ ನೀಡುವ ಮೀಸಲಾತಿಯಾದ III-Bಯನ್ನು ಲಿಂಗಾಯತ ಗಾಣಿಗ ಸಮುದಾಯಕ್ಕೆ ಸರ್ಕಾರವು ಕೊಡುತ್ತಿದೆ. ಸರ್ಕಾರದ ಉದ್ದೇಶವು ಗಾಣಿಗ ಸಮುದಾಯಕ್ಕೆ II-A ಮೀಸಲಾತಿಯನ್ನು ಕೊಟ್ಟು ಆರ್ಥಿಕ ಮತ್ತು ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಮೇಲ್ ಸ್ಥರಕ್ಕೆ ಏರಿಸುವ ಗುರಿಗೆ ಕೊಡಲಿ ಪೆಟ್ಟು ಕೊಟ್ಟಂತಾಗಿದೆ. ಏಕೆಂದರೆ ಸ್ಥಳೀಯ ಸರ್ಕಾರಗಳು ಗಾಣಿಗ ಸಮುದಾಯವನ್ನು ಇಭ್ಭಾಗ ಮಾಡಿದ್ದು ಸರಿ ಇರುವುದಿಲ್ಲ.

ಸರ್ಕಾರದ ಕೆಲವು ಉಲ್ಲೇಖಗಳಲ್ಲಿ ಹಿಂದೂ ಗಾಣಿಗ ಮತ್ತು ಲಿಂಗಾಯತ ಗಾಣಿಗ ಸಮುದಾಯಗಳು ಒಂದೇ ಎಂದು ಸೂಚಿಸುತ್ತದೆ. ಮತ್ತೆ ಕೆಲವು ತಿದ್ದುಪಡಿಗಳು, ಸರ್ಕಾರಿ ಉಲ್ಲೇಖಗಳಲ್ಲಿ ಸದರಿ ಸಮುದಾಯಗಳು ಬೇರೆ ಬೇರೆ ಎಂದು ಸೂಚಿಸುತ್ತವೆ. ಇದರಿಂದ ಸಮಸ್ಯೆಯು ಉಲ್ಬಣಗೊಂಡಂತಾಗಿದೆ. ಈ ತಾರತಮ್ಯವನ್ನು ಹೋಗಲಾಡಿಸಿ, ಒಟ್ಟಾರೆ ಗಾಣಿಗ ಸಮುದಾಯವನ್ನು ಒಂದು ಚೌಕಟ್ಟಿನಲ್ಲಿ ತಂದು ಯಾರು ಆರ್ಥಿಕವಾಗಿ, ಸಾಮಾಜಿಕ, ಶೈಕ್ಷಣಿಕವಾಗಿ ದುರ್ಬಲರಾಗಿರುವರೋ ಅವರೆಲ್ಲರಿಗೂ ಸರ್ಕಾರದ ಸೌಲಭ್ಯಗಳು ಮತ್ತು II-A ಮೀಸಲಾತಿ ದೊರಕಿ, ಅವರ ಪ್ರಗತಿಯಾಗಬೇಕು. ಆದರೆ ಈಗಿನ ನಿಯಮಾವಳಿಗನ್ವಯ ಕೇವಲ ಸರ್ಕಾರಿ ದಾಖಲಾತಿ ಪತ್ರಗಳಲ್ಲಿ ಸಿಗುವ ಹಿಂದೂ ಗಾಣಿಗ ಸಮುದಾಯದ ಎಲ್ಲರಿಗೂ ಮೀಸಲಾತಿ ಸೌಲಭ್ಯ ದೊರೆಯುತ್ತದೆ.

ಹಿಂದಿನಿಂದಲೂ ಗಾಣಿಗರು ಮತ್ತು ಲಿಂಗಾಯಿತರು ಒಂದೇ ಎನ್ನುವ ಮಟ್ಟದಲ್ಲಿ ಇದ್ದರು ಕಾರಣ ಗಾಣಿಗರು ವೀರಶೈವ ಧರ್ಮದ ಅನುಯಾಯಿಗಳಾಗಿದ್ದು ಲಿಂಗಧಾರಣೆಯನ್ನು ಪಡೆದವರಾಗಿದ್ದಾರೆ. ೧೨ ನೇ ಶತಮಾನದಿಂದಲೂ ಬಸವಣ್ಣನವರ ಮತ್ತು ಇತರೆ ಶರಣರ ಪ್ರಭಾವಕ್ಕೊಳಗಾಗಿ ಗಾಣಿಗರು ಬೇರೆಯಲ್ಲ ಮತ್ತು ಲಿಂಗಾಯಿತರು ಬೇರೆಯಲ್ಲ ಎಂದು ತಿಳಿದು ಇವರೆಡು ಸಮುದಾಯದವರು ಒಂದೇ ಆಗಿದ್ದಾರೆ. ಈ ಹಿಂದೆ ಗಾಣಿಗ ಮತ್ತು ಲಿಂಗಾಯತರಿಗೆ ಸರ್ಕಾರದ ಮೀಸಲಾತಿಯ ಪ್ರಕಾರ III-Bಗೆ ಸೇರಿಸಿದ್ದರು. ಇಂದಿನ ದಿನಮಾನಗಳಲ್ಲಿ ಗಾಣಿಗ ಜನಾಂಗದವರ ಕೋರಿಕೆ ಮೇರೆಗೆ ಗಾಣಿಗರಿಗೆ ಪ್ರತ್ಯೇಕ ಮೀಸಲಾತಿ ಕೊಟ್ಟಿರುವುದು ಅವರ ಪ್ರಗತಿಗೆ ಸೂಕ್ತ. ಅವರ ಶೈಕ್ಷಣಿಕ ಮಟ್ಟ ಉತ್ತಮ ಪಡಿಸಿಕೊಳ್ಳಲು, ವೃತ್ತಿಯನ್ನು ಪಡೆಯಲು, ರಾಜಕೀಯ ಸ್ಥಾನಮಾನ ಹೊಂದಲೂ, ಸರ್ಕಾರವು ಕೊಟ್ಟ ಮೀಸಲಾತಿಯು ಸೂಕ್ತವಾದದ್ದಾಗಿದೆ.

ಗಾಣಿಗ ಜನಾಂಗವನ್ನು ಹಿಂದುಳಿದ ಜನಾಂಗವೆಂದು ತಿಳಿದು ಅವರ ಮೀಸಲಾತಿ III-B ಇದ್ದದನ್ನು II-Aಗೆ ಪರಿವರ್ತಿಸಿದೆ. ಇದರಿಂದ ಗಾಣಿಗರ ಪ್ರಗತಿಗೆ ಈ ಮೀಸಲಾತಿಯು ಪ್ರಮುಖವಾಗಿದೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಗಾಣಿಗರ ಮೀಸಲಾತಿಯು ಗಾಣಿಗರನ್ನು ಮೇಲಕೆತ್ತುವ ಉದ್ದೇಶವನ್ನು ಒಳಗೊಂಡಿದೆ.

**ಮೀಸಲಾತಿ ಬದಲಾವಣೆಯಿಂದ ಗಾಣಿಗರಲ್ಲಿ ಆಗಿರುವ ಸಮಸ್ಯೆಗಳು**

ಹಿಂದಿನ ಶಿಕ್ಷಕರು ಗಾಣಿಗ ಜನಾಂಗ ಮತ್ತು ಲಿಂಗಾಯತರು ಒಂದೇ ಎಂದು ಲಿಂಗಾಯತ ಗಾಣಿಗರು ಎಂದು ಸೂಚಿಸಿದ್ದಾರೆ. ಮತ್ತೆ ಕೆಲವು ಕಡೆ ಶಿಕ್ಷಕರು ಗಾಣಿಗರನ್ನು ಲಿಂಗಾಯತ ಎಂದಿರುವುದು ಕಾಣಸಿಗುತ್ತದೆ. ಮತ್ತೆ ಕೆಲವೆಡೆ ಹಿಂದೂ ಗಾಣಿಗ ಎಂದು ನಮೂದಿಸಿದ್ದಾರೆ. ಇಂದು ಸರ್ಕಾರ II-B ಇದ್ದ ಗಾಣಿಗ ಸಮುದಾಯವನ್ನು II-Aಗೆ ಸೇರಿಸಿದ್ದಾರೆ. ಹಿಂದೂ ಧರ್ಮದವರಾಗಿದ್ದು ಗಾಣಿಗ ಜಾತಿಯಾಗಿದ್ದಲ್ಲಿ ಮೀಸಲಾತಿಯು ದೊರೆಯುತ್ತದೆ. ಅಂದರೆ ಹಿಂದೂ ಗಾಣಿಗರಿಗೆ ಮೀಸಲಾತಿಯು ದೊರೆಯುತ್ತದೆ. ಲಿಂಗವಂತ ಗಾಣಿಗ ಎಂಬುದು ಲಿಂಗಾಧಾರಣೆಯನ್ನು ಮಾಡಿಸಿಕೊಂಡವರನ್ನು ಲಿಂಗವಂತ ಗಾಣಿಗ ಎಂದಿದ್ದಾರೆ. ಲಿಂಗಾಯತ ಮತ್ತು ಗಾಣಿಗ ಎಂಬುದು ಪ್ರತ್ಯೇಕ ಜಾತಿಗಳನ್ನು ಗುರುತಿಸುತ್ತಿದ್ದು ಇಲ್ಲಿ ಮೀಸಲಾತಿಯನ್ನು ಸಂಬಂಧಿಸಿದ ಅಧಿಕಾರಿಗಳು ಕೊಡುವಲ್ಲಿ ವಿಳಂಬವಾಗುತ್ತಿದೆ. ಗಾಣಿಗ ಜನಾಂಗದವರಿಗೆ ಮಾತ್ರ ಪರಿವರ್ತನೆ ಮಾಡಿರುವುದರಿಂದ ಇದಕ್ಕೆ ಸೂಕ್ತ ಪರಿಹಾರ ದೊರೆಯಬೇಕಿದೆ. ಅಧಿಕಾರಿವರ್ಗದವರು ಗಾಣಿಗ ಜನಾಂಗದವರನ್ನು ಗುರುತಿಸಿ ಅವರಿಗೆ ದೊರೆಯಬೇಕಾದ ಮೀಸಲಾತಿ ಸೂಕ್ತವಾಗಿ ಉಪಯೋಗವಾದಲ್ಲಿ ಅವರ ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಗತಿಯನ್ನು ಕಾಣಲು ಸಾಧ್ಯವಾಗುತ್ತದೆ.

• • •

# ಅಧ್ಯಾಯ : ಒಂಭತ್ತು

## ಸಮಾರೋಪ

ಭಾರತದಲ್ಲಿ ಪ್ರತಿಯೊಂದು ಜಾತಿಯೂ ತಮ್ಮ ಉತ್ಪಾದನಾ ಸಾಮರ್ಥ್ಯದಿಂದಾಗಿ ಸ್ವಯಂಪೂರ್ಣ ಘಟಕಗಳಂತೆ ಇವೆ. ಹೀಗಿರುವ ಪ್ರತಿ ಸಮುದಾಯವು ದೇಶದಲ್ಲಿ ನಿಶ್ಚಿತವಾದ ಚಟುವಟಿಕೆಯನ್ನು ಮಾಡುತ್ತಲೇ ಬಂದಿವೆ. ಇಂತಹ ಜಾತಿಗಳಲ್ಲಿ ಅವರು ನಿರ್ವಹಿಸುವ ಕಾರ್ಯಗಳಿಂದಾಗಿ ಶ್ರೇಷ್ಠ, ಮಧ್ಯಮ ಹಾಗೂ ಕನಿಷ್ಠ ಎಂದು ಗುರುತಿಸಲ್ಪಟ್ಟಿವೆ. ಹೀಗೆ ಗುರುತಿಸುವ ಸಮುದಾಯಗಳು ಕಾಲಾನಂತರದಲ್ಲಿ ಒಂದು ರೀತಿಯ ಬಿಕ್ಕಟ್ಟಿಗೆ ಒಳಗಾಗಿವೆ. ಈ ತರಹದ ಬಿಕ್ಕಟ್ಟು ಕೇವಲ ಆರ್ಥಿಕವಾಗಿರದೆ, ಸಾಂಸ್ಕೃತಿಕವಾಗಿಯೂ ಪರಂಪರೆಯಲ್ಲಿ ಮುಂದುವರೆಯುತ್ತಲೇ ಬಂದಿದೆ. ಸಮುದಾಯವೊಂದರ ಸಾಂಸ್ಕೃತಿಕ ರೂಪಗಳ ಶೋಧನೆ ವಿಶ್ಲೇಷಣೆಯ ದೃಷ್ಠಿಯಿಂದ ಮಾತ್ರವಲ್ಲದೆ ಆಯಾ ಸಮುದಾಯಗಳ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಅಭ್ಯಾಸಿಸುವ ದೃಷ್ಠಿಯಿಂದ ಕೂಡ ಅಗತ್ಯವಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಚಿತ್ರದುರ್ಗ ಜಿಲ್ಲೆಯ ಸಜ್ಜನ ಗಾಣಿಗ ಸಮುದಾಯದ ಅಧ್ಯಯನವನ್ನು ಈ ಮಹಾಪ್ರಬಂಧದಲ್ಲಿ ಕೈಗೊಳ್ಳಲಾಗಿದೆ. ಅವರ ಸಂಸ್ಕೃತಿ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನಮಾಡಲಾಗಿದೆ. ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಹಿಂದುಳಿಯುವಿಕೆಗೆ ಕಾರಣಗಳನ್ನು ತಿಳಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು ಐತಿಹ್ಯ, ಪುರಾಣ, ಶಿಷ್ಟ ಸಾಹಿತ್ಯ, ಗಾದೆಗಳು ಮತ್ತು ಒಗಟುಗಳು, ಹಾಡುಗಳು ಮಾತನಾಡುವ ಭಾಷೆ, ಮನೆ, ಊರು, ವ್ಯಾಪಕವಾಗಿ ಬಳಸುವ ಭಾಷೆಗಳನ್ನು ಅಭ್ಯಾಸಿಸಲಾಗಿದೆ.

ಸಜ್ಜನ ಗಾಣಿಗರ ಜೀವನಾವರ್ತನಾ ಹಾಗೂ ವಾರ್ಷಿಕಾವರ್ತನಾ ಆಚರಣೆಗಳನ್ನು ಸಾಮಾಜಿಕ ಜೀವನದಲ್ಲಿ ಕೌಟುಂಬಿಕ ಹಾಗೂ ವೈವಾಹಿಕ ಕ್ರಮಗಳನ್ನು ಹಾಗೂ ಪರಿವರ್ತನೆಗಳನ್ನು ಕುರಿತು ಚರ್ಚಿಸಲಾಗಿದೆ.

ಸಜ್ಜನ ಗಾಣಿಗರ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಹಾಗೂ ಮೂಲ, ಪದ ನಿಷ್ಪತ್ತಿ, ಅವರ ಧರ್ಮ ಹಾಗೂ ಚಿತ್ರದುರ್ಗದ ಬಗ್ಗೆ ಮಾಹಿತಿ ಅಥವಾ ಪರಿಚಯ ಮಾಡಲಾಗಿದೆ.

ಸಜ್ಜನ ಗಾಣಿಗರ ಸಮುದಾಯದ ಮಹಿಳೆ, ಆಕೆಗಿರುವ ಸ್ಥಾನಮಾನಗಳು ಹಬ್ಬ ಹರಿದಿನಗಳಲ್ಲಿ ಮಹಿಳೆಯರು ಹಾಗೂ ವ್ಯಾಪಾರದಲ್ಲಿ ವ್ಯವಸಾಯದಲ್ಲಿ ಹಾಗೂ ಪ್ರಮುಖ ವಿಷಯಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳುವ ಸಂದರ್ಭಗಳು ಹಾಗೂ ಸ್ವಂತ ಉದ್ಯೋಗಸ್ಥರು, ಅವರ ಸ್ಥಾನಮಾನಗಳು ಇವುಗಳನ್ನು ಚರ್ಚಿಸಲಾಗಿದೆ. ಹಾಗೂ ವಿಧವಾ ಮರುವಿವಾಹಕ್ಕೆ ಇಂದಿಗೂ ಕೂಡ ಸಜ್ಜನಗಾಣಿಗರಲ್ಲಿ ಅವಕಾಶವನ್ನು ಕೊಡದೇ ಇರುವ ಅಂಶವನ್ನು ಕುರಿತು ಚರ್ಚಿಸಲಾಗಿದೆ.

ಸಜ್ಜನಗಾಣಿಗರು ಮತ್ತು ಆಧುನಿಕತೆ ಎಂಬ ವಿಷಯದಲ್ಲಿ ಆಧುನಿಕತೆಯಿಂದ ಇವರು ಯಾವ ರೀತಿ ಪರಿವರ್ತನೆಯನ್ನು ಹೊಂದಿದ್ದಾರೆಂದು, ಗಾಣಿಗರ ವೃತ್ತಿ, ಎಣ್ಣೆ ತಯಾರಿಕೆಯ ಪರ್ಯಾಯ ವ್ಯವಸ್ಥೆ, ಬೇರೆಯವರ ಸ್ಪರ್ಧೆಗಳು, ಹೊಸ ನಮೂನೆ ಎಣ್ಣೆಗಳು, ಅವುಗಳ ಪರಿಣಾಮಗಳು, ಪ್ಯಾಕಿಂಗ್ ಸಿಸ್ಟಮ್, ಮೀಸಲಾತಿ ಸಲಹೆಗಳು ಸಾಂಸ್ಕೃತಿಕ ಪರಿವರ್ತನೆಗಳನ್ನು ತಿಳಿಸಲಾಗಿದೆ.

**ಕೆಲವು ಸಲಹೆಗಳು**

* ಸರ್ಕಾರ ಮುಖ್ಯವಾಗಿ ಇವರಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕು. ಸರ್ಕಾರದ ವತಿಯಿಂದ ಜನತಾ ಮನೆಗಳನ್ನು ಕೊಡಬೇಕು. ಈ ಸಮುದಾಯದವರಿಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿಯನ್ನು ನೀಡಬೇಕು.
* ಈ ಸಮುದಾಯದ ಕೇರಿಗಳಿಗೆ ಹತ್ತಿರವಾಗಿ ಸರ್ಕಾರ ಇವರ ಮಕ್ಕಳಿಗೆ ವಸತಿ ಶಾಲೆಗಳನ್ನು ಸ್ಥಾಪಿಸಬೇಕು. ಜೊತೆಗೆ ಕಡ್ಡಾಯವಾಗಿ ವಿಧ್ಯೆಕಲಿಯಲು ಬೇಕಾದ ಕ್ರಮ ತೆಗೆದು ಕೊಳ್ಳಬೇಕು.
* ಈ ಸಮುದಾಯದವರು ಮಕ್ಕಳನ್ನು ಬಾಲಕಾರ್ಮಿಕರಾಗಿ ವ್ಯವಸಾಯದಲ್ಲಿ ದುಡಿಯುವುದನ್ನು ತಡೆಯಬೇಕು. ಬಳಸಿಕೊಂಡವರಿಗೆ ಅವರ ಮೇಲೆ ಕ್ರಮ ತೆಗೆದುಕೊಳ್ಳಬೇಕು.
* ಶಿಕ್ಷಣವು ಉದ್ಯೋಗ ಸಂಬಂಧಿ (Job orient Course) ಶಿಕ್ಷಣ ಮಾದರಿಯನ್ನು ಕಂಪ್ಯೂಟರ್ ಶಿಕ್ಷಣವನ್ನು ನೀಡಬೇಕು.
* ಈ ಸಮುದಾಯದ ಜನಸಂಖ್ಯೆ ಹೆಚ್ಚಿರುವ ಪ್ರದೇಶಗಳಲ್ಲಿ ಈ ಸಮುದಾಯಕ್ಕೆ ಸೀಮಿತವಾಗಿ ಸಮುದಾಯ ಭವನ ಸ್ಥಾಪನೆ, ಆ ಸಮುದಾಯ ಭವನದಲ್ಲಿ ಈ ಸಮುದಾಯದ ವಯಸ್ಕರರಿಗೆ ವಯಸ್ಕರ ಶಿಕ್ಷಣ ಪದ್ಧತಿ ಜಾರಿಗೆ ತರಬೇಕು. ಮಕ್ಕಳಿಗೆ ಉಚಿತ ಕಂಪ್ಯೂಟರ್ ಶಿಕ್ಷಣ ಇತರ ಸಣ್ಣಪುಟ್ಟ ಉದ್ಯೋಗ ತರಬೇತಿ ನೀಡುವ ವ್ಯವಸ್ಥೆ ಮಾಡಬೇಕು.
* ಈ ಸಮುದಾಯದ ಜನರಿಗೆ ಜನಜಾಗೃತಿ ಕಾರ್ಯಕ್ರಮ ಮೂಲಕ ಜಾಗೃತಿಯನ್ನು ಮೂಡಿಸುವುದು, ನೈರ್ಮಲ್ಯ, ಕುಟುಂಬ ಯೋಜನೆ, ಇಂಥ ವಿಷಯಗಳ ಕುರಿತು ಜಾಗೃತಿ ಶಿಬಿರವನ್ನು ಏರ್ಪಡಿಸಬೇಕು.
* ಇವರು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ ಇವರ ಅಭಿವೃದ್ಧಿಗೆ ಸರ್ಕಾರ ಕಾರ್ಯಕ್ರಮಗಳನ್ನು ರೂಪಿಸಬೇಕು.

* ಈ ಸಮುದಾಯದ ಜನರಿಗೆ, ಆರೋಗ್ಯ ಸುಧಾರಣೆ ಕ್ರಮ ಕೈಗೊಳ್ಳಬೇಕು.
* ಸರ್ಕಾರವು ಇವರು ಬೆಳೆದ ಬೆಳೆಗಳಿಗೆ ಸರಿಯಾದ ಮಾರುಕಟ್ಟೆ ಮತ್ತು ಬೆಲೆಯನ್ನು ಒದಗಿಸಬೇಕು.
* ಈ ಸಮುದಾಯದವರು ರಾಜಕೀಯವಾಗಿ ಸ್ಪರ್ಧಿಸಲು ಅವರಿಗೆ ಕಲ್ಪಿಸಿಕೊಡಬೇಕು.
* ಈ ಸಮುದಾಯದ ಯುವಕ-ಯುವತಿಯರಿಗೆ ಸ್ವಯಂ ಉದ್ಯೋಗ ನೋಡಿಕೊಳ್ಳಲು ನೆರವು ನೀಡಬೇಕು.
* ಸಮುದಾಯದ ಮಹಿಳೆಯರಿಗೆ ಗೃಹಕೈಗಾರಿಕೆ ಸ್ಥಾಪಿಸಲು ಆರ್ಥಿಕ ಸಹಾಯ ನೀಡಬೇಕು. ಸರ್ಕಾರವು ಇವರು ತಯಾರಿಸಿದ ವಸ್ತುಗಳಿಗೆ ಮಾರುಕಟ್ಟೆ ಒದಗಿಸಬೇಕು.
* ಈ ಸಮುದಾಯದ ಜನರೆಲ್ಲರೂ ಒಳಪಂಗಡಗಳನ್ನು ಬಿಟ್ಟು ಇಡೀ ಗಾಣಿಗ ಸಮುದಾಯವೆಲ್ಲವೂ ಒಂದೇ ಎಂಬ ಭಾವನೆ ಸಂಘಟನೆಯಿಂದಾಗಬೇಕಾಗಿದೆ.

ಒಟ್ಟಾರೆ ಪ್ರಬಂಧವನ್ನು ಒಂಬತ್ತು ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ. ಮೊದಲನೆಯದು 'ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ' ಎಂದಿದೆ. ಅಧ್ಯಯನಕ್ಕಾಗಿ ತೆಗೆದುಕೊಂಡ ವಿಧಾನಗಳು, ಸಜ್ಜನ ಗಾಣಿಗರ ಬಗ್ಗೆ ನಡೆದ ಅಧ್ಯಯನದ ಸಮೀಕ್ಷೆ, ಅಧ್ಯಯನದ ರೂಪುರೇಷೆಗಳು, ಅಧ್ಯಯನದ ಮುಖ್ಯ ಉದ್ದೇಶಗಳನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಯನವು 'ಸಜ್ಜನ ಗಾಣಿಗರ ಮೂಲ' ಈ ಅಧ್ಯಾಯದಲ್ಲಿ ಗಾಣಿಗರ ಮೂಲದ ಬಗೆಗೆ, ಪದ ನಿಷ್ಪತ್ತಿ ಅವರ ಧರ್ಮ, ಚಿತ್ರದುರ್ಗದ ಒಂದು ಪರಿಚಯ, ಮೂಲದಲ್ಲಿ ಎಡ್ಗರ್ ಥರ್ಸಟನ್, ಸರ್ವಜ್ಞನ ತ್ರಿಪದಿಗಳು, ಡಾ. ಜಯಲಕ್ಷ್ಮೀ ಸೀತಾಪುರ, ವಚನ ಸಾಹಿತ್ಯದಲ್ಲಿ ಶರಣ ಗಾಣದ ಕನ್ನಪ್ಪ ಮುಂತಾದವರು ಸಜ್ಜನ ಗಾಣಿಗರ ಮೂಲ ಕುರಿತು ಹೇಳಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹಾಗೆಯೇ ಗಾಣಿಗ ಪದದ ನಿಷ್ಪತ್ತಿ, ಅವರ ಧರ್ಮ ಮುಂತಾದವುಗಳನ್ನು ಆಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯನದಲ್ಲಿ ಸಜ್ಜನ ಗಾಣಿಗರ ಸಮುದಾಯದ ಜೀವನವನ್ನು ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ಕೌಟುಂಬಿಕ ಪದ್ಧತಿ ಕುರಿತು ಚರ್ಚಿಸಲಾಗಿದೆ.

ನಾಲ್ಕನೇಯ ಅಧ್ಯಯನವು ಸಜ್ಜನ ಗಾಣಿಗ ಸಮುದಾಯದ ಆಚರಣೆಗಳು ಎಂದಿದ್ದು ಈ ಸಮುದಾಯವು ಜೀವನಾವರ್ತನದಲ್ಲಿ ಕೈಗೊಳ್ಳುವ ಪ್ರತಿಯೊಂದು ಆಚರಣೆಗಳು ಹಾಗೂ ಅವುಗಳ ಬಗೆಗಿರುವ ನಂಬಿಕೆ ಮುಂತಾದವುಗಳ ಜೊತೆಗೆ ವಾರ್ಷಿಕಾವರ್ತನದಲ್ಲಿ ನಡೆಸುವ ವಿಶಿಷ್ಟ ಆಚರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ವಿಶೇಷವಾಗಿ ಹಬ್ಬಗಳಾದ ಯುಗಾದಿ, ಶಿವರಾತ್ರಿ, ಗೌರಿ ಗಣೇಶ, ದಸರಾ, ದೀಪಾವಳಿ, ಜಾತ್ರೆ, ಉತ್ಸವ ಮುಂತಾದವುಗಳನ್ನು ಸಜ್ಜನ ಗಾಣಿಗ ಸಮುದಾಯ ಹೇಗೆ ಆಚರಿಸುತ್ತದೆ ಎಂಬುದನ್ನು ಹೇಳಲಾಗಿದೆ. ವೈವಾಹಿತ ಪದ್ಧತಿಯ ಬಗ್ಗೆ ಚರ್ಚಿಸಲಾಗಿದೆ.

ಐದನೇಯ ಅಧ್ಯಾಯದಲ್ಲಿ ಭಾಷೆ ಮತ್ತು ಸಾಹಿತ್ಯ ಎಂಬ ಅಧ್ಯಯನವಿದ್ದು, ಇದರಲ್ಲಿ ಮಾತನಾಡುವ ಭಾಷೆಗಳು, ಮನೆ, ಊರು, ವ್ಯಾಪಾರದಲ್ಲಿ ಬಳಸುವ ಭಾಷೆಗಳನ್ನು ಕುರಿತದ್ದಾಗಿದೆ. ಸಾಹಿತ್ಯದಲ್ಲಿ ಜನಪದ ಕಥೆಗಳು, ಐತಿಹ್ಯ ಪುರಾಣ, ಶಿಷ್ಟ ಸಾಹಿತ್ಯ, ಗಾದೆಗಳು, ಒಗಟುಗಳು ಮತ್ತು ಹಾಡುಗಳು ಇವುಗಳನ್ನು ಅಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಸಜ್ಜನ ಗಾಣಿಗರ ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಜೀವನ ಕುರಿತು ಚರ್ಚಿಸಲಾಗಿದೆ. ಮುಖ್ಯವಾಗಿ ಈ ಅಧ್ಯಯನವು ಅವರು ಆರ್ಥಿಕ ಶೈಕ್ಷಣಿಕ ಹಾಗೂ ರಾಜಕೀಯವಾಗಿ ಹಿಂದುಳಿಯಲು ಕಾರಣಗಳೇನು ಎಂಬುದನ್ನು ಆಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಸಜ್ಜನ ಗಾಣಿಗ ಸಮುದಾಯದ ಮಹಿಳೆ, ಮಹಿಳೆಗಿರುವ ಪಾತ್ರ, ಹಬ್ಬ ಹರಿದಿನಗಳಲ್ಲಿ ವ್ಯಾಪಾರದಲ್ಲಿ, ವ್ಯವಸಾಯದಲ್ಲಿ ನಿರ್ಣಯ ತೆಗೆದುಕೊಳ್ಳುವ ಸಂದರ್ಭಗಳು ಸ್ವಂತ ಉದ್ಯೋಗಸ್ಥರು ಹಾಗೂ ಮಹಿಳೆಯರಿಗೆ ಮರು ವಿವಾಹವಿಲ್ಲದಿರುವುದು, ಇವುಗಳನ್ನು ಆಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ.

ಎಂಟನೇಯ ಅಧ್ಯಾಯದಲ್ಲಿ ಸಜ್ಜನ ಗಾಣಿಗರು ಮತ್ತು ಆಧುನಿಕತೆ ಅಥವಾ ಆಧುನಿಕತೆ ಮತ್ತು ಗಾಣಿಗರು ಎಂದಿದ್ದು ೧. ಗಾಣಿಗರ ವೃತ್ತಿ, ಎಣ್ಣೆ ತಯಾರಿಕೆಯ ಪರ್ಯಾಯ ವ್ಯವಸ್ಥೆಗಳು, ಬೇರೆಯವರ ಸ್ಪರ್ಧೆಗಳು, ಹೊಸ ನಮೂನೆಯ ಎಣ್ಣೆಗಳು ಅವುಗಳ ಪರಿಣಾಮಗಳು, ಪ್ಯಾಕಿಂಗ್ ಸಿಸ್ಟಮ್, ಮೀಸಲಾತಿ ಸಲಹೆಗಳು ಸಾಂಸ್ಕೃತಿಕ ಬದಲಾವಣೆ ಇವುಗಳನ್ನು ಆಧಾರವಾಗಿಟ್ಟುಕೊಂಡು ಚರ್ಚಿಸಲಾಗಿದೆ.

ಒಂಬತ್ತನೆಯ ಅಧ್ಯಾಯದಲ್ಲಿ 'ಸಮಾರೋಪ' ಮತ್ತು 'ಅನುಬಂಧ'ಗಳಾಗಿದ್ದು ಪ್ರಬಂಧದ ಕೊನೆಯ ಅಧ್ಯಯನವಾಗಿದೆ. ಈ ಅಧ್ಯಾಯದಲ್ಲಿ ಕಂಡುಕೊಂಡ ಫಲಿತಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಅನುಬಂಧಗಳಲ್ಲಿ ಪ್ರಶ್ನಾವಳಿ, ಆಧಾರ ಗ್ರಂಥಗಳು, ವಕ್ತೃವಿವರ, ನಕ್ಷೆಗಳು, ರೇಖಾ ಚಿತ್ರಗಳು, ಭಾವಚಿತ್ರಗಳ ಪ್ರತಿ ಇವುಗಳನ್ನು ಸೇರಿಸಲಾಗಿದೆ.

• • •

## ೨. ಆಧಾರ ಗ್ರಂಥಗಳು


೦೧. ಈರಣ್ಣ ಚ. ಮುಳಗುಂದ., ೨೦೦೭, **ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ**, ಸೃಷ್ಟಿ ಪ್ರಕಾಶನ, ಧಾರವಾಡ.

೦೨. ಕುಮಾರ್.ಆರ್.ಬಿ., ೨೦೦೦, **ಕರ್ನಾಟಕದ ಮುದ್ದೆ ಕಂಬಾರರು**, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ (ಹಂಪಿ)ಕ್ಕೆ ಅರ್ಪಿಸಿದ ಮಹಾಪ್ರಬಂಧ.

೦೩. ಕೃಷ್ಣಯ್ಯಗೌಡ.ಎಚ್.ಆರ್., ೨೦೦೭, **ಅಭಿವೃದ್ಧಿ ಅರ್ಥಶಾಸ್ತ್ರ**, ವಿದ್ಯಾನಿಧಿ ಪ್ರಕಾಶನ, ಗದಗ.

೦೪. ತಾರಾಮತಿ.ಬಿ., ೨೦೦೭, **ಕರ್ನಾಟಕದ ಖಾಟಿಕ್ ಸಮುದಾಯ**, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪ್ರಬಂಧ.

೦೫. ನಾಯಕ್.ಎನ್.ಆರ್., ಶ್ರೀಮತಿ ಶಾಂತಿ ನಾಯಕ, (ಸಂ), ೧೯೭೬, **ಜಾನಪದ ಆಟಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೬. ಬಡಿಗೇರ.ಜಿ.ಎಲ್., ೨೦೦೧, **ಸಾಮಾಜಿಕ ಚಿಂತನೆಯ ಅಧ್ಯಯನ**, ಸಂಗಮೇಶ್ವರ ಪ್ರಕಾಶನ, ಸಂಕೇಶ್ವರ, ಬೆಳಗಾವಿ ಜಿಲ್ಲೆ.

೦೭. ಭೈರಪ್ಪ.ಕೆ., ೧೯೯೨, **ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ**, ಸುರೇಶ ಪಬ್ಲಿಕೇಶನ್ಸ್, ಗದಗ.

೦೮. ಮಾಳವಾಡ (ಸ,ಸಂ) **ಶ್ರೀ ಬಸವಣ್ಣನವರ ವಚನ ಸಂಗ್ರಹ**, ಸಾಹಿತ್ಯ ಅಕಾಡೆಮಿ, ಹೊಸದೆಹಲಿ.

೦೯. ವೃಷಭೇಂದ್ರಸ್ವಾಮಿ.ಎಸ್.ಎಂ., (ಪ್ರ.ಸಂ) ೧೯೮೭, **ಜಾನಪದ ಹಬ್ಬಗಳು,** (ಜಾನಪದ ಸಾಹಿತ್ಯ ದರ್ಶನ ಭಾಗ-೧೦), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦. ಶ್ಯಾಮರಾವ್.ಕೆ., ಕರ್ಮವೀರ ವಾರಪತ್ರಿಕೆ, ದಿ.೧೬.೯.೨೦೦೭, ಸಂಯುಕ್ತ ಕರ್ನಾಟಕ ಟ್ರಸ್ಟ್, ಬೆಂಗಳೂರು, ಪುಟ-(೧೩)

೧೧. ಶಂಕರ್‌ರಾವ್.ಚ.ನ., ೧೯೮೮, **ಸಮಾಜ ಶಾಸ್ತ್ರದ ಪ್ರಾಥಮಿಕ ತತ್ವಗಳು ಮತ್ತು ಸಾಮಾಜಿಕ ಚಿಂತನೆ,** ಜೈ ಭಾರತ್ ಪ್ರಕಾಶನ, ಮಂಗಳೂರು.

೧೨. ಶಂಕರ್‌ರಾವ್.ಚ.ನ., ೧೯೯೧, **ಭಾರತೀಯ ಸಮಾಜ**, ಜೈ ಭಾರತ್ ಪ್ರಕಾಶನ, ಮಂಗಳೂರು.

೧೩. ಶಂಕರ್‌ರಾವ್.ಚ.ನ., ೨೦೦೨, **ಸಮಕಾಲೀನ ಭಾರತೀಯ ಸಮಾಜದ ಅಧ್ಯಯನ**, ಜೈ ಭಾರತ್ ಪ್ರಕಾಶನ, ಮಂಗಳೂರು.

೧೪. ಪ್ರಿ.ಜಿ.ಬಿ. ಸಜ್ಜನ (ಪ್ರ.ಸಂ), ೨೦೦೪, **ಗಾಣಸಿರಿ** (ಸ್ಮರಣ ಸಂಚಿಕೆ) ಪ್ರಕಾಶಕರು, ಅಖಿಲ ಭಾರತ ಗಾಣಿಗರ ಸಂಘ (ರಿ) ಜಿಲ್ಲಾ ಘಟಕ ಬಿಜಾಪುರ, ಜಿಲ್ಲಾ ಗಾಣಿಗರ ಸಮಾಜದ ಸಮಾವೇಶ, ಬಿಜಾಪುರ. ಮುದ್ರಕರು:- ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗೌಗದಗೇರಿ ಓಣಿ, ಗದಗ.

೧೫. ಹೇಮಲತ.ಜಿ., ೨೦೦೬, **ಸಂಡೂರಿನ ವೀರಶೈವ ಸಮುದಾಯದ ಆಚರಣೆಗಳು**, (ಎಂ.ಫಿಲ್) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ (ಹಂಪಿ) ಸಾದರಪಡಿಸಿದ ಕಿರು ಪ್ರಬಂಧ.

• • •